ಬಸವ ಸಮಿತಿ ಸಂಶೋಧನ ಗ್ರಂಥಮಾಲೆ-೧

# ಬಸವ ಸಾಹಿತ್ಯ ದರ್ಪಣ

ಭಾಗ ೧

ಎಸ್. ಆರ್. ಗುಂಜಾಳ




ಬಸವ. ಸಮಿತಿ [illegible]ಳೂರು

೧೯೬೭

ಎಸ್. ಆರ್. ಗುಂಜಾಳ

ಜನನ—೧೯೩೩. ಜನ್ಮಸ್ಥಳ—ಕೋಳಿವಾಡ ಗ್ರಾಮ
ರವಾಡ ಜಿಲ್ಲೆ ). ಧಾರವಾಡದ ಕರ್ನಾಟಕ ಕಾಲೇಜಿನಿಂದ
ಎ. ( ೧೯೫೫ ) ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.
(೧೯೫೭) ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಧಾರವಾಡ ಆರ್.
. ಎಸ್ ಹಾಯ್‌ಸ್ಕೂಲಿನಲ್ಲಿ ಎರಡು ವರ್ಷ (೧೯೫೭-೫೯)
ಕರೆಂದೂ, ಮಂಗಳೂರು ಸರಕಾರಿ ಕಾಲೇಜಿನಲ್ಲಿ ಒಂದು
ರ್ (೧೯೫೯-೬೦) ಅಧ್ಯಾಪಕರೆಂದೂ ಸೇವೆ ಸಲ್ಲಿಸಿರುವರು.
ತರ ದಿಲ್ಲಿ ವಿಶ್ವವಿದ್ಯಾಲಯಕ್ಕೆ ಹೋಗಿ ಗ್ರಂಥಾಲ
ನದಲ್ಲಿ ಒಂದು ವರ್ಷ ತರಬೇತಿ ಪಡೆದು 'ಡಿಪ್ಲೊ
ಕ್ಷೆಯಲ್ಲಿ ಉತ್ತೀರ್ಣರಾಗಿ ಬಂದೊಡನೆಯೆ- ತಮ್ಮ
ಯಾದ ಕರ್ನಾಟಕ ಕಾಲೇಜಿನ 'ಗ್ರಂಥ ಭಂಡಾರಿ' ಎಂದು
ಮಿಸಲ್ಪಟ್ಟಿರುವರು (೧೯೬೧). ಎ
ಥಾಲಯ ವಿಜ್ಞಾನದಲ್ಲಿ ಹೆಚ್ಚಿನ ಅ
ವಿದ್ಯಾಲಯಕ್ಕೆ ಹೋಗಿ ಎಂ. ಲಿಬ್
ಲ್ಲಿ ಉತ್ತೀರ್ಣರಾಗಿ ಬಂದರು (
ತ್ತು ಸಾವಿರ ಅತ್ಯಮೂಲ್ಯ ಗ್ರಂಥಗಳ
ರವನ್ನು ಆಧುನಿಕ ಗ್ರಂಥಾಲಯ
ಪುನರ್ವ್ಯವಸ್ಥೆ ಮಾಡಿರುವರು.
ಕರ್ನಾಟಕ ವಿಶ್ವವಿದ್ಯಾಲಯದ
ಗದಲ್ಲಿ (School of Librar
ಾಪಕರೆಂದು ಸೇವೆಸಲ್ಲಿಸುತ್ತಿರು
ಪ್ರಾಧ್ಯಾಪಕರಾಗಿರುವ ಅವರ
'ಕ್ರಿಯಾ-ಜ್ಞಾನ''ಗಳ ಸುಂದ
ದು. 'ಗ್ರಂಥಾಲಯದ ಅಂತ
ವಿಜ್ಞಾನಿಗಳು' 'ಸೂಚೀಕರಣ
ೂರು ರಾಜ್ಯದಲ್ಲಿ ಗ್ರಂಥ
ಾಲಯ ಶಾಸ್ತ್ರವನ್ನು ಕುರಿತು
· ಅವರ ಅಮೂಲ್ಯ ಗ್ರಂ
ನ ದರ್ಶನ' ಎಂಬ ಮತ್ತೊಂದು
ಲ್ಲಿ ಪ್ರಕಟವಾಗಿರುವದು.
ಲ್ಪಟ್ಟ ಇನ್ನೆರಡು ಗ್ರಂಥಗಳು
ತ "ಬಸವ ಸಾಹಿತ್ಯದರ್ಪಣ
ಮತಿ, ಸಾಹಸ, ತಾಳ್ಮೆ, ಪರಿ

ED AT THE BHARAT PHOTO OFF

**ಇದೇ ಗ್ರಂಥಕರ್ತರಿಂದ**

೧. ಬಸವ ಸಾಹಿತ್ಯ ದರ್ಪಣ ಭಾಗ ೨ (ಸಿದ್ಧತೆಯಲ್ಲಿ)

೨. ಬಸವಣ್ಣನವರ ವಚನಗಳ ಶಬ್ದಾನುಕೋಶ (Concordence)
(ಸಿದ್ಧತೆಯಲ್ಲಿ)

# ಬಸವ ಸಾಹಿತ್ಯ ದರ್ಪಣ

[ಕನ್ನಡ-ತೆಲುಗು-ತಮಿಳು-ಸಂಸ್ಕೃತ-ಹಿಂದೀ-ಮರಾಠಿ-ಉರ್ದು-ಇಂಗ್ಲಿಷ್-ಫ್ರೆಂಚ್ ಭಾಷೆಗಳಲ್ಲಿ ಬಸವಣ್ಣನವರನ್ನು ಕುರಿತು ರಚಿತವಾದ ಗ್ರಂಥಗಳ ವಿವರಣಾತ್ಮಕ ಸೂಚಿ]

ಭಾಗ ೧

ಎಸ್. ಆರ್. ಗುಂಜಾಳ
ಎಂ.ಎ., ಎಂ. ಲಿಬ್.ಎಸ್‌ಸಿ.
ಗ್ರಂಥಭಂಡಾರಿ, ಕರ್ನಾಟಕ ಕಾಲೇಜ,
ಗೌರವ ಪ್ರಾಧ್ಯಾಪಕ, ಗ್ರಂಥಾಲಯ ವಿಜ್ಞಾನ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.




ಬಸವ ಸಮಿತಿ ಬೆಂಗಳೂರು

# ಅನುಕ್ರಮಣಿಕೆ

— ೦ —



---

# ಮುನ್ನುಡಿ

ನಮ್ಮ ನಾಡಿನ ಆಚಾರ್ಯಪುರುಷಪುಂಗವರಾದ ಬಸವಣ್ಣನವರ ಜೀವನವು ಒಂದು ಬಹುರೂಪದರ್ಶಕ ಯಂತ್ರ. ಯಾವ ದೃಷ್ಟಿಕೋನದಿಂದ ಈಕ್ಷಿಸಿದರೂ ಬಸವಣ್ಣನವರು ಅತ್ಯುನ್ನತ ವ್ಯಕ್ತಿಯಾಗಿ ಗೋಚರಿಸುವರು. ಕಳೆದ ಎಂಟು ಶತಮಾನಗಳ ಅವಧಿಯಲ್ಲಿ ಅವರ ತತ್ತ್ವದರ್ಶನದ ಬೆಳಕಿನಲ್ಲಿ ನಡೆದು ಜೀವನ ಸಾಫಲ್ಯವನ್ನು ಹೊಂದಿದ ಅನೇಕ ಅನುಭಾವಿಗಳು—ಪಂಡಿತರು—ತಮ್ಮ ತಮ್ಮ ಅರಿವಿನ ಅಳವಿಗೆ ನಿಲುಕಿದ ಬಸವಣ್ಣನವರ ಭಾವಚಿತ್ರವನ್ನು ಶಬ್ದಗಳಲ್ಲಿ ಹಿಡಿದಿಟ್ಟು ಗ್ರಂಥಗಳಲ್ಲಿ ಪಡಿಮೂಡಿಸಿರುವರು. ಹೀಗೆ ಮೂಡಿ ಬಂದ ಗ್ರಂಥಗಳಿಗೆ ಲೆಕ್ಕವಿಲ್ಲ. ಆದರೂ ಅವುಗಳನ್ನು ಒಮ್ಮೆ ಎಣಿಸಿ ವರ್ಣಿಸಿ ಹೇಳುವ ಪ್ರಯತ್ನವನ್ನು ಈ 'ಬಸವ ಸಾಹಿತ್ಯ ದರ್ಪಣ'ದಲ್ಲಿ ಪ್ರಪ್ರಥಮವಾಗಿ ನಮ್ಮ ಆತ್ಮೀಯರಾದ ಶ್ರೀ ಎಸ್. ಆರ್. ಗುಂಜಾಳ ಅವರು ಮಾಡಿರುವರು. ಇದರಲ್ಲಿ ಕನ್ನಡ-ತೆಲುಗು-ತಮಿಳು-ಸಂಸ್ಕೃತ - ಹಿಂದೀ-ಮರಾಠಿ - ಉರ್ದು - ಇಂಗ್ಲಿಷ್ - ಫ್ರೆಂಚ್ ಭಾಷೆಗಳಲ್ಲಿ ಒಟ್ಟಾರೆ ಪ್ರಕಟವಾದ ೪೧೫ ಗ್ರಂಥಗಳನ್ನು ಅವುಗಳ ಸಾರಾಂಶದೊಂದಿಗೆ ವಿವರಿಸಿ ತೋರಿಸಿರುವರು. 'ದರ್ಪಣ'ವನ್ನು ಅವಲೋಕಿಸಿದಾಗ ಇಷ್ಟೊಂದು ಗ್ರಂಥರಾಶಿ ಬಸವಣ್ಣನವರನ್ನುಳಿದು ಕನ್ನಡದ ಮತ್ತಾವ ವ್ಯಕ್ತಿಯ ಮೇಲೆಯೂ ರಚಿತವಾಗಿಲ್ಲ ವೆಂದು ತಿಳಿಯುವದು. ನಾಡಿನ ಮೂಲೆ ಮೂಲೆಗಳಲ್ಲಿ ಚಲ್ಲುವರಿದು ಬಿದ್ದ ಈ ಎಲ್ಲ ಗ್ರಂಥಗಳನ್ನು ಒಂದೆಡೆಗೆ ಕೂಡಿ ಹಾಕಿ ಅವುಗಳ ವಿಶೇಷ ಪರಿಚಯ ಮಾಡಿಕೊಡು ವದು ಶ್ರಮಸಾಧ್ಯವಾದ ಅಸಾಮಾನ್ಯ ಕಾರ್ಯ. ಶ್ರೀ ಗುಂಜಾಳರು ಬಹು ಪರಿಶ್ರಮ ವಹಿಸಿ, ನಾಡಿನ ಸಕಲ ನಿಟ್ಟುಗಳಲ್ಲಿ ಸಂಚರಿಸಿ, ಈ ಗುರುತರವಾದ ಕಾರ್ಯವನ್ನು ಸಮರ್ಥ ರೀತಿಯಲ್ಲಿ ನಿರ್ವಹಿಸಿರುವರು. ಈ 'ದರ್ಪಣ'ದಲ್ಲಿ ಸಂಕಲಿತವಾದ ಎಲ್ಲ ಗ್ರಂಥಗಳ ಸ್ಥೂಲ-ಸೂಕ್ಷ್ಮ ರೂಪಗಳ ರೇಖಾಚಿತ್ರವನ್ನು ಬರೆದಿರುವರು. ಈ ಎಲ್ಲ ಚಿತ್ರಗಳ ಮೇಲೆ ಕಣ್ಣಾಡಿಸಲು ೪-೬ ತಾಸುಗಳಾದರೆ ಸಾಕಾಗಬಹುದು. ಆದರೆ ಇಷ್ಟು ಅಲ್ಪ ಸಮಯದಲ್ಲಿ ಓದಿ ಮುಗಿಸುವ ಗ್ರಂಥವಿದಲ್ಲ. ಓದುಗನ ಸೂಕ್ಷ್ಮದೃಷ್ಟಿ ಯನ್ನು ಸೆಳೆದಿಟ್ಟು ಮುಂದಿನ ಮಹತ್ಕಾರ್ಯಕ್ಕೆ ಅಣಿಗೊಳಿಸುವ ಅತ್ಯಮೂಲ್ಯ ಗ್ರಂಥಸೂಚಿಯಿದು. ಇದನ್ನು ಅವಲೋಕಿಸಿದ ಅನಂತರ ಮನದಲ್ಲಿ ಹೊಳೆದ ಕೆಲವು ವಿಚಾರಗಳನ್ನಿಲ್ಲಿ ನಾವು ಇಡಬಯಸುತ್ತೇವೆ:

೧. 'ದರ್ಪಣ'ದಲ್ಲಿ ವಿವರಿಸಿದ ಗ್ರಂಥಗಳೆಲ್ಲವೂ ಒಂದೆಡೆಗೆ ನೋಡಲು ಸಿಗುವ ದಿಲ್ಲ. ಅವೆಲ್ಲವುಗಳನ್ನು ಒಂದೆಡೆಗೆ ಸಂಗ್ರಹಿಸಿಟ್ಟು ಸಂಶೋಧಕರ ಅವಲೋಕನ-ಅಭ್ಯಾಸಗಳಿಗಾಗಿ ಅನುವು ಮಾಡಿಕೊಡಬೇಕು.

೨. ಇದರಲ್ಲಿ ವರ್ಣಿಸಿದ ನೂರಾರು ತಾಳೆಗರಿ ಗ್ರಂಥಗಳು ಅಜ್ಜಿನ ಮನೆಯನ್ನು ಕಾಣದೆ ಕತ್ತಲೆಯ ಕೋಣೆಗಳಲ್ಲಿ, ದೇವರ ಜಗುಲಿಗಳ ಮೇಲೆ ಹುಳುಗಳಿಗೆ ಆಹಾರವಾಗಿ ಉಳಿದಿವೆ. ಅಂಥವುಗಳನ್ನು ಸಂಶೋಧಿಸಿ, ಸಂಸ್ಕರಿಸಿ, ಪಾಠಾಂತರಗಳೊಂದಿಗೆ ಸಂಪಾದಿಸಿ ಪ್ರಕಟಿಸುವದು ಅತ್ಯವಶ್ಯವಾಗಿದೆ. ದರ್ಪಣದಲ್ಲಿ ವರ್ಣಿಸಿದ 'ಬಸವಲಿಂಗ ಮಹಿಮಾರ್ಣವ ಮಹಾಪುರಾಣಂ' (ಚಂಪೂ), 'ಬಸವ ಶಿಖಾಮಣಿ ಕಾವ್ಯ'(ಸಾಂಗತ್ಯ), 'ಬಸವ ಸಂಪಾದನೆ'(ಸಾಂಗತ್ಯ), 'ಬಸವೇಶ್ವರ ದೇವರ ಪುರಾಣದ ಕಥಾಸಾಗರ'(ಗದ್ಯಕಥೆ), 'ಬಸವೇಶ್ವರನ ಕಾವ್ಯ'(ಸಾಂಗತ್ಯ), 'ಭಕ್ತಿರಸ ಸೋನೆ'(ಸಾಂಗತ್ಯ), 'ಬಸವ ಪುರಾಣ'(ಸಂಸ್ಕೃತ-ಶಂಕರ ಕವಿ ಕೃತ) ಮುಂತಾದ ಕಾವ್ಯಗಳು ಇನ್ನೂ ಮುದ್ರಣವಾಗದಿರುವದು ಅತ್ಯಂತ ಬೃಹತ್ ಶೋಚನೀಯ ಸಂಗತಿ. ಇವೆಲ್ಲ ಅಪ್ರಕಟಿತ ಕಾವ್ಯಗಳು ಶುದ್ಧರೂಪದಲ್ಲಿ ಪ್ರಕಟ ವಾಗುವದು ಬಸವಣ್ಣನವರ ಜೀವನ ಚರಿತ್ರೆಯ ದೃಷ್ಟಿಯಿಂದ ಅತ್ಯವಶ್ಯವಾಗಿದೆ.

೩. ಇನ್ನು ಪ್ರಕಟಿತ ಗ್ರಂಥಗಳಲ್ಲಿ ಕೆಲವು ಬಹು ಅಮೂಲ್ಯವಾಗಿದ್ದು ಏನಕೇನ ಕಾರಣದಿಂದ ಪುನರ್ಮುದ್ರಣವಾಗಿಲ್ಲ. ಇದರಿಂದ ಬಸವಣ್ಣನವರ ಜೀವನದ ಅಂತರಂಗವನ್ನರಿಯಬೇಕೆನ್ನುವವರಿಗೆ ಈ ಗ್ರಂಥಗಳ ಅನುಪಲಬ್ಧತೆಯಿಂದಾಗಿ ತುಂಬಾ ಅಡ್ಡಿಯುಂಟಾಗುವದು ಸ್ವಾಭಾವಿಕ. ಈ ತೊಂದರೆಯನ್ನು ಹೋಗಲಾಡಿಸಲು ಇಂತಹ ಮಹತ್ವದ ಗ್ರಂಥಗಳ ಪರಿಷ್ಕೃತ ಪುನರ್ಮುದ್ರಣಗಳನ್ನು ಪ್ರಕಟಿಸಿ ಪಂಡಿತ-ಪಾಮರರಿಗೆಲ್ಲ ಸುಲಭ ಬೆಲೆಯಲ್ಲಿ ಎಟುಕುವಂತೆ ಮಾಡುವದು ಯಥಾಯೋಗ್ಯವಾಗಿದೆ.

೪. ಈ 'ದರ್ಪಣ'ದ ಸದ್ಯದ ಲಿಪಿ ಮತ್ತು ಭಾಷೆ ಕನ್ನಡವಾದರೂ ಅದರಲ್ಲಿ ವರ್ಣಿಸಲ್ಪಟ್ಟ ಗ್ರಂಥಗಳು ಒಟ್ಟು ಒಂಬತ್ತು ಭಾಷೆಗಳಲ್ಲಿ ರಚಿತವಾದವುಗಳು. ಕನ್ನಡ ವಾಚಕರಿಗೆ ಈ ದರ್ಪಣ ಅವಶ್ಯವಾಗಿರುವಂತೆ ಆ ಉಳಿದ ಎಂಟು ಭಾಷೆಗಳ ಓದುಗರಿಗೂ ಅತ್ಯವಶ್ಯವಾಗಿದೆ. ಅದೇಕೆ? ಭಾರತದ ಹದಿನಾಲ್ಕು ಅಧಿಕೃತ ಭಾಷೆಗಳವರಿಗೂ, ಜಗತ್ತಿನ ಪ್ರಮುಖ ಭಾಷೆಗಳವರಿಗೂ ಆ ಆ ಭಾಷೆಗಳಲ್ಲಿ ಈ 'ದರ್ಪಣ' ದೊರೆಯಬೇಕಾದುದು ಅತ್ಯಗತ್ಯ. ಅಂದರೆ ಪ್ರತಿಯೊಬ್ಬ ಓದುಗನಿಗೆ ಬಸವ ಸಾಹಿತ್ಯದ ಸಮಗ್ರ ಕಲ್ಪನೆಯುಂಟಾಗಿ ಬಸವಣ್ಣನವರ ಮೇಲೆ ನವೀನ ಸಾಹಿತ್ಯ ರಚನೆಗೆ ಸಹಾಯವಾಗುವದು. ಕಾರಣ ಆದಷ್ಟು ಬೇಗ 'ದರ್ಪಣ'ದ ಅನುವಾದವನ್ನು ಇತರ ಭಾಷೆಗಳಲ್ಲಿ ಮಾಡುವದು ಯಥೋಚಿತವಾಗಿದೆ.

೫. ಬಸವಣ್ಣನವರನ್ನು ಕುರಿತು ಇನ್ನು ಮುಂದೆಯೂ ಅನೇಕ ಗ್ರಂಥಗಳು ಪ್ರಕಟವಾಗುತ್ತವೆ. 'ದರ್ಪಣ'ದ ಪ್ರಸ್ತುತ ಆವೃತ್ತಿಯಲ್ಲಿ ಶ್ರೀ ಗುಂಜಾಳ ಅವರ ಪ್ರತ್ಯಕ್ಷಾವಲೋಕನಕ್ಕೆ ದೊರೆಯದ ಗ್ರಂಥಗಳು ಕಾಲಾನಂತರ ಸಿಗುವ ಸಂಭವವಿದೆ.

ಹೀಗೆ ಹೊಸದಾಗಿ ಪ್ರಕಟವಾದ, ಪ್ರತ್ಯಕ್ಷಾವಲೋಕನಕ್ಕೆ ಸಿಕ್ಕ ಎಲ್ಲ ಗ್ರಂಥಗಳ ವಿವರಣೆಯನ್ನು ಈ 'ದರ್ಪಣ'ದಲ್ಲಿ ಸೇರಿಸಿ ಕಾಲಕಾಲಕ್ಕೆ ತಿದ್ದಿಬೆಳೆಸಿದ ಹೊಸ ಆವೃತ್ತಿಯನ್ನು ಪ್ರಕಟಿಸುತ್ತ ಹೋಗುವದವಶ್ಯ. ಇದರಿಂದ ಈ 'ದರ್ಪಣ'ದ ನಾವೀನ್ಯತೆಯನ್ನು ಕಾಯ್ದುಕೊಂಡು ಹೋದಂತಾಗುವದು.

ಮೇಲೆ ಹೇಳಿದ ಕೆಲವು ವಿಚಾರಗಳನ್ನು ಆಚಾರದಲ್ಲಿ ತರಲು 'ಬಸವ-ಸಮಿತಿ'ಯೇ ಮುಂದಾಗಬೇಕೆಂಬ ಸದಿಚ್ಛೆಯಿದೆಯಾದರೂ, ಸಮಿತಿಗೆ ಇದೆಲ್ಲವೂ ಸಾಧ್ಯವಾಗಲಿಕ್ಕಿಲ್ಲ. ತನ್ನ ಕಾರ್ಯ ವ್ಯಾಪ್ತಿಗೊಳಪಟ್ಟ ಯೋಜನೆಗಳನ್ನು 'ಬಸವ-ಸಮಿತಿ' ನೆರವೇರಿಸಲು ಸದಾಸಿದ್ಧವಾಗಿದೆ; ಮತ್ತು ಕಾರ್ಯೋನ್ಮುಖವಾಗಿದೆ. ಇನ್ನೂ ತಾಳೆಗರಿಯ ರೂಪದಲ್ಲಿರುವ ಮೇಲೆ ಹೇಳಿದ ಮಹತ್ವದ ಮಹಾಕಾವ್ಯಗಳನ್ನು ಸಂಸ್ಕರಿಸಿ ಪಾಠಾಂತರಗಳೊಂದಿಗೆ ಪಂಡಿತಮಾನ್ಯವಾಗುವಂತೆ ಶುದ್ಧರೂಪದಲ್ಲಿ ಪ್ರಕಟಿಸುವ ಹೊಣೆಯನ್ನು 'ಬಸವ ಸಮಿತಿ'ಗಿಂತ ಮೈಸೂರು, ಬೆಂಗಳೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯುಗಳು ಹೊತ್ತುಕೊಳ್ಳುವದು ಹೆಚ್ಚು ಯೋಗ್ಯವೂ ವಿಹಿತವೂ ಆಗಿದೆ. ಈ ಹೊಣೆ ಅವುಗಳಿಗೆ ಭಾರವಲ್ಲ; ಭೂಷಣ.

ಬಸವಣ್ಣನವರನ್ನು ಕುರಿತು ರಚಿತವಾದ ಸಾಹಿತ್ಯಗಳನ್ನೆಲ್ಲ ಸಂಗ್ರಹಿಸಿಟ್ಟ 'ಬಸವ ಸಾಹಿತ್ಯ ಗ್ರಂಥಭಂಡಾರ'ಗಳನ್ನು ನಾಡಿನ ಪ್ರಮುಖ ನಗರಗಳಲ್ಲಿ ತೆರೆದು ಬಸವಣ್ಣನವರ ಜೀವನವನ್ನು ವಿವಿಧ ದೃಷ್ಟಿಕೋನಗಳಿಂದ ಅಭ್ಯಸಿಸಿ ನವೀನ ಗ್ರಂಥರಚನೆ ಮಾಡಬೇಕೆನ್ನುವ ವಿದ್ವಾಂಸರಿಗೆ ಅನುವು ಮಾಡಿಕೊಡಬೇಕೆಂಬ 'ಯೋಜನೆ'ಯನ್ನು ಸಹ 'ಬಸವ ಸಮಿತಿ' ತನ್ನ ಮುಂದಿರಿಸಿಕೊಂಡಿದೆ. ಈ ಬಗೆಯ ಅನುಕೂಲತೆಗಳನ್ನೊದಗಿಸುವ ಸಂಘ-ಸಂಸ್ಥೆಗಳಿಗೆ, ಕಾರ್ಯಮಾಡುವ ವಿದ್ವಾಂಸರಿಗೆ ಸಾಧ್ಯವಿದ್ದ ಸಹಾಯ ಸಹಕಾರಗಳನ್ನು ಒದಗಿಸಿಕೊಡಲು 'ಸಮಿತಿ' ಯತ್ನಿಸುವದು. ಇದೇ ದಿಶೆಯಲ್ಲಿ ವಿಶ್ವವಿದ್ಯಾನಿಲಯಗಳು, ಸಂಶೋಧನ ಸಂಸ್ಥೆಗಳು ತಮ್ಮ ಸಹಾಯ-ಸಹಕಾರಗಳ ಹಸ್ತಗಳನ್ನು ಚಾಚಲು ಮುಂದಾಗಬೇಕು.

ಈ 'ದರ್ಪಣ'ದಲ್ಲಿ ಕಾಣಸಿಗದ ಇನ್ನೂ ಎಷ್ಟೋ ಹಳೆಯ ಕಾವ್ಯಗಳು ಯಾರ-ಯಾರಲ್ಲೋ ಇದ್ದಿರಬಹುದು. ಅಂತವರು ಶ್ರೀ ಗುಂಜಾಳ ಅವರಿಗೆ ನೇರವಾಗಿ ಅಥವಾ ಕಾಗದದ ಮೂಲಕ ತಿಳಿಸಿ ಅವುಗಳ ವಿವರಗಳು ಈ 'ದರ್ಪಣ'ದ ಮುಂದಿನ ಆವೃತ್ತಿಯಲ್ಲಿ ಬರುವಂತೆ ಸಹಕರಿಸಬೇಕೆಂದು ನಾವು ಈ ಮೂಲಕ-ಜನತೆಯಲ್ಲಿ ಕಳಕಳಿಯಿಂದ ಬಿನ್ನಹ ಮಾಡಿಕೊಳ್ಳುತ್ತೇವೆ.

ಈ 'ದರ್ಪಣ' ಪ್ರಥಮ ಭಾಗ. ಇದರಲ್ಲಿ ಬಸವಣ್ಣನವರನ್ನು ಕುರಿತಾದ ಕೇವಲ ಗ್ರಂಥಗಳ ವರ್ಣನೆ ಮಾಡಲ್ಪಟ್ಟಿದೆ. ಇದರ ದ್ವಿತೀಯ ಭಾಗದಲ್ಲಿ ವಿವಿಧ

ಭಾಷೆಗಳಲ್ಲಿಯ ಪ್ರಮುಖ ಪತ್ರಿಕೆಗಳಲ್ಲಿ ಬಸವಣ್ಣನವರನ್ನು ಕುರಿತು ಪ್ರಕಟವಾದ ಸಂಶೋಧನಾತ್ಮಕ ಲೇಖನಗಳನ್ನು ಸಾರಾಂಶದೊಂದಿಗೆ ಸಂಗ್ರಹಿಸಿ ವಿದ್ವನ್ಮಣಿಗಳ ಅಭ್ಯಾಸಕ್ಕೆ ಅನುಕೂಲಮಾಡಿಕೊಡುವ ವಿಚಾರವಿದೆ. ಶ್ರೀ. ಎಸ್. ಆರ್. ಗುಂಜಾಳ ಅವರು ಈ ಕಾರ್ಯವನ್ನು ನಿರ್ವಹಿಸಿಕೊಡುವ ಭಾರವನ್ನು ಹೊತ್ತುಕೊಂಡಿರುವರು. ಅದು ಸಿದ್ಧವಾಗಲು ಇನ್ನೂ ಕೆಲವು ಕಾಲ ಹಿಡಿಯಬಹುದು.

ಗೀತೆ, ಉಪನಿಷತ್ತು, ವೇದ, ಬೈಬಲ್ ಇತ್ಯಾದಿ ಗ್ರಂಥಗಳಿಗೆ ಶಬ್ದಾನು-ಕೋಶಗಳು (Concordence) ಸಿದ್ಧವಾಗಿವೆ. ಅವು ಪಂಡಿತರಿಗೆ ಸಂಶೋಧನ ಕಾರ್ಯ-ದಲ್ಲಿ ಅತ್ಯಂತ ಉಪಯೋಗ ಬೀಳುತ್ತಿರುವದು ಸರ್ವಶೃತವಿದೆ. ಇದೇ ಬಗೆಯಲ್ಲಿ ಬಸವಣ್ಣನವರ ವಚನಗಳಿಗೆ ಒಂದು ಸಮಗ್ರ ಶಬ್ದಾನುಕೋಶವನ್ನು ಸಂದರ್ಭ ವಾಕ್ಯಗಳೊಂದಿಗೆ ಸಿದ್ಧಪಡಿಸುವ ಕಾರ್ಯವನ್ನೂ ಶ್ರೀ ಗುಂಜಾಳ ಅವರೇ ವಹಿಸಿಕೊಂಡು ಅರ್ಧದಷ್ಟು ಈಗಾಗಲೆ ಮುಗಿಸಿರುವರು. ಅದು ಇನ್ನು ಆರೆಂಟು ತಿಂಗಳಲ್ಲಿ ಅಚ್ಚಿಗಾಗಿ ಸಿದ್ಧವಾಗುವ ನಿರೀಕ್ಷೆಯಿದೆ. ಈ ಎಲ್ಲ ಮಹತ್ವದ ಕೆಲಸಗಳನ್ನು ಬಹು ಶ್ರದ್ಧೆವಹಿಸಿ ಶ್ರೀ ಗುಂಜಾಳ ಅವರು ಬಸವ ಸಮಿತಿಗಾಗಿ ಮಾಡಿಕೊಡುತ್ತಿರುವದು ನಮಗೆ ಬಹು ಹೆಮ್ಮೆಯನ್ನುಂಟುಮಾಡಿದೆ. ಅವರೀಕಾರ್ಯದಲ್ಲಿ ಪರಿಪೂರ್ಣ ಸಿದ್ಧಿಯುಂಟಾಗು-ವಂತೆ ಮಹಾತ್ಮರಾದ ಶ್ರೀ ಬಸವಣ್ಣನವರು ಅವರಿಗೆ ಆಯುರಾರೋಗ್ಯಾದಿಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ. 'ಬಸವ ಸಾಹಿತ್ಯ ದರ್ಪಣ'ದ ಪ್ರಸ್ತುತ ಭಾಗವನ್ನು ಸಿದ್ಧಪಡಿಸಿ 'ಬಸವ ಸಮಿತಿ'ಯ ವತಿಯಿಂದ ಪ್ರಕಟ ಪಡಿಸಲು ಅನುಮತಿಯನ್ನಿತ್ತುದಕ್ಕಾಗಿ ಸಮಿತಿಯ ಪರವಾಗಿ ಅವರಿಗೆ ಹಾರ್ದಿಕ ಧನ್ಯವಾದ-ಗಳನ್ನರ್ಪಿಸುತ್ತೇವೆ.

ಬೆಂಗಳೂರು
೨—೭—೧೯೬೭

ಬಿ. ಡಿ. ಜತ್ತಿ
ಅಧ್ಯಕ್ಷರು, ಬಸವ ಸಮಿತಿ

# ಪ್ರಸ್ತಾವನೆ

ಬಸವಣ್ಣನವರು ಸಮಸ್ತ ಮಾನವ ಕುಲಕೋಟಿಯ ಮಾರ್ಗದರ್ಶಕರು. ಧರ್ಮದೀಪಕರಾಗಿ, ಹಿರಿಯ ಅನುಭಾವಿಗಳಾಗಿ, ರಾಜಕೀಯ ನೇತಾರರಾಗಿ, ಸಮಾಜೋದ್ಧಾರಕರಾಗಿ ಜನಜೀವನವನ್ನು ತಿದ್ದಿ ತೀಡಿದವರು. ಕಳೆದ ಎಂಟುನೂರು ವರುಷಗಳಿಂದ ಪರಿವರ್ತಿಸುತ್ತ ಬಂದ ಅವರ ಪ್ರಭಾವದಿಂದ ಪ್ರೇರಿತರಾಗಿ ಅನೇಕ ಅನುಭಾವಿಗಳು, ಕವಿಗಳು, ಸಂಶೋಧಕರು ಅವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಕುರಿತು ವಿಪುಲ ಗ್ರಂಥರಚನೆ ಮಾಡಿದ್ದಾರೆ. ಬೃಹದಾಕಾರದಲ್ಲಿ ಬೆಳೆದು ನಿಂತ ಅವನ್ನೆಲ್ಲವನ್ನು ಅಭ್ಯಸಿಸಿ ಪರಿಚಯಾತ್ಮಕ ಸೂಚಿಯನ್ನು ಸಿದ್ಧಪಡಿಸಿ ಸಂಶೋಧಕರ ಅವಗಾಹನೆಗೆ ತಂದು ಕೊಡುವದು ಅವಶ್ಯವೆಂದು ಬಗೆದೆವು. ಅದರ ಫಲ ಪ್ರಸ್ತುತ **'ಬಸವ ಸಾಹಿತ್ಯದರ್ಪಣ'.**

ಈ 'ದರ್ಪಣ'ದ ಉದ್ದೇಶ ಬಸವಣ್ಣ-ನಿರ್ಮಿತ ಮತ್ತು ಬಸವಣ್ಣನವರನ್ನು ಕುರಿತ ಸಕಲಭಾಷಾ ಪ್ರಕಟಿತ ಹಾಗು ಅಪ್ರಕಟಿತ, ಗ್ರಂಥ ಮತ್ತು ಲೇಖನರೂಪದ ಸಾಹಿತ್ಯವನ್ನೆಲ್ಲ ಪರಿಚಯಾತ್ಮಕ ಸೂಚೀರೂಪದಲ್ಲಿ ಒಂದೆಡೆಗೆ ಸಂಕಲಿಸಿ ಇಲ್ಲಿ ಕೊಡುವುದಾಗಿದೆ. ಈ ಪ್ರಥಮ ಭಾಗದಲ್ಲಿ ಕೇವಲ ಗ್ರಂಥಗಳ ಬಗೆಗೆ ವಿಶೇಷ ಗಮನಕೊಡಲಾಗಿದೆ. ದ್ವಿತೀಯ ಭಾಗದಲ್ಲಿ ಸರ್ವಲೇಖನಗಳ ಪರಿಚಯವನ್ನು ಸಂಕಲಿಸಿ ಕೊಡಬೇಕೆಂಬ ಯೋಜನೆ ಇದೆ.

ಇದರಲ್ಲಿ ೪೧೫ ಗ್ರಂಥಗಳ ಪರಿಚಯುವನ್ನು ಸಂಗ್ರಹಿಸಲಾಗಿದೆ. ಪ್ರತಿಯೊಂದು ಗ್ರಂಥದ ಶಿರೋನಾಮ, ಪ್ರಭೇದ, ಗ್ರಂಥ ಕರ್ತೃವಿನ ಹೆಸರು, ಅವನು ಜೀವಿಸಿದ ಕಾಲ, ಅನುವಾದಕ–ಸಂಪಾದಕ–ಟೀಕಾಕಾರ–ಇವರ ಹೆಸರು ಮತ್ತು ಜೀವನಕಾಲ, ಗ್ರಂಥದ ಶಾರೀರಕ ಸಾಮುಗ್ರಿ, ಅಳತೆ, ಪುಟ–ಪತ್ರಗಳು, ಪ್ರತಿ ಪುಟದಲ್ಲಿಯ ಒಟ್ಟು ಸಾಲುಗಳು, ಪ್ರತಿಯೊಂದು ಸಾಲಿನಲ್ಲಿರುವ ಅಕ್ಷರಗಳು, ಗ್ರಂಥಪ್ರಕಟವಾದ ಸ್ಥಳ-ಮಿತಿ, ಪ್ರಕಾಶಕ, ಬೆಲೆ, ಮಾಲೆ, ಕ್ರಮಾಂಕ, ಗ್ರಂಥಸಾರ, ಪೂರಕ ವಾಙ್ಮಯ ದರ್ಶಕ, ಆಕರ–ಇತ್ಯಾದಿ ಸಂಗತಿಗಳನ್ನು ವಿವರಿಸಲಾಗಿದೆ:

## ೧. ಗ್ರಂಥ:

ಬಸವಣ್ಣನವರಿಂದ ರಚಿತವಾದ ಮತ್ತು ಬಸವಣ್ಣನವರನ್ನು ಕುರಿತು ಬರೆದ ಸಕಲ ಗ್ರಂಥಗಳ ಶಿರೋನಾಮಗಳನ್ನು ಮೂಲದಲ್ಲಿದ್ದಂತೆಯೇ ಎತ್ತಿಕೊಂಡು ವರ್ಣಾನುಕ್ರಮದಲ್ಲಿ ಜೋಡಿಸಲಾಗಿದೆ. ಎಷ್ಟೋ ಹಸ್ತಪ್ರತಿಗಳಲ್ಲಿ ಒಂದೇ ಗ್ರಂಥಕ್ಕೆ ಭಿನ್ನ ಭಿನ್ನ ಶಿರೋನಾಮಗಳಿರುವದು ಕಂಡುಬಂದಿದೆ. ಅಂಥ ಸಮಯದಲ್ಲಿ

'ನೋಡು' ಎಂಬ ಅಂತರವಿಷಯೀ ದರ್ಶಕದಿಂದ ಭಿನ್ನಶಿರೋನಾಮಗಳ ನಿರ್ದೇಶನ ಮಾಡಲಾಗಿದೆ. ಕೆಲವುಸಲ ಅಪ್ರಕಟಿತ ಹಸ್ತಪ್ರತಿಗಳಲ್ಲಿ ವ್ಯತ್ಯಾಸವಾಗಿ ಕಂಡು ಬಂದ ಶಿರೋನಾಮಗಳಲ್ಲಿ ನಮಗೆ ಸರಿಯೆನಿಸಿದುದನ್ನು ಆಯ್ದುಕೊಂಡು ಉಳಿದವು-ಗಳನ್ನು 'ಸಾರಾಂಶ' ವಿಭಾಗದಲ್ಲಿ ಕಾಣಿಸಿರುವೆವು. ಹಲವು ಸಂದರ್ಭಗಳಲ್ಲಿ ಪ್ರಕ-ಟಿತ ಗ್ರಂಥದ ಪ್ರಥಮ ಆವೃತ್ತಿಯ ಶಿರೋನಾಮವು ಮುಂದಿನ ತಿದ್ದಿದ ಆವೃತ್ತಿ-ಗಳಲ್ಲಿ ಬದಲಾವಣೆಯಾದುದುಂಟು. ಉದಾ : ಶ್ರೀ ಗ. ಸ. ಹಾಲಪ್ಪನವರ 'ಸಮಾ ಜೋದ್ಧಾರಕ ಬಸವಣ್ಣ' ಎಂಬ ಗ್ರಂಥವು ದ್ವಿತೀಯ ಆವೃತ್ತಿಯಲ್ಲಿ 'ವಿಶ್ವಮಾನವ ಬಸವಣ್ಣ' ಎಂಬ ಶಿರೋನಾಮವನ್ನು ತಳೆದು ಪ್ರಕಟವಾಗಿದೆ. ಆಗಲೂ ಸಹ ಅಂತರವಿಷಯೀ ದರ್ಶಕದಿಂದ ಸೂಚನೆಮಾಡಲಾಗಿದೆ.

**೨. ಪ್ರಭೇದ :**

ಇಲ್ಲಿ ಗದ್ಯ, ವಚನ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ ದ್ವಿಪದಿ, ಶ್ಲೋಕ, ಚಂಪೂ, ನಾಮಾವಳಿ, ಹಾಡು, ಕಥೆ, ಕಾದಂಬರಿ, ಕಾವ್ಯ, ನಾಟಕ, ಟೀಕೆ, ಚರಿತ್ರೆ ಇತ್ಯಾದಿ ಪ್ರಭೇದಗಳನ್ನು ಸೂಚಿಸಲಾಗಿದೆ. ಅದೇ ಸಾಲಿನಲ್ಲಿ ಗ್ರಂಥದಲ್ಲಿಯ ಒಟ್ಟು ಅಧ್ಯಾಯ-ಸಂಧಿ-ಪ್ರಕರಣ, ಪದ-ನುಡಿ-ಶ್ಲೋಕ-ಗಳ ಸಂಖ್ಯೆಯನ್ನು ಕೊಡ ಲಾಗಿದೆ.

**೩. ಕರ್ತೃ :**

ಗ್ರಂಥವನ್ನು ರಚಿಸಿದ ಕವಿ, ಲೇಖಕರ ಹೆಸರುಗಳು ಈ ವಿಭಾಗದಲ್ಲಿ ಬರುತ್ತವೆ. ಪ್ರಾರಂಭದಲ್ಲಿ ಕರ್ತೃವಿನ **ಅಡ್ಡಹೆಸರನ್ನು** (surname) ತೆಗೆದುಕೊಂಡು ಕಂಸಿ-ನಲ್ಲಿ ಲೇಖಕನ ಹೆಸರು, ಅವನ ತಂದೆಯ ಹೆಸರುಗಳನ್ನು ಸಾಮಾನ್ಯವಾಗಿ ಕೊಟ್ಟಿ-ರುವೆವು. ಉದಾ :

**ಹಳಕಟ್ಟಿ** (ಫಕ್ಕೀರಪ್ಪ ಗುರುಬಸಪ್ಪ).

ಲೇಖಕನು ತನ್ನ ನಿಜನಾಮ ಅಥವಾ ಅಂಕಿತನಾಮದಲ್ಲಿ ಪ್ರಸಿದ್ಧನಾಗಿದ್ದರೆ ಅದನ್ನೇ ಪ್ರಾರಂಭದಲ್ಲಿ ಬಳಸಿಕೊಂಡು ತಂದೆ, ಊರು ಅಥವಾ ಅಡ್ಡಹೆಸರುಗಳನ್ನು ಕಂಸಿನಲ್ಲಿ ಕೊಟ್ಟಿರುವೆವು. ಉದಾ :

**ಶ್ರೀನಿವಾಸಮೂರ್ತಿ** (ಎಂ. ಆರ್).

**ಕೃಷ್ಣರಾಯ** (ಅರಕಲಗೂಡು ನರಸಿಂಗರಾವು).

ಹೀಗೆ ಎತ್ತಿಕೊಂಡ ಕರ್ತೃವಿನ ಹೆಸರನ್ನು ದರ್ಪಣದ ಆದ್ಯಂತವಾಗಿ ಬಳಸಿ-ಕೊಂಡಿರುವೆವು.

ಕೆಲವು ಲೇಖಕರು ತಮ್ಮ ಅಂಕಿತನಾಮಗಳನ್ನು ಮರೆಮಾಡಿ ಗುಪ್ತನಾಮಗಳಲ್ಲಿ ಗ್ರಂಥರಚನೆ ಮಾಡಿದುದುಂಟು. ಗುಪ್ತನಾಮವನ್ನು ಅಂಕಿತನಾಮದಿಂದ ಬೇರ್ಪಡಿಸುವದಕ್ಕಾಗಿ ಅದರ ಮುಂದೆ **'ಗು. ನಾ.'** ಎಂದು ದಪ್ಪಕ್ಷರಗಳಿಂದ ಸೂಚಿಸಲಾಗಿದೆ. ಉದಾ :

ವಿಹಾರಿ, **ಗು. ನಾ.**

**೪. ಕರ್ತೃಜೀವನಕಾಲ :**

ಲೇಖಕನ–ಕವಿಯ ಜನನ–ಮರಣಗಳ ದಿನಾಂಕಗಳನ್ನು ದೊರಕಿಸುವದೊಂದು ಮಹಾ ಸಮಸ್ಯೆ. ಪ್ರಾಚೀನ ಗ್ರಂಥಕರ್ತೃಗಳ ವಿಷಯದಲ್ಲಿ ಇದು ಇನ್ನೂ ಜಟಿಲ. ಈಗ ಆರ್. ನರಸಿಂಹಾಚಾರ್ಯರ 'ಕರ್ಣಾಟಕ ಕವಿಚರಿತೆ'ಯ ಮೂರುಭಾಗಗಳನ್ನೇ ಆಧಾರವಾಗಿಟ್ಟುಕೊಂಡಿರುವೆವು. ಆರ್. ನರಸಿಂಹಾಚಾರ್ಯರು ನಿರ್ಣಯಿಸಿದ ಕಾಲ ಹೊಸ ಸಂಶೋಧನೆಗಳಿಂದ ವ್ಯತ್ಯಾಸಗೊಂಡಿದ್ದರೆ ನಮಗೆ ಉಚಿತವಾದುದನ್ನೇ ಎತ್ತಿಕೊಂಡಿರುವೆವು. ಕೆಲವು ಸಲ 'ಸುಮಾರು' ಎಂಬರ್ಥದ 'ಸು' ಎಂಬಕ್ಷರವನ್ನು ಬಳಸಿರುವೆವು. ಕಾಲ ಏನೊಂದೂ ನಿಶ್ಚಯವಾಗಿರದಿದ್ದಲ್ಲಿ ಉಪಾಯಗಾಣದೆ ಸೂಚಿಸದೇ ಬಿಟ್ಟಿರುವೆವು.

ಆಧುನಿಕ ಲೇಖಕರ ಕಾಲವನ್ನು ನಿರ್ಣಯಿಸುವಾಗ ಮುಖ್ಯವಾಗಿ ಶ್ರೀ ವೆಂಕಟೇಶ ಸಾಂಗ್ಲಿಯವರ 'ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ' ಮತ್ತು ದಕ್ಷಿಣ ಭಾರತ ಪುಸ್ತಕ ಸಂಸ್ಥೆಯವರ 'ಇಂದಿನ ನಮ್ಮ ಬರಹಗಾರರು' ಎಂಬ ಗ್ರಂಥಗಳನ್ನು ಆಧಾರವಾಗಿ ತೆಗೆದುಕೊಂಡಿರುವೆವು. ಈ ಎರಡೂ ಗ್ರಂಥಗಳು ಅನೇಕ ಲೇಖಕರ ಜನನ-ಮರಣಾದಿಗಳ ಬಗೆಗೆ ಮೌನತಾಳಿದಾಗ ಜೀವಂತವಿದ್ದ ಲೇಖಕರನ್ನು ಪ್ರತ್ಯಕ್ಷ ಕಂಡು ಕಾಗದ ಬರೆದು ತಿಳಿದು ಕೊಂಡಿರುವೆವು. ಕಾಲವಾದ ಲೇಖಕರ ಬಗೆಗೆ ಅವರ ಆಪ್ತವರ್ಗದಿಂದ ಅರಿತುಕೊಂಡಿರುವೆವು. ನಮ್ಮ ಅಳವಿಗೆ ನಿಲುಕದೆ ಉಳಿದುಕೊಂಡ ಲೇಖಕರ ಕಾಲನಿರ್ದೇಶನ ಮಾಡಿಲ್ಲ.

**೫. ಸಂಪಾದಕ :**

ಅನೇಕ ಪ್ರಾಚೀನ ಗ್ರಂಥಗಳನ್ನು ಕೆಲವು ಸಂಪಾದಕರು ಇಡಿಯಾಗಿ, ಸಂಗ್ರಹವಾಗಿ ಸಂಪಾದಿಸಿರುವರು. ಆಗ ಸಂಪಾದಕನ ಪೂರ್ಣ ಹೆಸರು, ಜನನ-ಮರಣಾದಿ-ವಿಷಯಗಳನ್ನು ದರ್ಪಣದಲ್ಲಿ ಕೊಟ್ಟಿರುವೆವು. ಒಂದೇ ಗ್ರಂಥವನ್ನು ಬೇರೆ ಬೇರೆ ಪಂಡಿತರು ಏಕಕಾಲಕ್ಕಾಗಲಿ, ಬೇರೆ ಬೇರೆ ಕಾಲದಲ್ಲಾಗಲಿ ಸಂಪಾದಿಸಿ ಪ್ರಕಟಿಸಿರಬಹುದು. ಸಂಪಾದಕರ ಪಾಂಡಿತ್ಯ, ಸಂಶೋಧನದೃಷ್ಟಿ, ಬಳಸಿಕೊಂಡ ಮೂಲ ಮಾತೃಕೆಗಳು, ಪಾಠಾಂತರ, ಪ್ರಸ್ತಾವನೆ – ಇತ್ಯಾದಿ ಸಂಗತಿಗಳು ಒಂದೊಂದು

ವಿಧದಲ್ಲಿ ಆ ಆ ಗ್ರಂಥದ ಆವೃತ್ತಿಗೆ ಬೆಲೆಯನ್ನು ತಂದುಕೊಡುವವು. ಗ್ರಂಥ ಪ್ರಕಟಣೆಯ ತತ್ವಾನುಗುಣವಾಗಿ ಒಂದು ಗ್ರಂಥದ ಎರಡೂ ಮುದ್ರಣಗಳು ಮಹತ್ವದವುಗಳಾದುದರಿಂದ ಅವುಗಳನ್ನು ಪ್ರತ್ಯೇಕವಾಗಿ ಒಂದು ಸ್ವತಂತ್ರ ಗ್ರಂಥ-ದಂತೆಯೇ ಎತ್ತಿಕೊಂಡಿರುವೆವು. ಅವುಗಳ ಸಂಬಂಧವನ್ನು 'ನೋಡು' ಎಂಬ ಶಬ್ದದಿಂದ ನಿರ್ದೇಶಿಸಿರುವೆವು.

## ೬. ಟೀಕಾಕಾರ:

ಗ್ರಂಥಸ್ಥ ವಿಷಯವನ್ನು ಸಾಮಾನ್ಯರಿಗೆ ಅರ್ಥಮಾಡಿಕೊಡುವ ಸದುದ್ದೇಶದ ಪಂಡಿತರು ಅವುಗಳಿಗೆ ಟೀಕೆ, ಟಿಪ್ಪಣಿ, ವೃತ್ತಿ, ವ್ಯಾಖ್ಯಾನಗಳನ್ನು ಬರೆದಿರುವರು. ಈ ದೃಷ್ಟಿಯಿಂದ ಬಸವಣ್ಣನವರ ವಚನಗಳಿಗೆ ಹಾಗೂ ಅವರನ್ನು ಕುರಿತು ಹುಟ್ಟಿದ ಪ್ರಾಚೀನ ಕಾವ್ಯಗಳಿಗೆ ವಿಪುಲ ಟೀಕೆಗಳು ಹುಟ್ಟಿಕೊಂಡಿವೆ. ಬಸವಣ್ಣನವರ ಷಟ್‌ಸ್ಥಲದ ವಚನಗಳಿಗೆ ಶಬ್ದಶಃ ಅರ್ಥವನ್ನು ಎರಡು-ಮೂರು ದೃಷ್ಟಿಕೋನಗಳಿಂದ ಒಬ್ಬನು ಟೀಕೆ ಬರೆದಿದ್ದರೆ, ಇನ್ನೊಬ್ಬನು ಕೇವಲ ಕಠಿಣ ವಚನಗಳಿಗೆ ಮಾತ್ರ ಟೀಕೆ ಬರೆದಿರುವನು. ಮತ್ತೊಬ್ಬನು ವಚನಗಳಲ್ಲಿ ಹೆಸರಿಸಿದ ವ್ಯಕ್ತಿ ಸಂಗತಿಗಳನ್ನೆತ್ತಿ-ಕೊಂಡು ಅವುಗಳ ವಿವರವಾದ ಕಥೆಗಳನ್ನು ಬರೆದರೆ ಮಗುದೊಬ್ಬನು ಪ್ರತಿಯೊಂದು ವಚನದ ಸಂಕ್ಷೇಪವಾದ ಭಾವಾರ್ಥವನ್ನು ಕೊಟ್ಟಿರುವನು. ಟೀಕಾಕಾರರು ಅನು-ಸರಿಸಿದ ಈ ಬಗೆಯ ಮಾರ್ಗ ಅತ್ಯಂತ ಮನೋಹರವೂ ವೈವಿಧ್ಯ ಪೂರ್ಣವೂ ಆಗಿದೆ. ಒಬ್ಬನ ವಚನಕ್ಕೆ, ಒಂದೇ ಕಾವ್ಯಕ್ಕೆ 'ಹಲವು ದಾರಿ – ಒಂದೇ ಗುರಿ' ಎಂಬ ದೃಷ್ಟಿಯಿಂದ ಬರೆದ ವಿವಿಧ ಟೀಕಾಕಾರರ ಹೆಸರು-ಕಾಲ-ಇವುಗಳನ್ನು ದರ್ಪಣ ದಲ್ಲಿ ಸೇರಿಸಿರುವೆವು. ಕೆಲವು ಟೀಕಾಕಾರರು ತಮ್ಮ ಹೆಸರನ್ನು ಹೇಳಿಕೊಂಡಿಲ್ಲ. ಅವರ ನಿಸ್ವಾರ್ಥ ಭಾವಕ್ಕೆ 'ಅಸ್ತು' ಎಂದು ಮುಂದುವರಿದಿದ್ದೇವೆ.

## ೭. ಅನುವಾದಕ:

ಬಸವಣ್ಣನವರ ವ್ಯಕ್ತಿತ್ವಕ್ಕೆ ಮಾರುಹೋದ ಕೆಲವು ಕವಿಗಳು ತಮ್ಮ ಭಾಷೆ-ಯಲ್ಲಿ ಸ್ವತಂತ್ರ ಗ್ರಂಥಗಳನ್ನು ಬರೆಯುವದರ ಜೊತೆಗೆ ಕೆಲವು ಸಲ ಒಂದು ಭಾಷೆಯ ಒಂದು ಕೃತಿಯ ಭಾಷಾಂತರ ಕಾರ್ಯವನ್ನೂ ಮಾಡಿದ್ದಾರೆ. ಪಾಲ್ಕುರಿಕಿ ಸೋಮನಾಥನ ತೆಲುಗು 'ಬಸವ ಪುರಾಣಮು' ಕನ್ನಡದಲ್ಲಿ 'ಬಸವ ಪುರಾಣ' ವೆಂದೂ, ಸಂಸ್ಕೃತದಲ್ಲಿ 'ಬಸವೇಶ ವಿಜಯಃ' ಹಾಗೂ 'ವ್ಯಾಸೋಕ್ತ ಬಸವ ಪುರಾಣ' ವೆಂದೂ, ತಮಿಳಿನಲ್ಲಿ 'ವಸವ ಪುರಾಣಂ' ಎಂದೂ ಅನುವಾದವಾದುದನ್ನಿಲ್ಲಿ ನೆನೆಯಬಹುದು. ಸಂಸ್ಕೃತ ಬಸವ ಪುರಾಣಕ್ಕೆ ಮರಾಠಿಯಲ್ಲಿ ಟೀಕೆ ಬರೆಯಲಾ-ಗಿದೆ. ಅಲ್ಲದೆ ಅದು ಮರಾಠಿಯಲ್ಲಿ ಕಾವ್ಯರೂಪದಲ್ಲಿ ಪರಿವರ್ತನೆಯಾಗಿದೆಯೆಂಬ ಪ್ರತೀತಿಯೂ ಉಂಟು.

ಕನ್ನಡ 'ಬಸವ ಪುರಾಣ'ದ ಹಸ್ತಪ್ರತಿಗಳು ಕನ್ನಡ ನಾಡಿನ ಹಳ್ಳಿಗಳಲ್ಲಿ ಹೇರಳವಾಗಿ ದೊರೆಯುವವು. ವಿಶೇಷ ಹಬ್ಬ ಹುಣ್ಣಿವೆಗಳಲ್ಲಿ 'ಬಸವ ಪುರಾಣ'ವನ್ನು ಅರ್ಥವತ್ತಾಗಿ ಹೇಳಿ ಕೇಳುವ ಸಂಪ್ರದಾಯ ಹಳ್ಳಿಗಳಲ್ಲಿ ಇಂದಿಗೂ ಉಳಿದು ಬಂದಿದೆ. ತೆಲುಗಿನಿಂದ ಭೀಮಕವಿಯು 'ಬಸವ ಪುರಾಣ'ವನ್ನು ಕನ್ನಡಕ್ಕೆ ಅನುವಾದಿಸದೆ ಹೋಗಿದ್ದರೆ ಕನ್ನಡಿಗರ ಜೀವನದಲ್ಲಿ ಬಸವಣ್ಣನವರ ದಿವ್ಯ ವ್ಯಕ್ತಿತ್ವದ ಪ್ರಭಾವ ಇಷ್ಟು ಹಾಸು-ಹೊಕ್ಕಾಗುತ್ತಿತ್ತೋ ಇಲ್ಲವೋ ! ಆಗು ಕಾರಣ ಲೇಖಕ, ಸಂಪಾದ ಕರಂತೆ ಈ ಅನುವಾದಕರ ಪಾತ್ರವೂ ಬಹು ಗುರುತರವಾದುದರಿಂದ 'ದರ್ಪಣ'ದಲ್ಲಿ ಅವರಿಗೂ ಸ್ಥಾನಕಲ್ಪಿಸಲಾಗಿದೆ.

## ೮. ಸಾಮುಗ್ರಿ-ಆಕಾರ-ಸಾಲು-ಅಕ್ಷರ :

ಒಂದು ಗ್ರಂಥವು ತೊಗಟೆ, ಚರ್ಮ, ಅರಿವೆ, ತಾಳೆಗರಿ, ನೀಲಿಕಾಗದ, ಕೈಕಾಗದ, ಮುದ್ರಣಕಾಗದ, ಸೂಕ್ಷ್ಮಪತ್ರಕ (Micro-card), ಸೂಕ್ಷ್ಮಚಿತ್ರ-ಪಟ (Micro-film) – ಇತ್ಯಾದಿ ರೂಪಗಳಲ್ಲಿ ಮೈದಾಳಬಹುದು. ಗ್ರಂಥ ಸ್ವರೂಪವನ್ನರಿಯಲು ಪ್ರತಿಯೊಂದು ಗ್ರಂಥಕ್ಕೆ ಬಳಸಿದ ಎಲೆ, ಕಾಗದ ಮೊದಲಾದ ಸಾಮುಗ್ರಿ, ಗ್ರಂಥದ ಪ್ರತಿ ಪುಟದ ಸಾಲು, ಒಂದು ಸಾಲಿನಲ್ಲಿಯ ಅಕ್ಷರ, ಆಕಾರ – ಇವುಗಳನ್ನು ಹಸ್ತಪ್ರತಿಗಳ ಗ್ರಂಥಸೂಚಿಗಳಲ್ಲಿ ವಿವರಿಸುವದು ಸಾಮಾನ್ಯ ರೂಢಿ-ಯಾಗಿದೆ. ಅದಕ್ಕಾಗಿ ಇಂಥ ಶಾರೀರಿಕ ಸ್ವರೂಪದ ಪರಿಚಯವನ್ನು 'ದರ್ಪಣ'ದಲ್ಲಿ ಮಾಡಿಕೊಟ್ಟಿರುವೆವು. ಮುದ್ರಿತ ಗ್ರಂಥಗಳ ಬಗೆಗೆ ಸಾಮುಗ್ರಿಯ (ಕಾಗದ) ಹೆಸರನ್ನು ಹೇಳಿಲ್ಲ.

ಗ್ರಂಥದ ಉದ್ದ-ಅಗಲಗಳನ್ನು ಇಂಚು ಮತ್ತು ಸೆಂಟಿಮೀಟರುಗಳಲ್ಲಿ ಕೊಟ್ಟಿ-ರುವೆವು. ಹಸ್ತಪ್ರತಿಗಳಿಗೆ ಪತ್ರ ಸಂಖ್ಯೆ ಹಾಕಲಾಗಿದ್ದರೆ ಮುದ್ರಿತ ಗ್ರಂಥಗಳಿಗೆ ಪುಟಸಂಖ್ಯೆಯನ್ನು ಹಾಕಲಾಗಿದೆ.

ಗ್ರಂಥದ ಆದಿಯಲ್ಲಿ ಬರುವ ಮುನ್ನುಡಿ, ಪ್ರಸ್ತಾವನೆ ಇತ್ಯಾದಿಗಳ, ಮಧ್ಯದ-ಲ್ಲಿರುವ ಪಠ್ಯಭಾಗದ, ಅಂತ್ಯದಲ್ಲಿರುವ ಅಕಾರಾದಿ, ಶಬ್ದಕೋಶ, ಗ್ರಂಥಋಣ ಇತ್ಯಾದಿಗಳ – ಪುಟಗಳನ್ನು ಪ್ರತ್ಯೇಕಿಸಲು ಅಧಿಕ ಚಿಹ್ನೆಯನ್ನು ಬಳಸಲಾಗಿದೆ.

## ೯. ಸ್ಥಳ-ಪ್ರಕಾಶಕ-ಮಿತಿ-ಬೆಲೆ :

ಗ್ರಂಥ ಮುದ್ರಣಗೊಂಡ ಊರಿನ ಹೆಸರು, ಪ್ರಕಾಶಪಡಿಸಿದ ವ್ಯಕ್ತಿ-ಸಂಸ್ಥೆ-ಸರಕಾರ-ಇವರ ಉಲ್ಲೇಖದಿಂದ ಕೆಲವು ಸಲ ಗ್ರಂಥದ ಹಿರಿಮೆ ವಿದಿತವಾಗುತ್ತದೆ. ಗ್ರಂಥದ ವಯೋಮಾನ ದೃಷ್ಟಿಯಿಂದ, ಐತಿಹಾಸಿಕ ದೃಷ್ಟಿಯಿಂದ ಅದು ಪ್ರಕಟ-ಗೊಂಡ ದಿನ, ತಿಂಗಳ, ವರ್ಷ – ಇವು ಅತ್ಯಂತ ಪ್ರಯೋಜನಕಾರಿ. ವಾಚಕರಿಗೆ

ಗ್ರಂಥದ ಬೆಲೆಯೂ ಉಪಯೋಗ ಬೀಳುವದು. ಈ ಕಾರಣಗಳಿಂದಾಗಿ ಇವೆಲ್ಲವುಗಳ ವಿವರವನ್ನು 'ದರ್ಪಣ'ದಲ್ಲಿ ಸೇರಿಸಿರುವೆವು.

**೧೦. ಆವೃತ್ತಿ :**

ಒಂದು ಗ್ರಂಥದ ಪ್ರಥಮ ಆವೃತ್ತಿಗಿಂತ ಮುಂದಣ ಆವೃತ್ತಿಗಳು ಹೆಚ್ಚು ಪರಿಶುದ್ಧ, ಹೆಚ್ಚು ಪ್ರಯೋಜನಕಾರಿ ಆಗಿರುವ ಸಂಭವ ಅಧಿಕ. ಆದುದರಿಂದ ಸಾಧ್ಯವಿದ್ದಮಟ್ಟಿಗೆ ಒಂದು ಗ್ರಂಥದ ಎಲ್ಲ ಆವೃತ್ತಿಗಳನ್ನು ಅವಲೋಕಿಸಿ ಅವುಗಳಲ್ಲಿರುವ ವ್ಯತ್ಯಾಸವನ್ನು 'ಸಾರಾಂಶ'ದಲ್ಲಿ ಕೊಟ್ಟಿರುವೆವು. ಕೆಲವು ಸಲ ಆವೃತ್ತಿಗಳು ಭಿನ್ನಗ್ರಂಥಗಳೆನ್ನುವಂತೆ ರೂಪ ಬದಲಿಸಿಕೊಂಡಿದ್ದರೆ ಅವುಗಳನ್ನು ಪ್ರತ್ಯೇಕ ಗ್ರಂಥಗಳೆಂದು ಗಣಿಸಿ ಸಾರಾಂಶಸಹಿತ ವರ್ಣಿಸಿರುವೆವು. ಉದಾ– ಡಾ. ಫ. ಗು. ಹಳಕಟ್ಟಿಯವರು 'ಬಸವೇಶ್ವರನ ವಚನಗಳು' ಎಂಬ ಗ್ರಂಥವನ್ನು ತಾಳವೋಲೆಯಲ್ಲಿದ್ದಂತೆ ಷಟ್‌ಸ್ಥಲಾನುಕ್ರಮದಲ್ಲಿ ಮೊದಲು ಪ್ರಕಟಿಸಿದರು. ತರುವಾಯ ಅವೇ ವಚನಗಳನ್ನು ಭಿನ್ನವಾಗಿ ವರ್ಗೀಕರಿಸಿ 'ಹೊಸಪದ್ಧತಿಯ ಬಸವೇಶ್ವರನ ವಚನಗಳು' ಎಂಬ ಶಿರೋನಾಮದಲ್ಲಿ ಮುದ್ರಿಸಿರುವರು.

**೧೧. ಮಾಲೆ :**

ಒಂದು ತತ್ವಪ್ರಚಾರ, ಉದ್ದೇಶ ಸಾಧನೆಗಾಗಿ 'ಮಾಲೆ'ಗಳು ಹುಟ್ಟಿಕೊಂಡಿವೆ. 'ದರ್ಪಣ'ದಲ್ಲಿ ಅಂತರ್ಗತಗೊಂಡ ಗ್ರಂಥಗಳಿಗೆ ಆ ಆ ಮಾಲೆ, ಗ್ರಂಥಕ್ರಮಾಂಕ ಇವುಗಳನ್ನು ಗುರುತಿಸಲಾಗಿದೆ.

**೧೨. ಸಾರಾಂಶ :**

'ದರ್ಪಣ'ದಲ್ಲಿ ಗ್ರಂಥದ ದೃಷ್ಟಿಯಿಂದ ಇದು ಮಹತ್ವದ ಭಾಗ. ಪ್ರತಿಯೊಂದು ಪುಸ್ತಕಕ್ಕೆ ವೈಯಕ್ತಿಕ ವಿಮರ್ಶೆ ಬರೆಯಬೇಕೆಂದು ಮೊದಲು ನಮ್ಮ ಯೋಜನೆಯಿತ್ತು. ಪ್ರಸ್ತುತಕ್ಕೆ ಅದು ಫಲಕಾರಿಯಲ್ಲವೆಂದು ಆ ವಿಚಾರವನ್ನು ಬಿಟ್ಟುಕೊಟ್ಟು, ಗ್ರಂಥದ ವಿಷಯವನ್ನು ಕೆಲವು ಸಲ ನಮ್ಮ ಮಾತುಗಳಲ್ಲಿ ಇನ್ನು ಕೆಲವು ಸಲ ಲೇಖಕರ ಮತ್ತು ಸಂಪಾದಕರ ಮಾತುಗಳಲ್ಲಿ ಸಂಗ್ರಹವಾಗಿ ವಿವರಿಸಿರುವೆವು. ವಿಶೇಷ ಸಂದರ್ಭಗಳಲ್ಲಿ ಆ ಗ್ರಂಥಗಳನ್ನು ಕುರಿತು ಗುಣೈಕ ದೃಷ್ಟಿಯಿಂದ ಬಂದ ವಿಮರ್ಶೆಯ ಕೆಲವು ಮಾತುಗಳನ್ನೇ ತೆಗೆದುಕೊಳ್ಳಲಾಗಿದೆ. ಚಿತ್ರ, ನಕಾಶ-ಇವುಗಳ ನಾಮನಿರ್ದೇಶವನ್ನು ಈ ವಿಭಾಗದಲ್ಲಿ ಮಾಡಿರುವೆವು.

**೧೩. ನೋಡು :**

'ದರ್ಪಣ'ದಲ್ಲಿ ಒಂದು ಗ್ರಂಥವು ಇನ್ನಿತರ ಗ್ರಂಥಗಳಿಗೆ ನಿಕಟವಾಗಿ, ಪೂರಕವಾಗಿ ಸಂಬಂಧಿಸಿದುದಾಗಿದ್ದರೆ ಅಂತಹ ಎಲ್ಲ ಗ್ರಂಥಗಳ ಶಿರೋನಾಮಗಳನ್ನು 'ನೋಡು

ಎಂಬ ಶಬ್ದದೆದುರು ಸೂಚಿಸಿರುವೆವು. ಬಸವಣ್ಣನವರ ಜೀವನ ಚರಿತ್ರೆಗೆ ಸಂಬಂಧಿಸಿದ ಆರು ಕಾದಂಬರಿಗಳನ್ನು ಬಿ. ಪುಟ್ಟಸ್ವಾಮಯ್ಯ ಅವರು ರಚಿಸಿರುವರು. ಅವುಗಳ ಶಿರೋನಾಮಗಳು ಭಿನ್ನವಾಗಿರುವದರಿಂದ, ವಿಷಯ ಒಂದೇ ಆಗಿದ್ದರೂ, ನಮ್ಮ ಅಕಾರಾದಿಯಲ್ಲಿ ಅವು ಚದುರಿ ಹೋಗುವವು. ಇಂಥಹ ಸಂದರ್ಭದಲ್ಲಿ ಪ್ರತಿಯೊಂದು ಕಾದಂಬರಿಯ 'ನೋಡು' ವಿಭಾಗದಲ್ಲಿ ಇನ್ನಿತರ ಐದೂ ಕಾದಂಬರಿಗಳ ಶಿರೋನಾಮ-ಗಳನ್ನು ಸೂಚಿಸಿರುವೆವು. ಪ್ರಥಮ ಭಾಗವಾದ 'ಉದಯರವಿ' ಕಾದಂಬರಿಯ ಮುಂದಣ ಐದು ಭಾಗಗಳ ಶಿರೋನಾಮಗಳನ್ನು ಹೀಗೆ ಕೊಟ್ಟಿರುವೆವು:

**ನೋಡು :** ೧. ರಾಜ್ಯಪಾಲ
೨. ಕಲ್ಯಾಣೇಶ್ವರ
೩. ನಾಗಬಂಧ
೪. ಮುಗಿಯದ ಕನಸು
೫. ಕ್ರಾಂತಿ ಕಲ್ಯಾಣ

ಒಂದು ಗ್ರಂಥವು ಇತರ ಭಾಷೆಗಳಲ್ಲಿ ಅನುವಾದಿಸಲ್ಪಟ್ಟಾಗಲೂ 'ನೋಡು' ವಿಭಾಗದಲ್ಲಿ ಅನುವಾದಿತ ಭಾಷೆಯಲ್ಲಿಯ ಅದರ ಶಿರೋನಾಮಗಳನ್ನು ಕೊಟ್ಟು ಕಂಸಿನಲ್ಲಿ ಆ ಭಾಷೆಯ ಹೆಸರನ್ನು ಕೊಟ್ಟಿರುವೆವು.

**ನೋಡು :** ೧. ಬಸವ ಪುರಾಣಮು (ತೆಲುಗು)
೨. ವಸವ ಪುರಾಣಂ (ತಮಿಳು)
೩. ಬಸವೇಶ ವಿಜಯಃ (ಸಂಸ್ಕೃತ)
೪. ವ್ಯಾಸೋಕ್ತ ಬಸವ ಪುರಾಣ (ಸಂಸ್ಕೃತ-ಮರಾಠಿಟೀಕೆ)
೫. ಶ್ರೀ ಬಸವೇಶ್ವರ ಪುರಾಣ (ಹಿಂದೀ)

ಈ ಬಗೆಯ ಅಂತರವಿಷಯೀದರ್ಶಕದಿಂದ ಒಂದು ಗ್ರಂಥದ ಸಮಗ್ರ ಪರಿಚಯವನ್ನು ಮಾಡಿಕೊಳ್ಳಲು ಸುಲಭವಾಗುವದು.

**೧೪. ಆಕರ :**

ವಿವರಣಾತ್ಮಕ-ಗ್ರಂಥಸೂಚಿ, ವಿಮರ್ಶಾತ್ಮಕ ಸೈಪಿಡಿ, ಕವಿಚರಿತ್ರಾತ್ಮಕ ಗ್ರಂಥ, ಉನ್ನತಮಟ್ಟದ ನಿಯತಕಾಲಿಕೆಗಳು–ಇತ್ಯಾದಿ ಸಂದರ್ಭಗ್ರಂಥಗಳಲ್ಲಿ ಬಸವಣ್ಣನವ-ರನ್ನು ಕುರಿತು ಗ್ರಂಥಗಳು ಸೂಚಿತವಾಗಿವೆ. ಆ ಆ ಸಂದರ್ಭ ಗ್ರಂಥದ ಅಥವಾ ನಿಯತ ಕಾಲಿಕೆಯ ಸಂಕ್ಷಿಪ್ತ ಶಿರೋನಾಮೆ, ಸಂಪುಟ, ಸಂಚಿಕೆ, ಪುಟ–ಇವುಗಳನ್ನು

'ಆಕರ' ವಿಭಾಗದಲ್ಲಿ ನಿರೂಪಿಸಿದೆ. ಈ ಸಂದರ್ಭ-ಗ್ರಂಥ ಹಾಗು ನಿಯತಕಾಲಿಗಳ ವಿವರವಾದ ಸೂಚಿಯನ್ನು 'ಸಂದರ್ಭಗ್ರಂಥ ಸೂಚಿ' ಎಂಬ ಪ್ರತ್ಯೇಕ ವಿಭಾಗದಲ್ಲಿ ಕೊಟ್ಟಿರುವೆವು.

## ೧೫. ಅನುಬಂಧ :

'ದರ್ಪಣ'ದಲ್ಲಿ ಗ್ರಂಥಗಳನ್ನು ಆ ಆ ಭಾಷೆಯ ಕೆಳಗೆ ಶಿರೋನಾಮುಗಳ ವರ್ಣಾನುಕ್ರಮದಲ್ಲಿಟ್ಟು ವಿವರಿಸುತ್ತ ಹೋಗಿರುವೆವು. ಮುದ್ರಣಕಾರ್ಯ ಮುಂದು-ವರಿದಾಗ ಕೆಲವು ಹೊಸಗ್ರಂಥಗಳು ನಮಗೆ ದೊರೆತವು. ಅವುಗಳ ವಿವರಣೆಯನ್ನು 'ಅನುಬಂಧ' ವಿಭಾಗದಲ್ಲಿ ವರ್ಣಾನುಕ್ರಮವಾಗಿ ಸೇರಿಸಿರುವೆವು. ಆದುದರಿಂದ ಯಾವುದೊಂದು ಗ್ರಂಥದ ವಿವರ 'ದರ್ಪಣ'ದಲ್ಲಿ ಬಂದಿದೆಯೋ ಇಲ್ಲವೋ ಎಂಬುದ-ನ್ನರಿಯಬೇಕಾದರೆ ಮೊದಲು ಗ್ರಂಥವು ಬರೆಯಲ್ಪಟ್ಟ ಭಾಷೆಯಾವುದೆಂಬ ತಿಳಿವಳಿಕೆ ವಾಚಕರಿಗಿರಬೇಕು. ಅನಂತರ 'ಅನುಕ್ರಮಣಿಕೆ'ಯ ನೆರವಿನಿಂದ ಆ ಆ ಭಾಷೆಗೆ ಮೀಸಲಾದ ಪುಟಗಳಲ್ಲಿ ತಾವು ಪರಿಶೀಲಿಸಬೇಕೆಂದಿರುವ ಗ್ರಂಥದ ಶಿರೋನಾಮು-ವನ್ನು ಹಿಡಿದು ವರ್ಣಾನುಕ್ರಮದಲ್ಲಿ ಹುಡುಕಿದರೆ ಅದು ತಟ್ಟನೆ ಸಿಗುವದು. ಒಂದು ವೇಳೆ ಅಲ್ಲಿ ಸಿಗದಿದ್ದರೆ 'ಅನುಬಂಧ'ದಲ್ಲಿ ನೋಡಬೇಕು.

## ೧೬. 'ದರ್ಪಣ'ದ ದೃಷ್ಟಿ :

ಬಸವ ರಚಿತ ಹಾಗೂ ಬಸವಣ್ಣನವರನ್ನು ಕುರಿತು ರಚಿತವಾದ ಗ್ರಂಥಗಳ ಒಟ್ಟು ಸಂಖ್ಯೆ ಮತ್ತು ಅಲ್ಲಿಯ ಪ್ರಾಮುಖ್ಯ ವಿಷಯದತ್ತ ನಮ್ಮ ದೃಷ್ಟಿಯಿದೆ. ಆದುದರಿಂದ ಗ್ರಂಥಕರ್ತೃವಿನ ಜೀವನ ಚರಿತ್ರೆ ಇನ್ನಿತರ ಕೃತಿ ಪರಿಚಯ, ಕಾಲ-ನಿರ್ಣಯ-ಇತ್ಯಾದಿಗಳ ವಿವೇಚನೆಗೆ ನಾವು ಹೋಗಿಲ್ಲ. ಅವು ನಮಗೆ ಅಪ್ರಸ್ತುತ. ಬಸವ ರಸವನ್ನು ಹೀರಿ ಬೆಳೆದ, ಬಸವ ಮುದ್ರೆಯನ್ನು ಹೊತ್ತು, ಬಸವಮಯವಾದ ಸ್ವತಂತ್ರ ಗ್ರಂಥಗಳ ಸಮಗ್ರ ಸಂಖ್ಯೆ, ರೂಪಲಾವಣ್ಯ-ಇವುಗಳನ್ನು ಈ 'ದರ್ಪಣ' ದಲ್ಲಿ ಸಹೃದಯರು ಕಾಣಬಹುದು.

## ೧೭. ಕೋರಿಕೆ :

'ದರ್ಪಣ'ವು ಪರಿಪೂರ್ಣ ಗ್ರಂಥವಲ್ಲ. ಇದು ಎಂದೆಂದಿಗೂ ಅಪೂರ್ಣವೆ 'ದರ್ಪಣ'ದಂತಹ ವಿವರಣಾತ್ಮಕ ಸೂಚಿಗಳ ಹಾಡೇ ಹೀಗೆ. ಅಂದಂದಿನ ವರೆಗೆ ಪ್ರಕಟವಾದ ಗ್ರಂಥಗಳನ್ನೆಲ್ಲ ಶೇಖರಿಸಿದರೂ ಸೂಚಿ ಮುದ್ರಣಾಲಯದಿಂದ ವಾರು-ಕಟ್ಟೆಗೆ ಬರುವ ಅವಧಿಯಲ್ಲಿ ಮತ್ತೆ ಅನೇಕ ಹೊಸ ಗ್ರಂಥಗಳು ಬೆಳಕುಕಾಣುವ-ದುಂಟು. ಈ ನವೀನ ಗ್ರಂಥಗಳ ವಿವರಣೆ ಸೂಚಿಯಲ್ಲಿ ಬರಬೇಕಾದರೆ ಅದು ಪುನಃ ಮುದ್ರಣವಾಗುವವರೆಗೆ ಕಾಯಬೇಕು. 'ದರ್ಪಣ'ದ ವಿಷಯದಲ್ಲಿಯೂ ಈ

ಮಾತನ್ನು ಹೇಳದೆ ಗತ್ಯಂತರವಿಲ್ಲ. ಅಲ್ಲದೆ ಇದರಲ್ಲಿ ಎಷ್ಟೋ ಗ್ರಂಥಗಳ ನಾಮ ನಿರ್ದೇಶಮಾತ್ರ ಮಾಡಿದ್ದೇವೆ. ಅವು ನಮ್ಮ ಪ್ರತ್ಯಕ್ಷಾವಲೋಕನಕ್ಕೆ ಮತ್ತಾವಾಗ ದೊರಕುವವೋ ಹೇಳುವದು ಸಾಧ್ಯವಿಲ್ಲ. ಆದುದರಿಂದ ಅಂತಹ ಗ್ರಂಥಗಳುಳ್ಳ ಮಹನೀಯರು ನನಗೆ ಕಳುಹಿಸಿ ಕೊಟ್ಟು-ಬರೆದು ತಿಳಿಸಿ 'ದರ್ಪಣ'ದಲ್ಲಿ ಕಾಣಿಸಿ-ಕೊಳ್ಳುವಂತೆ ನನ್ನೀಕಾರ್ಯದಲ್ಲಿ ಸಹಕರಿಸಬೇಕೆಂದು ವಿನಯದಿಂದ ಕೋರುತ್ತೇನೆ. ನವೀನ ಗ್ರಂಥಗಳ ಕರ್ತೃಗಳು ಮತ್ತು ಪ್ರಕಾಶಕರು ಸಹ ಒಂದೊಂದು ಪ್ರತಿಯನ್ನು ನನಗೆ ವ್ಹಿ. ಪಿ. ಮೂಲಕ ಕಳುಹಿಸಿಕೊಡುವರೆಂದು ನಂಬಿರುವೆ.

ಸ್ವತಂತ್ರ ಗ್ರಂಥವನ್ನು ರಚಿಸುವದು ಒಂದು ವೇಳೆ ಸುಲಭವೆನಿಸಬಹುದು. ಆದರೆ ರಚಿತವಾದ ಗ್ರಂಥಗಳನ್ನು ಮುಂಬರುವ ಪೀಳಿಗೆಗೆ ಉಪಯೋಗವಾಗುವಂತೆ ಸಂರಕ್ಷಿಸಿಕೊಂಡು ಬರುವದು ಬಹು ದುಸ್ತರವಾದ ಕೆಲಸ. ನಾಡಿನ ತುಂಬ ಹರಡಿ-ಕೊಂಡಿದ್ದ ಗ್ರಂಥಗಳನ್ನು 'ದರ್ಪಣ'ಕ್ಕಾಗಿ ಸಂಗ್ರಹಿಸಲು, ಕಣ್ಣಾರೆಕಂಡು ಪರೀಕ್ಷಿ-ಸಲು ಹೋದಾಗ ನಾವು ಅನುಭವಿಸಿದ ವಿಷನಿಮಿಷಗಳನ್ನು ಮರೆಯುವಂತಿಲ್ಲ. ಹೀಗಾಗಿ ಎಷ್ಟೋ ಗ್ರಂಥಗಳು ಇಂತವರಲ್ಲಿ ಇವೆಯೆಂದು ತಿಳಿದಾಗಲೂ ಅವುಗಳ ವಿವರಣೆಯನ್ನು 'ದರ್ಪಣ'ದಲ್ಲಿ ಸೇರಿಸಲಾಗಲಿಲ್ಲ.

'ದರ್ಪಣ'ದ ನಿರ್ಮಾಣ ಕಾರ್ಯ ಪ್ರಾರಂಭವಾಗಿ ಇಂದಿಗೆ ಮೂರು ವರುಷ ಗಳಾದವು. ಪ್ರಾರಂಭದಲ್ಲಿ ಈ ಕಾರ್ಯವು ನಾಲ್ಕಾರು ತಿಂಗಳಲ್ಲಿ ಸುಲಭವಾಗಿ ಮುಗಿಯಬಹುದೆಂದು ಎಣಿಕೆ ಹಾಕಿದ್ದೆವು. ಆದರೆ ಕಾರ್ಯೋನ್ಮುಖರಾಗಿ ಮುಂದು ವರಿದಾಗ ಇದರ ಬೃಹತ್ ಕಲ್ಪನೆಯ ಅರಿವಾಯಿತು. ನಾವು ಹುಡುಕಿಕೊಂಡು ಹೋದಷ್ಟೂ ವಿಷಯ ವಿಸ್ತಾರವಾಗುತ್ತ ನಡೆಯಿತು. ಅನೇಕ ಅಡ್ಡಿ-ಆತಂಕಗಳು ಎದುರಿಸಿ ನಿಂತವು. ಸಣ್ಣ-ಪುಟ್ಟ ಸಂಶಯಗಳು ದೊಡ್ಡ ದೊಡ್ಡ ಸಮಸ್ಯೆಗಳಾಗಿ ಕುಳಿತವು. ಸಂಶಯ ನಿವಾರಣೆಗಾಗಿ ದಿಙ್ಮೂಢರಾಗಿ ಕುಳಿತಾಗ ಯಾವುದೋ ಅವ್ಯಕ್ತ ಅವರ್ಣನೀಯ ಚೈತನ್ಯವೊಂದು ಮನದಲ್ಲಿ ಚಿಮ್ಮಿ ಬಂದು ಕಾರ್ಯಸಿದ್ಧಿ ಯಲ್ಲಿ ಪ್ರೇರಣೆಯನ್ನಿತ್ತಿದೆ. ಜೊತೆಗೆ 'ಬಸವ ಸಮಿತಿ'ಯ ಕಾರ್ಯಾಧ್ಯಕ್ಷರಾದ ಮಾನ್ಯ ಶ್ರೀ ಬಿ. ಡಿ. ಜತ್ತಿಯವರು ಸರ್ವವಿಧದಲ್ಲಿ ನನಗೆ ಸಹಾಯ ಸಲ್ಲಿಸಿದ್ದಾರೆ. ಈ ಹೊಣೆಯನ್ನು ಹೊರಿಸಿ, ಮೇಲಿಂದ ಮೇಲೆ ನೆನಪಿನೋಲೆಗಳನ್ನು ಬರೆದು, ಕಾರ್ಯಪ್ರಗತಿಯನ್ನು ಆಗಾಗ್ಗೆ ಪ್ರತ್ಯಕ್ಷ ಬಂದು ಪರಿಶೀಲಿಸಿ ನನ್ನಲ್ಲಿ ಹುರುಪು ತುಂಬಿ ಹೋಗದಿದ್ದರೆ ಇಷ್ಟು ಅಲ್ಪಾವಧಿಯಲ್ಲಿ ಪೂರ್ತಿಯಾಗುವದು ಸಾಧ್ಯವಿರಲಿಲ್ಲ. ಅದು ಕಾರಣ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ.

ಗ್ರಂಥ ರಚನೆಯ ಸಮಯದಲ್ಲಿ ನನಗೆ ಸಲಹೆ ಸೂಚನೆಗಳನಿತ್ತು ಸಹಾಯ-ಮಾಡಿದ ಕರ್ನಾಟಕ ವಿಶ್ವವಿದ್ಯಾಲಯದ ಪರೀಕ್ಷಾವಿಭಾಗದ ಮುಖ್ಯಾಧಿಕಾರಿಗಳಾದ

ಶ್ರೀ ಎಸ್. ಬಿ. ಶಾಪೇಟಿ ಅವರಿಗೆ ನನ್ನ ಹೃತ್ಪೂರ್ವಕ ನೆನಿಕೆಗಳು. ಗ್ರಂಥದ ಹಸ್ತಪ್ರತಿಯ ಕೆಲವು ಪುಟಗಳನ್ನು ಪ್ರತಿಮಾಡುವಲ್ಲಿ ಸಹಾಯ ಸಲ್ಲಿಸಿದ ನನ್ನ ಸಹೋದರ ಶ್ರೀ ಎಂ. ಎಫ್. ಡಂಬಳ ಅವನಿಗೂ, 'ಶಬ್ದಸೂಚಿ'ಯನ್ನು ಸಿದ್ಧಪಡಿಸುವಾಗ ನೆರವಾದ ನನ್ನ ವಿದ್ಯಾರ್ಥಿ ಶ್ರೀ ಧನಪಾಲ ಮಿಣಜಿಗಿ ಇವನಿಗೂ ನನ್ನ ಹಾರ್ದಿಕ ಧನ್ಯವಾದಗಳು. ರಕ್ಷಾಪುಟಕ್ಕೆ ತಕ್ಕ ರೇಖಾಚಿತ್ರವನ್ನು ಬರೆದುಕೊಟ್ಟ ಗೆಳೆಯ ಶ್ರೀ ಎ. ಯು. ಪಾಟೀಲ ಅವರಿಗೆ ನಾನು ಆಭಾರಿ.

'ದರ್ಪಣ'ವನ್ನು ಸಿದ್ಧಪಡಿಸುತ್ತಿದ್ದಾಗ ಇನ್ನೂ ಕೆಲವು ಹಿರಿಯರು, ಗೆಳೆಯರು ಹಲವಾರು ಬಗೆಯಿಂದ ನೆರವಾಗಿರುವರು. ಅವರನ್ನು 'ಉಪಕೃತ' ಪುಟದಲ್ಲಿ ಸ್ಮರಿಸಿರುವೆ.

'ದರ್ಪಣ'ವನ್ನು ಅಂದವಾಗಿ, ಬಹು ಶ್ರಮುವಹಿಸಿ ಸಕಾಲದಲ್ಲಿ ಮುದ್ರಿಸಿ ಕೊಟ್ಟ ಧಾರವಾಡದ ಕ್ವಾಲಿಟಿ ಪ್ರಿಂಟರ್ಸ ಅಚ್ಚುಕೂಟದ ಒಡೆಯರಾದ ಶ್ರೀ ಮಲ್ಲಣ್ಣ ಹೊರಡಿ ಮತ್ತು ಅವರ ಕೆಲಸಗಾರರ ಉಪಕಾರ ಅವರ್ಣನೀಯ.

ಧಾರವಾಡ
೧೫—೮—೬೭

ಎಸ್. ಆರ್. ಗುಂಜಾಳ

## ಲೋಕದೊಳ್ ಬಸವಣ್ಣ

ಬಸವನ ಮಾತೆ ಮಾತು ಬಸವಣ್ಣನ ಭಕ್ತಿಯು ಓಜೆಯೋಜೆ ಕೇಳ್
ಬಸವನ ರೀತಿ ರೀತಿ ಬಸವಣ್ಣನ ಕಿಂಕರವೃತ್ತಿ ವೃತ್ತಿ ಮೇಣ್ ।
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ನೇಮವೆ ನೇಮವುರ್ವಿಯೊಳ್ ॥ ೧

ಬಸವನ ಗೀತಿ ಗೀತಿ ಬಸವಣ್ಣನ ನಿರ್ಮಲರೂಪು ರೂಪುಕೇಳ್
ಬಸವನ ಗಾಡಿ ಗಾಡಿ ಬಸವಣ್ಣನ ನಿರ್ಮಲ ಕೀರ್ತಿ ಕೀರ್ತಿ ಮೇಣ್ ।
ಬಸವನ ಬುದ್ಧಿ ಬುದ್ಧಿ ಬಸವಣ್ಣನ ಪುಣ್ಯದ ಲೀಲೆ ಲೀಲೆ ಹೋ
ಬಸವನ ರಕ್ಷೆ ರಕ್ಷೆ ಬಸವಣ್ಣನ ಶಿಕ್ಷೆಯೆ ಶಿಕ್ಷೆ ಲೋಕದೊಳ್ ॥ ೨

ಬಸವನ ಪೆರ್ಮೆ ಪೆರ್ಮೆ ಬಸವಣ್ಣನ ನಚ್ಚಿನ ಕೂರ್ಮೆ ಕೂರ್ಮೆ ಕೇಳ್
ಬಸವನ ಸೀಮೆ ಸೀಮೆ ಬಸವಣ್ಣನ ಶೀತಳಶಾಂತಿ ಶಾಂತಿ ಮೇಣ್ ।
ಬಸವನ ಜಾಣು ಜಾಣ್ ಬಸವಿದೇವನ ಭಾವದ ಕಾಣ್ಕೆ ಕಾಣ್ಕೆ ಹೋ
ಬಸವನ ಭಕ್ತಿ ಭಕ್ತಿ ಬಸವಣ್ಣನ ಯುಕ್ತಿಯೆ ಯುಕ್ತಿ ಲೋಕದೊಳ್ ॥ ೩

—ಹರಿಹರದೇವ

ತಾಳಮಾನಸರಿಸವನಱಿಯೆ, ಓಜೆಬಜಾವಣೆಯ ಲೆಕ್ಕವನಱಿಯೆ

ಅಮೃತಗಣ ದೇವಗಣವನಱಿಯೆ !

ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ

ಅನುವೊಲಿದಂತೆ ಹಾಡುವೆ !

೧

ಗ್ರಂಥ: ಅಣ್ಣನ ಅರ್ಪಣಯೋಗ

ಪ್ರಭೇದ: ಪ್ರಶ್ನೋತ್ತರ

ಕರ್ತೃ: ಹರ್ಡೇಕರ (ಮಂಜಪ್ಪ)

ಕಾಲ: ಜ: ೧೮-೨-೧೮೮೫ ಮ: ೩-೧-೧೯೪೭

ಆಕಾರ-ಅಳತೆ: ೬×೪ ಇಂಚು

ಪುಟ: ೩೨

ಸಾಲು: ೧೦

ಅಕ್ಷರ: ೧೨

ಸ್ಥಳ: ಆಲಮಟ್ಟಿ (ವಿಜಾಪುರ ಜಿಲ್ಲೆ)

ಪ್ರಕಾಶಕ: ಕರ್ತೃ

ಆವೃತ್ತಿ: ಪ್ರಥಮ

ಮಿತಿ: ೧೯೩೮

ಬೆಲೆ: ೦—೧—೦ ಆಣೆ

ಮಾಲೆ: ವೀರಶೈವ ವಿದ್ಯಾಲಯ ಗ್ರಂಥಮಾಲೆ, ೨೯

ಸಾರಾಂಶ: ಇದರಲ್ಲಿ "ಪರಮಾತ್ಮನು ಗುರು ಲಿಂಗ ಜಂಗಮ ಎಂಬ ಮೂರು ಪ್ರಕಾರಗಳಿಂದ ಜಗತ್ತಿನಲ್ಲಿ ತೋರುತ್ತಿದ್ದಾನೆಂದು ನಂಬಿ ಅವುಗಳಿಗೆ ಅನುಕ್ರಮವಾಗಿ ತನ್ನ ತನು ಮನ ಧನಗಳನ್ನು ಅರ್ಪಿಸುವುದೇ ಅರ್ಪಣಯೋಗದ ಮುಖ್ಯ ಲಕ್ಷಣ" ಎಂದು ಹೇಳಿ ಇದಕ್ಕೆ ಪೂರಕವಾಗಿ ಬಸವಣ್ಣನವರ ಉಚಿತ ವಚನಗಳನ್ನಾಧರಿಸಿ ಸಂವಾದರೂಪದಲ್ಲಿ ವಿವೇಚನೆ ಮಾಡಲಾಗಿದೆ.

೨

ಗ್ರಂಥ: ಅಣ್ಣನ ಆದರ್ಶ

ಪ್ರಭೇದ: ಚರಿತ್ರೆ

ಕರ್ತೃ: ಸಿದ್ದಪ್ಪಾರಾಧ್ಯ (ಟಿ. ಜಿ.)

**ಕಾಲ :** ಸು. ೧೯೨೫

**ಆಕಾರ-ಅಳತೆ :** ೧೨×೯ ಸೆ. ಮಿ.

**ಪುಟ :** ೯೩

**ಸ್ಥಳ :** ಮೈಸೂರು

**ಪ್ರಕಾಶಕ :** ಮೈಸೂರು ವಿಶ್ವವಿದ್ಯಾನಿಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೨

**ಬೆಲೆ :** ೦=೨೫ ಪೈ.

**ಮಾಲೆ :** ಪ್ರಚಾರೋಪನ್ಯಾಸಮಾಲೆ

**ಸಾರಾಂಶ :** "ಇದರಲ್ಲಿ ಆತ್ಮಬೋಧನೆ, ಆಧ್ಯಾತ್ಮಿಕ ಪ್ರಗತಿ, ಸಾಮಾಜಿಕ ಸೇವೆ ಮತ್ತು ಉಪಸಂಹಾರ, ಅವತರಣಿಕೆ ಎಂಬ ಆರು ಪ್ರಸಂಗಗಳಿವೆ. ಉಪಲಬ್ಧ ಪುರಾಣಗಳು ಹಾಗೂ ವಚನ ಶಾಸ್ತ್ರಗಳ ಆಧಾರದಿಂದ ಅಣ್ಣನ ಅಂದರೆ ಬಸವೇಶ್ವರನ ಚರಿತ್ರೆಯನ್ನು ನಿರೂಪಿಸಲಾಗಿದೆ."

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

---

ಆಕರ :

೧. ಶರಣಸಾಹಿತ್ಯ, ಸಂಪುಟ ೨೫; ಸಂಚಿಕೆ ೮-೯; ಪುಟ ೩೬೯; ನವ್ಹಂಬರ-ಡಿಶೆಂಬರ, ೧೯೬೨.

೩

**ಗ್ರಂಥ : ಅಣ್ಣನ ಕ್ರಾಂತಿ**

**ಪ್ರಭೇದ :** ಗದ್ಯ-ಮಕ್ಕಳ ಸಾಹಿತ್ಯ

**ಕರ್ತೃ :** ಹರ್ಡೇಕರ (ಮಂಜಪ್ಪ)

**ಕಾಲ :** ಜ : ೧೮-೨-೧೮೮೫ ಮ : ೩-೧-೧೯೪೭

**ಆಕಾರ-ಅಳತೆ :** ೬×೪ ಇಂಚು

**ಪುಟ :** ೩೪ ?

**ಸ್ಥಳ :** ಆಲಮಟ್ಟಿ ?

**ಪ್ರಕಾಶಕ :** ಕರ್ತೃ

ಮಿತಿ : ೧೯೩೬ ?

ಮಾಲೆ : ವೀರಶೈವ ವಿದ್ಯಾಲಯ ಗ್ರಂಥಮಾಲೆ ?

ಸಾರಾಂಶ : ಇದರಲ್ಲಿ ಬಸವಣ್ಣನವರ ವಚನಗಳನ್ನು ಬಳಸಿ ಜಾತಿ, ಕುಲ, ವರ್ಣ,ಗೋತ್ರಗಳ ಉಚ್ಚಾಟನೆ; ದೈವಭಕ್ತಿ, ಗುಣಶೀಲಗಳಿಂದ ವ್ಯಕ್ತಿಯ ಶ್ರೇಷ್ಠತೆಯನ್ನು ಗಣಿಸುವದು; ಜ್ಞಾನಕ್ಕಿಂತ ಕ್ರಿಯೆ- ನುಡಿಗಿಂತ ನಡೆಯೇ ಉತ್ತಮವೆಂದು ತಿಳಿಯುವದು; ಮಾನವರೆಲ್ಲರೂ ಸಮಾನರು—ಇತ್ಯಾದಿ ಮಾತುಗಳನ್ನು ಮಕ್ಕಳ ಮನಸ್ಸಿನಲ್ಲಿ ಪಡಿಮೂಡಿ ನಿಲ್ಲುವಂತೆ ವಿವರಿಸಿದ್ದಾರೆ.

---

ಆಕರ :

೧. ರಾಷ್ಟ್ರಧರ್ಮದ್ರಷ್ಟಾರ ಹರ್ಡೇಕರ ಮಂಜಪ್ಪ, ಪು. ೧೨೭೭–೮೭.

೪

ಗ್ರಂಥ : ಅಣ್ಣನ ಬದುಕು

ಪ್ರಭೇದ : ಗದ್ಯ-ವಚನ

ಕರ್ತೃ : ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ

ಕಾಲ : ಜ : ೨೮–೯–೧೯೧೧

ಆಕಾರ-ಅಳತೆ : ೧೮×೧೩ ಸೆ. ಮಿ.

ಪುಟ : ೨೨೩

ಸ್ಥಳ : ಬೆಂಗಳೂರು

ಪ್ರಕಾಶಕ : ಪ್ರಬೋಧ ಪುಸ್ತಕ ಮಾಲೆ

ಆವೃತ್ತಿ : ಪ್ರಥಮ

ಮಿತಿ : ೧೯೫೦

ಬೆಲೆ : ೨-೮-೦

ಸಾರಾಂಶ : ಇದು “ಹೊಸಮಾದರಿಯ ಗ್ರಂಥ. ಇಲ್ಲಿ ಕಾಣಬರುವ ದೃಷ್ಟಿ ಹೊಸದು. ಕಡೆಗೆ ಬಸವಣ್ಣನವರ ತಂದೆ ತಾಯಿಗಳಾರು? ಅವರ ಜನ್ಮಸ್ಥಳ ಯಾವುದು? ಎಂಬ ವಿಷಯಗಳನ್ನು ಕೂಡ ಪ್ರಸ್ತಾಪಿಸದೆ ನೇರವಾಗಿ ಬಸವಣ್ಣನವರ ವಚನಗಳನ್ನು ಉದಾಹರಿಸುತ್ತ ಅವರ ಬಾಲ್ಯದ ಬದುಕಿನಿಂದ ಹಿಡಿದು

ಜವ್ವನದ ಬದುಕು ಮತ್ತು ಚರಮ ಜೀವನದ ಬದುಕುಗಳನ್ನು ಶ್ರೀಗಳವರು ನಮ್ಮ ಮುಂದಿಟ್ಟಿದ್ದಾರೆ. ಇಲ್ಲಿ ಬಸವಣ್ಣ ಹುಡುಗನಾಗಿ ಆಟವಾಡುತ್ತಾನೆ, ಪಾಠ ಕಲಿಯುತ್ತಾನೆ; ತರುಣಿಯಾಗಿ ಸುಳಿಯುತ್ತಾನೆ, ನೋಂಪಿಯನ್ನು ಹಿಡಿಯುತ್ತಾನೆ; ಯೌವನಸ್ಥನಾಗಿ ಶಾಸ್ತ್ರಾಭ್ಯಾಸ ಮಾಡುತ್ತಾನೆ; ಬೇಟೆಯಾಡುತ್ತಾನೆ; ಪ್ರೌಢನಾಗಿ ಮಂತ್ರಿಯಾಗುತ್ತಾನೆ, ಸೇನಾಧಿಪತಿಯಾಗುತ್ತಾನೆ; ನೆರೆದ ಚೆಲುವೆಯಾಗಿ ವಿರಹಿಣಿಯಾಗುತ್ತಾನೆ, ಕೂಡಲಸಂಗಮದೇವನಲ್ಲಿ ಲೀನವಾಗುತ್ತಾನೆ; ಲೌಕಿಕದ ಹಲವು ಕಾಯಕಗಳಲ್ಲಿ ಪರಿಣತನಾಗಿ ಕಾಯಕದಿಂದ ಅಧ್ಯಾತ್ಮಸಾಧನೆ ಮಾಡುತ್ತಾನೆ. ಬಸವಣ್ಣನವರು ತಮ್ಮ ವಚನಗಳಲ್ಲಿ ಹೇಳಿರುವ ಹಲವು ಉಪಮಾನಗಳನ್ನೂ ದೃಷ್ಟಾಂತಗಳನ್ನೂ ಚಮತ್ಕಾರವಾಗಿ ಉಪಯೋಗಿಸಿಕೊಂಡು ಬಸವಣ್ಣನವರ ಅನುಭವ ಸರ್ವತೋಮುಖವಾದುದು ಎಂಬುದನ್ನು ಗ್ರಂಥಕರ್ತರು ತೋರಿಸಿಕೊಟ್ಟಿದ್ದಾರೆ; ಅವರ ಬೋಧೆ ಹೃದಯಂಗಮವಾದುದು, ಐಹಿಕ ಮತ್ತು ಆಮುಷ್ಮಿಕಗಳೆರಡಕ್ಕೂ ಬೆಳಕು ನೀಡುವಂಥಾದ್ದು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಬಸವಣ್ಣನವರ ವಚನಾಮೃತವನ್ನು ಬಯಸುವವರಿಗೆ ಇಲ್ಲಿ ಹಬ್ಬದೌತಣವಾಗುತ್ತದೆ."

—ಎಂ. ಆರ್. ಶ್ರೀಯವರ ಮುನ್ನುಡಿ ಪು. ೩–೪

ಶ

**ಗ್ರಂಥ : ಅಣ್ಣನ ಬೆಳಕು**

**ಪ್ರಭೇದ :** ಗದ್ಯ-ಪ್ರಬಂಧ

**ಕರ್ತೃ :** ಓಲಿ (ಕೆ ಎಚ್.)

**ಕಾಲ :** ಸು. ೧೯೫೫

**ಆಕಾರ–ಆಳತೆ :** ೧೮ × ೧೩ ಸೆ. ಮಿ.

**ಪುಟ :** ೪ + ೪೮ = ೫೨

**ಸ್ಥಳ :** ಗದಗ

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧೭–೧೦–೧೯೫೩

**ಬೆಲೆ :** ೦–೮–೦

ಸಾರಾಂಶ : ಒಟ್ಟು ಒಂಬತ್ತು ಪ್ರಕರಣಗಳಿವೆ : (೧) ಬಸವಣ್ಣನವರ ಪೂರ್ವದ ಭಾರತೀಯ ಧಾರ್ಮಿಕ ಸ್ಥಿತಿಗತಿ (೨) ಬಸವಣ್ಣನವರ ಸಕಲಶಾಸ್ತ್ರ ಪ್ರಾವೀಣ್ಯ (೩) ಬಿಜ್ಜಳನಲ್ಲಿ ಅಧಿಕಾರ ಮತ್ತು ಲೋಕೋಪಕಾರ (೪) ಬಸವಣ್ಣನವರ ದೃಷ್ಟಿಯಲ್ಲಿ ಆರ್ಥಿಕ ಅಭಿವೃದ್ಧಿ— ಇತ್ಯಾದಿ ವಿಷಯಗಳ ನಿರೂಪಣೆಯಿದೆ. (೫) ಕಲ್ಯಾಣಪಟ್ಟಣದ ವರ್ಣನೆ (೬) ಬಸವಣ್ಣನವರ ಧರ್ಮ, ವಿಶ್ವಧರ್ಮವೆಂದೂ (೭) ಅನುಭವಮಂಟಪವು ಪ್ರಪಂಚದ ಧಾರ್ಮಿಕ ಪಾರ್ಲಿಮೆಂಟೆಂದೂ ವಿವರಿಸಲಾಗಿದೆ. (೮) ಬಸವಣ್ಣನವರ ದೃಷ್ಟಿಯಲ್ಲಿ ಹೆಣ್ಣು ಮಹಾದೇವಿ ಎಂದು ಹೇಳಿದೆ. ಕೊನೆಯಲ್ಲಿ ಬಸವಣ್ಣನವರ ಹಿರಿಮೆಯನ್ನು ಎತ್ತಿತೋರಿಸಲಾಗಿದೆ.

## ೬

**ಗ್ರಂಥ :** ಅಣ್ಣನ ಸೂಳ್ನುಡಿ

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಕೊಪ್ಪಳ (ವೀ. ರು.)

**ಆಕಾರ :** ೯×೬ ಸೆ. ಮಿ.

**ಪುಟ :** ೯೦

**ಸ್ಥಳ :** ಧಾರವಾಡ

**ಪ್ರಕಾಶಕ :** ಸಂಪಾದಕ

**ಆವೃತ್ತಿ :** ಪ್ರಥಮ

**ಮಿತಿ :** ೧೯೪೦ ?

**ಬೆಲೆ :** ೦-೪-೦

ಸಾರಾಂಶ : ಶ್ರೀ ಕೊಪ್ಪಳ ಅವರು “ಬಸವಣ್ಣನವರ ಹಿರಿದಪ್ಪ ನುಡಿಗಳನ್ನೊಳಗೊಂಡು ಈ ಕಿರಿದಪ್ಪ ಹೊತ್ತಿಗೆಯನ್ನು ಪ್ರಕಟಿಸಿ ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ ....... ಈ ಗ್ರಂಥವನ್ನು ಪ್ರಕಟಿಸುವಲ್ಲಿ ಸಂಪಾದಕರು ತಮ್ಮ ಸಂಶೋಧಕ ಬುದ್ಧಿಯನ್ನು ವ್ಯಕ್ತಪಡಿಸಿದ್ದಾರೆ. ಮುದ್ರಣವಾಗದ ಮತ್ತು ಮುದ್ರಣವಾದ ಹಲವು ವಚನಗ್ರಂಥಗಳನ್ನು ತಾಳ್ಮೆಯಿಂದ ಓದಿ ಅವುಗಳಲ್ಲಿ ಬಸವೇಶ್ವರನ

ವಚನಗಳನ್ನು ವಿಂಗಡಿಸಿ ಆ ವಚನಗಳಲ್ಲಿ ತಿರುಳಿನಂತಿರುವ ಮಹತ್ವದ ಮಾತು ಗಳನ್ನು 'ಅಣ್ಣನ ಸೂಳ್ನುಡಿಗಳು' ಎಂದು ಹೆಸರಿಟ್ಟು ಅಕಾರಾದಿಯಾಗಿ ಪ್ರಕಟಿಸಿ ದ್ದಾರೆ. ಅವರು ಈ ಬಗೆಯಲ್ಲಿ ವಚನ ಶಾಸ್ತ್ರದ ಹೊಸ ಸಂಶೋಧನ ಮಾರ್ಗವನ್ನು ಅನುಸರಿಸಿರುವದು ನಿಜವಾಗಿ ಶ್ಲಾಘನೀಯವಾದುದು."

—ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೪; ಸಂಚಿಕೆ ೧-೨; ವಿಮರ್ಶೆ ಪು. ೪೧, ಶಕೆ ೧೮೬೨.

## ೭

**ಗ್ರಂಥ :** ಅಷ್ಟೋತ್ತರ ಶತ ಬಸವನಾಮಾವಳಿ

**ಪ್ರಭೇದ :** ನಾಮಾವಳಿ

**ಕರ್ತೃ :** ?

**ಕಾಲ :** ?

**ಸಂಪಾದಕ :** ಕೊಪ್ಪಳ (ವೀರಭದ್ರಪ್ಪ ರು.)

**ಆಕಾರ :** ೧೧×೯ ಸೆ. ಮಿ.

**ಪುಟ :** ೧೩ ರಿಂದ ೧೯

**ಸಾಲು :** ೧೮

**ಅಕ್ಷರ :** ೧೨

**ಸ್ಥಳ :** ಧಾರವಾಡ

**ಪ್ರಕಾಶಕ :** ನವಕಲ್ಯಾಣ ಸೇವಾ ಸಮಿತಿ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೧

**ಸಾರಾಂಶ :**

**ಆದಿ :** ಕಂದ : ಬಸವನ ನಾಮಾಮೃತ ಮಂ ।
ರಸನೆಯೊಳನವರತವಿಟ್ಟು (ಸಲೆ) ರಾಜಿಸುವ ॥
ರಸಿಕ ಶಿರೋಮಣಿಯೆನಿಸುವ- ।
ನಸಮಾಕ್ಷನ ಭಕ್ತನೆನಿಪನನುಪಮ ವಿಭವಂ ॥

೧ ಶ್ರೀಮದನಂತಂ ಬಸವನ ನಾಮಂ
೨ ಸೋಮಸಮಾಕೃತಿ ಬಸವನ ನಾಮಂ
೩ ಮದ್ಗುರು ರೂಪಂ ಬಸವನ ನಾಮಂ
೪ ಸದ್ಗುಣ ಸಾಂದ್ರಂ ಬಸವನ ನಾಮಂ

ಅಂತ್ಯ :

೧೦೭ ಮೂಲ ಮೂರ್ತಿಘನ ಬಸವನ ನಾಮಂ
೧೦೮ ನೀಲಕಂಠ ಗುರು ಬಸವನ ನಾಮಂ

ಕಂದ॥ ಗುರುಬಸವರಾಜನನುಪಮ ।
ನೆರೆ ನೂರಾಯೆಂಟುನಾಮ ನೇಮದಿ ಸತತಂ ।
ವರಜಿಹ್ವಾಗ್ರದಿ ಜಪಿಸಲು
ಭರದಿಂದೊಲಿದೀವುದಸಮಭಾಸ್ವತ್‌ಪದಮಂ ॥

'ಬಸವಲಿಂಗ ನಾಮಾವಳಿ ಮತ್ತು ಅಷ್ಟೋತ್ತರಶತ ಬಸವನಾಮಾವಳಿ' ಎಂಬ ಶಿರೋನಾಮದಲ್ಲಿ ಇದು ಪುನರ್ಮುದ್ರಣವಾಗಿದೆ. "ಇವುಗಳ ಪಾರಾಯಣದ ಸಂಕಲ್ಪಶಕ್ತಿಯಿಂದ ಪ್ರಾಪಂಚಿಕ ಈತಿ – ಬಾಧೆಗಳನ್ನು ನಿವಾರಿಸಿಕೊಂಡ ಅನೇಕ ಉದಾಹರಣೆಗಳನ್ನು ಕೇಳುತ್ತೇವೆ. ಈಚೆಗೆ ಆಸ್ತಿಕ್ಯಭಾವವು ಕಡಿಮೆಯಾಗುತ್ತ ನಡೆದ ಈ ಸಮಯದಲ್ಲಿ ಈ ಸ್ತೋತ್ರಗಳ ಪಠಣ ಪಾರಾಯಣಗಳಿಂದುಂಟಾಗುವ ಹಿತವನ್ನರಿತು ಅನ್ಯರಿಗೆ ಅದನ್ನು ಕಾಣಿಸಿಕೊಡುವ ಮತಿವಂತರಿಗೆ ಇದರಿಂದ ಉಪಯೋಗವಾದೀತೆಂದು ನೆನಿಸಿ ಅಚ್ಚುಗೊಳಿಸಲಾಗಿದೆ"

—ಪ್ರಕಾಶಕರ 'ಮುನ್ನುಡಿ'ಯಿಂದ

೮

ಗ್ರಂಥ : ಅಷ್ಟೋತ್ತರ ಶತನಾಮ ಗದ್ಯ

ಸಾರಾಂಶ : "ಈ ವರೆವಿಗೆ ಈ ಗದ್ಯವು ಪ್ರಕಟವಾಗಿಲ್ಲ. ಶ್ರೀ ಪ್ರಭಾಕರ ಶಾಸ್ತ್ರಿಗಳು ಇವರ ಆದ್ಯಂತಗಳನ್ನು—

ಆದಿ : ಶ್ರೀಮದ್ಗುರು ಬಸವೇಶ ನಮಸ್ತೇ । ಸಮಯ ಭವನನಿರ್ಮಾಮ ನಮಸ್ತೇ ।

ಅಂತ್ಯ: ಆದ್ಯ ನಮಸ್ತೇ, ವೇದ್ಯ ನಮಸ್ತೇ, ತತ್ವ ನಮಸ್ತೇ, ಚಿತ್ವ ನಮಸ್ತೇ, ಭಾವ ನಮಸ್ತೇ, ಭಾವಿ ನಮಸ್ತೇ, ಸದ್ಗುರು ಬಸವಸ್ವಾಮಿ ನಮಸ್ತೇ,

ಎಂದು ಬಸವಪುರಾಣ ಪೀಠಿಕೆಯಲ್ಲಿ ಬರೆದಿದ್ದಾರೆ. ಈ ಗ್ರಂಥ ನಾಮಾನುಸಾರವಾಗಿ ಈ ಗದ್ಯದಲ್ಲಿ ನೂರೆಂಟು ಪಾದಗಳಿರುವಂತೆ ತೋರುತ್ತದೆ."

—ಶ್ರೀ ಬಂಡಾರು ತಮ್ಮಯ್ಯನವರು

---

ಆಕರ :

೧. ಶರಣಸಾಹಿತ್ಯ. ಸಂಪುಟ ೧೭; ಸಂಚಿಕೆ ೭; ಪು. ೪೪೧-೪೩; ಅಕ್ಟೋಬರ ೧೯೫೪.

೯

**ಗ್ರಂಥ : ಅಕ್ಷರಾಂಕನ ಗದ್ಯ**

**ಪ್ರಭೇದ :** ಕಂದ- ಉತ್ಪಲಮಾಲಾವೃತ್ತ ಇತ್ಯಾದಿ. **ಪದ್ಯ:** ೪೦

**ಕರ್ತೃ :** ಪಾಲ್ಕುರಿಕಿ ಸೋಮನಾಥ

**ಕಾಲ :** ಸು. ೧೧೯೫

**ಆಕಾರ :** ತಾಡವೋಲೆ, ೫.೪×೨ ಇಂಚು

**ಪತ್ರ :** ೧೦೫-೧೧೧

**ಸಾಲು :** ೧೧

**ಅಕ್ಷರ :** ೨೮

**ಸಾರಾಂಶ :** ಬಸವಣ್ಣನವರ ವರ್ಣನೆಯಿದೆ. ಗದ್ಯವೆಂದು ಹೆಸರಿದ್ದರೂ ಪದ್ಯರೂಪವಾಗಿದೆ. ಆದ್ಯಂತ ಕಂದಗಳನ್ನು ಬಿಟ್ಟರೆ ಮಿಕ್ಕ ಪದ್ಯಗಳೆಲ್ಲ 'ಬಸವೇಶ ಪಾಹಿಮಾಂ' ಎಂದು ಮುಗಿಯುತ್ತವೆ.

**ಆದಿ :** ಶ್ರೀಗುರು ಬಸವಲಿಂಗಾಯನಮಃ । ಅಕ್ಷರಾಂಕ ಗದ್ಯ

ಕಂದ॥ ಶ್ರೀಯುತ ನಮಶ್ಶಿವಾಯೆ ।
ತ್ಯಾಯತ ಪಂಚಾಕ್ಷರಿ ಪ್ರಣವ ಸಂಭೂತ ।
ಸ್ವಾಯತ ಭಾವನ್ನಕ್ಷರ ।
ಕಾಯಸ್ಥನೇ ನಿಂಮ ಪೊಗಳ್ವೆ ನಾಂ ಬಸವೇಶಾ ।

ಅಕಾರಾದಿ ಕ್ಷಕಾರ ವರೆಗಿನ ಎಲ್ಲ ವರ್ಣನೆಗಳಿಂದ ಪ್ರಾರಂಭವಾಗುವ ಶಬ್ದ ಗಳಿಂದ ಬಸವಣ್ಣನವರನ್ನು ಸ್ತುತಿಸಲಾಗಿದೆ. ಒಂದು ಪದ್ಯವನ್ನಿಲ್ಲಿ ಕೊಡುವೆವು.

ಅಮಿತಯಶಸ್ಕ, ಆದ್ವಯನ ಇದ್ರುಚಿ ಈಶ್ವರ ಉಗ್ರ ಊರ್ಜಿತ ।
ಕ್ರಮ ವೃಷಭಾಂಕ ಋಜಹರ ಌಸ್ಥಿತಿ ೡಪ್ತಿಕ, ಏಕರುದ್ರ ಐ ।
ಪ್ರಮಹಿತ ರೂಪ ಓಮಿತಿ ಪದದ್ವಿತಿ ಔರ್ವಲಲಾಮ ಅಂಬಿಕಾ ।
ಸಮರಸಭಾವ ಅಃಕಲಿತ ವರ್ಣನು ತಾಂಬಸವೇಶಪಾಹಿಮಾಂ ॥

ಅಂತ್ಯ :

ಕಂದ॥ ಇತಿ ಭಾವನ್ನಕ್ಷರ ಸಂ ।
ಸ್ತುತಿ ಸಂಕಲಿತಾಕ್ಷರಾಂಕಿತ ಸ್ತೋತ್ರಮುಮಾ ।
ಪತಿ ನಿಮಗರ್ಪಿಸಿದೇಂ ಸ ।
ಸದ್ಯತಿಯಿಂ ಪಾಲ್ಕುಱಿಕೆ ಸೋಮಕೃತಿ ಬಸವೇಶಾ ॥ ೧ ॥

ಶಿವಮಸ್ತು ಭಕ್ತಿವಿಭವ್ರೋ ।
ಸ್ತ್ವವ್ರೋಸ್ತು [ ಭ ] ವದಕ್ಷರಾಂಕ ಪಠಣ ಶ್ರವಣ ।
ಸ್ತವನಾಸಕ್ತರಿಗೆ [ಮ]ಹೋ ।
ತ್ಸ ವ್ರೋಸ್ತುವಾಕ್ಸಿದ್ಧಿರಸ್ತು ಶಿವಬಸವೇಶಾ ॥ ೨ ॥

ಅಕ್ಷರಾಂಕಗದ್ಯ ಸಮಾಪ್ತ ಮಂಗಳ ಮಹಾ ಶ್ರೀ

" ಇವರಲ್ಲಿ ಅಕಾರಾದಿ ಕ್ಷಕಾರಾಂತ ವರೆಗಿನ ವರ್ಣಮಾಲೆಯ ಅಕ್ಷರಗಳನ್ನು ಕ್ರಮವಾಗಿ ಪ್ರತಿಪಾದದ ಪ್ರಥಮಾಕ್ಷರವಾಗಿ ಉಪಯೋಗಿಸಲಾಗಿದೆ. ಇದನ್ನು ಅಕ್ಷರ ಮಾಲಿಕೆ, ಅಕ್ಷರಾಂಕ ಪದ್ಯಗಳಾಗಿ ಎರಡು ಭಾಗಗಳಾಗಿ ರಚಿಸಿದ್ದರೂ ಇದಕ್ಕೆ ಅಕ್ಷರಾಂಕ ಗದ್ಯವೆಂದೇ ವ್ಯವಹಾರವಿದೆ.

ಉದಾಹರಣೆ:-- ಅಪಿತ ಶಿವಶೃಂಗಾರ ಓಂ - ಆದಿಪದ ವಿಸ್ತಾರ ಓಂ,
ಇಹಪರ ಸುಖಾದಾರ ಓಂ - ಈಷಣತ್ರಯ ದೂರ ಓಂ,
ಉದ್ಧುರ ಗುಣೋಪೇತ ಓಂ - ಊರ್ಧ್ವರೇತೋಜಾತ ಓಂ,
ಷಡ್ವರ್ಗ ನಿರ್ಮುಕ್ತ ಓಂ - ಸಹಜ ಜಂಗಮ ಭಕ್ತ ಓಂ,
ಕ್ಷರ ವಿಮುಕ್ತ ಚಾರಿತ್ರ ಓಂ - ಅಕ್ಷರಸ್ತುತಿ ಪಾತ್ರ ಓಂ.

ಅಕ್ಷರಾಂಕ ಪದ್ಯ:— ಈ ಪದ್ಯಗಳು ಕನ್ನಡ ಭಾಷೆಯವೆಂದು ನಿಸ್ಸಂಶಯವಾಗಿಹೇಳ ಬಹುದು. ಇದರಲ್ಲಿ ಸರ್ವಾಕ್ಷರಗಳನ್ನೆಲ್ಲ ಸೇರಿಸಿ ಒಂದು ಪದ್ಯವನ್ನೂ, ವ್ಯಂಜನಾಕ್ಷರ ಗಳಿಗೆ, ಪ್ರತ್ಯೇಕ ಅಕ್ಷರಕ್ಕೂ ಒಂದೊಂದರಂತೆ ಮೂವತ್ತೈದು ಪದ್ಯಗಳನ್ನೂ,

ಆದ್ಯಂತಗಳಲ್ಲಿ ಪೂರ್ವೋತ್ತರ ಪೀಠಿಕೆಗಳಾದ- ಬಸವಸ್ತೋತ್ರ ಫಲಶ್ರುತಿಗಳನ್ನೂ ರಚಿಸಿದ್ದಾನೆ".[೫]

—ಶ್ರೀ ಬಂಡಾರು ತಮ್ಮಯ್ಯನವರು

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚೀ. ಭಾ. ೧; ಪು. ೧೧; ನಂ. ೧೩; ಅದೇ ಪು. ೧೦; ನಂ. ೧೨; ಭಾ. ೩; ಪು. ೩೦; ನಂ. ೧೦೩೯.

೨. Descriptive Catalogue of the Kannada Manuscripts vol. III. p. 735.

೩. Descriptive Catalogue of Manuscripts in the K.R.I. - Dharwar. vol. V. p. 13-20.

೪. ಕರ್ಣಾಟಕ ಕವಿಚರಿತೆ. ಭಾ. ೧; ಪು. ೨೯೧.

೫. ಶರಣಸಾಹಿತ್ಯ, ಸಂಪುಟ ೧೭ ; ಸಂಚಿಕೆ ೭; ಪು. ४४೧.

## ೧೦

ಗ್ರಂಥ : ಅಕ್ಷರಾಂಕನ ಗದ್ಯ

ಪ್ರಭೇದ : ಕಂದ ಉತ್ಪಲ ಮಾ. ಇತ್ಯಾದಿ ವೃತ್ತ— ಟೀಕೆ

ಕರ್ತೃ : ಪಾಲ್ಕುರಿಕಿ ಸೋಮನಾಥ

ಕಾಲ : ಸು. ೧೧೯೫

ಟೀಕಾಕಾರ : ರೇವಣಾರಾಧ್ಯ

ಆಕಾರ : ತಾಡವೋಲೆ ೭ × ೧ ಇಂಚು.

ಪತ್ರ : ೧ ರಿಂದ ೨೫.

ಸಾಲು : ೧೦–೧೧

ಅಕ್ಷರ : ೬೯–೪೦

ಸಾರಾಂಶ : ಬಸವಸ್ತುತಿ.

ಆದಿ ॥ ಶ್ರೀಗುರು ಬಸವಲಿಂಗಾಯನಮಃ ॥ ಅಕ್ಷರಾಂಕ ಗದ್ಯದ ವ್ಯಾಖ್ಯಾನ.

ಕಂದ ॥ ಶ್ರೀಯುತ ನಮಃಶಿವಾಯೇ – ।
ತ್ಯಾಯುತ ಪಂಚಾಕ್ಷರೀ ಪ್ರಣವ ಸಂಭೂತ ।
ಸ್ವಾಯತ ಭಾವನ್ನಕ್ಷರ ।
ಕಾಯಸ್ಥನೇ ನಿಮ್ಮ ಪೊಗಳ್ವೆನಾಂ ಬಸವೇಶಾ ॥

ಟೀಕು ॥ ಶ್ರೀಯುತ = ನಿರತಿಶಯೈಶ್ವರ್ಯೋಪಲಕ್ಷಿತವಾದ; ನಮಃ ಶಿವಾಯೇತಿ = ನಮಃ ಶಿವಾಯಯೆಂಬ ; ಆಯತ = ದೀರ್ಘವಾದಂಥ; ಪಂಚಾಕ್ಷರೀ = ಶ್ರೀಶೈವ ಪಂಚಾಕ್ಷರಿಯೆಂಬ; ಪ್ರಣವ = ಓಂಕಾರದಲ್ಲಿ; ಸಂಭೂತ = ಯ್ಯೈದಲುಪಟ್ಟ; ಸ್ವ = ತಂನ ಸಂಬಂಧವಾದ; ಆಯತ = ಉನ್ನತವಾದ; ಭಾವಂ = ಚಿತ್ತವನುಳ್ಳಂಥ; **ಅಕ್ಷರಕಾಯಸ್ತನೇ**–ಅಕ್ಷರ = ಮಾತೃಕಾಕ್ಷರಗಳೆಂಬ; ಕಾಯ = ಶರೀರದಲ್ಲಿ; ಸ್ಥ = ಇದ್ದಂಥಾ; ಬಸವೇಶಾ = ಎಲೆ ಬಸವೇಶ್ವರ; ನಿಂಮ ನಾಂ ಪೊಗಳ್ವೆ = ನಿಮ್ಮ ಸ್ತೋತ್ರವನು ನಾನು ಮಾಡ್ವೆನು ॥ ೧ ॥

ಅಂತ್ಯ : ಶಿವಮಸ್ತು ಭಕ್ತಿವಿಭವೋ – ।
ದ್ಭವೋಸ್ತುವಕ್ಷರಾಂಕ ಪಠಣ ಶ್ರವಣ ॥
ಸ್ತವನಾಸಕ್ತರಿಗೆ ಮಹೋ।
ತ್ಸವೋಸ್ತು ವಾಕ್ಸಿದ್ಧಿರಸ್ತು ಶಿವಬಸವೇಶಾ ॥ ೨ ॥

ಟೀಕು ॥ ಶಿವ= ಮಂಗಲಸ್ವರೂಪನಾದಂಥ; ಬಸವೇಶಾ= ಎಲೋ ಬಸವೇಶ್ವರನೆ; ಅಕ್ಷರಾಂಕ = ನಿನ್ನ ಅಕ್ಷರಾಂಕ ಸ್ತೋತ್ರದ; ಪಠಣ = ಪಾಠದಲ್ಲಿ; ಶ್ರವಣ= ಕೇಳ್ವಿಕೆಯಲ್ಲಿ; ಸ್ತವನ = ಸ್ತೋತ್ರದಲ್ಲಿ; ಆಸಕ್ತರಿಗೆ = ಆಸಕ್ತಿಯುಳ್ಳವರಿಗೆ; ಶಿವಮಸ್ತು = ಮಂಗಲವಾಗಲಿ; ಭಕ್ತಿ = ಭಕ್ತಿಯ; ವಿಭವ = ವೈಭವದ; ಉದ್ಭವಃ = ಬೆಳವಣಿಗೆಯು; ಅಸ್ತು = ಆಗಲಿ; ಮಹೋತ್ಸವಃ = ದೊಡ್ಡಿತ್ತಾದ ಪೊಸಗೆಯು; ಅಸ್ತು = ಆಗಲಿ; ವಾಕ್ಸಿದ್ಧಿಃ = ವಾಕ್ಸಿದ್ಧಿಯು; ಅಸ್ತು = ಆಗಲಿ. ॥ ಅಕ್ಷರಾಂಕ ಗದ್ಯವ್ಯಾಖ್ಯಾನ ಸಂಪೂರ್ಣ ॥ ಬಸವೇಶ್ವರಾಯನಮಃ ಶ್ರೀ ಶ್ರೀ ಶ್ರೀ.

---

ಆಕರ :

೧. Descriptive Catalogue of Manuscripts in the K. R. I.– Dharwar. vol. V. p. 13-15.

೨. ಕರ್ನಾಟಕ ಕವಿಚರಿತೆ, ಭಾ. ೧. ಪು. ೨೯೧.

೩. ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯ ವಚನವಾಙ್ಮಯ ಸಂಶೋಧನ ವಿಭಾಗದ ಹಸ್ತಪ್ರತಿ ಭಂಡಾರ, ಗ್ರಂಥ ನಂ. ೪೧೧.

## ೧೧

**ಗ್ರಂಥ : ಆತ್ಮಾರ್ಪಣ**

**ಪ್ರಭೇದ :** ನಾಟಕ

**ಕರ್ತೃ :** ಕಾವ್ಯಾನಂದ **ಗು. ನಾ.** ( **ನಿಜ ನಾ.** ಸಿದ್ಧಯ್ಯ ಪುರಾಣಿಕ )

**ಕಾಲ :** ಸು. ೧೯೨೫.

**ಆಕಾರ :** ೧೮×೧೨ ಸೆ. ಮಿ.

**ಪುಟ :** ೧೧೧

**ಸ್ಥಳ :** ಹೈದರಾಬಾದು

**ಪ್ರಕಾಶಕ :** ವೀರಶೈವ ತರುಣ ಸಂಘ

**ಆವೃತ್ತಿ :** ಪ್ರಥಮ

**ಮಿತಿ :** ೧೯೪೨?

**ಸಾರಾಂಶ :** "ಇದು ಶ್ರೀ ಬಸವೇಶ್ವರನ ಜೀವನ ಚರಿತ್ರೆಯನ್ನು ಕುರಿತಾದ ನಾಟಕ. ಬಸವಣ್ಣನು ತನ್ನ ಸರ್ವಸ್ವವನ್ನೂ, ತನ್ನ ದೇಶದ ಹಾಗೂ ಸಮಾಜದ ಉನ್ನತಿಗಾಗಿ ಅರ್ಪಿಸಿದನೆಂಬ ವಿಷಯ ಪ್ರಸಿದ್ಧನಾಗಿದೆ. ಶ್ರೀ ಬಸವೇಶ್ವರನ ಜೀವನ ರಹಸ್ಯಗಳನ್ನು ಕಾವ್ಯಾನಂದ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಶ್ರೀಮಾನ್ ಪುರಾಣಿಕ ಸಿದ್ಧಯ್ಯನವರು ಈ ನಾಟಕದಲ್ಲಿ ಅತ್ಯಂತ ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಕಾವ್ಯಾನಂದರ ಶೈಲಿ ಸರಳವಾಗಿದೆ. ಅವರು ತಮ್ಮ ಭಾವಗಳನ್ನು ಚನ್ನಾಗಿ ವ್ಯಕ್ತಪಡಿಸಿದ್ದಾರೆ. ಈ ನಾಟಕ ಕಲಾಪೂರ್ಣವಾಗಿದೆ".

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

---

ಆಕರ :

೧. ಶರಣಸಾಹಿತ್ಯ. ಸಂಪುಟ ೫; ಸಂಚಿಕೆ ೪-೫-೭. ಪು. ೨೧೬. ೧೯೪೨.

೧೨

**ಗ್ರಂಥ : ಇದುವೆ ಬಸವನ ಬದುಕು**

**ಪ್ರಭೇದ :** ಗದ್ಯ–ವಚನ–ಅರ್ಥ

**ಕರ್ತೃ :** ಹಕಾರಿ ( ದೇವೇಂದ್ರಕುಮಾರ ಸಿದ್ದಪ್ಪ )

**ಕಾಲ :** ಸು. ೧೯೨೫

**ಆಕಾರ :** ೧೨×೯.೫ ಸೆ. ಮಿ.

**ಪುಟ :** ೧೦೪

**ಸ್ಥಳ :** ಕಲಬುರ್ಗಿ

ಪ್ರಕಾಶಕ : ಆಶಾ ಪ್ರಕಟನಾಲಯ

ಆವೃತ್ತಿ : ಪ್ರಥಮ

ಮಿತಿ : ಜನವರಿ ೧೯೬೦

ಬೆಲೆ : ೦೦=೬೫ ಪೈಸೆ

ಸಾರಾಂಶ : ಬಸವಣ್ಣನವರ ಸಾಂಪ್ರದಾಯಿಕ ಚರಿತ್ರೆಯನ್ನು ಪ್ರಾರಂಭದಲ್ಲಿ ವಿವರಿಸಿದೆ. ಪಂಚಾಚಾರ ಮತ್ತು ಅಷ್ಟಾವರಣಗಳ ಅರ್ಥವಿವರಣೆಯನ್ನು ಮಾಡಲಾಗಿದೆ. 'ಕೂಡಲಸಂಗಮ ದೇವ' ಮುದ್ರಿಕೆಯ ಶ್ಲೇಷಾರ್ಥವನ್ನು ಕೊಡಲಾಗಿದೆ. ಕೊನೆಗೆ ಬಸವಣ್ಣನವರ ೬೪ ವಚನಗಳಿಗೆ ಭಾವಾನುವಾದವಿದೆ.

೧೬

**ಗ್ರಂಥ : ಉದಯರವಿ** ಭಾ ೧.

ಪ್ರಭೇದ : ಕಾದಂಬರಿ

ಕರ್ತೃ : ಪುಟ್ಟಸ್ವಾಮಯ್ಯ ( ಬಿ )

ಕಾಲ : ಜ : ೨೭-೬-೧೮೯೭

ಆಕಾರ : ೧೮×೧೩ ಸೆ. ಮಿ.

ಪುಟ : ೪+೨೬೧ = ೨೬೫

ಸ್ಥಳ : ಬೆಂಗಳೂರು

ಪ್ರಕಾಶಕ: ಶಾರದಾ ಪ್ರಕಟನಾಲಯ

ಆವೃತ್ತಿ : ಪ್ರಥಮ

ಮಿತಿ : ಫೆಬ್ರುವರಿ ೧೯೫೯

ಬೆಲೆ : ೩ = ೦೦ ರೂ.

ಮೂಲ : ಶಾರದಾ ಪ್ರಕಟನಾಲಯ ಪ್ರಕಟಣೆ, ೮೬

ಸಾರಾಂಶ : " ಕನ್ನಡ ನಾಡು, ನುಡಿ, ಸಂಸ್ಕೃತಿಗಳ ಇತಿಹಾಸದಲ್ಲಿ ಕಲ್ಯಾಣಿಯ ಚಾಲುಕ್ಯ ಅರಸರ ರಾಜ್ಯಕಾಲವು ನಾನಾದೃಷ್ಟಿಗಳಿಂದ ಪ್ರಾಮುಖ್ಯವೂ, ಪ್ರಭಾವಪೂರ್ಣವೂ ಆಗಿರುತ್ತದೆ .... ಪೆರ್ಮಾಜಗದೇಕಮಲ್ಲನ ಅನಂತರ ಚಾಲುಕ್ಯ ಸಿಂಹಾಸನವನ್ನೇರಿದ ನೂರ್ಮಡಿ ತೈಲಪನು ವಿಲಾಸಪ್ರಿಯನೂ, ಆಲಸಿಯೂ,

ರಾಜಕಾರಣದಲ್ಲಿ ಅನನುಭವಿಯೂ ಆಗಿದ್ದುದರಿಂದ ರಾಜ್ಯಸೂತ್ರಗಳು ಚಾಲುಕ್ಯ ಸಾಮಂತನೂ, ಮಹಾದಂಡನಾಯಕನೂ ಆಗಿದ್ದ ಬಿಜ್ಜಳನ ಅಧೀನವಾದವು. ಈ ರಾಜ್ಯಾಪಹಾರ ನಡೆದ ೧೨ನೆಯ ಶತಮಾನದ ಮೇಲೆ, ಅಭೂತ ಪೂರ್ವವಾದ ಸಾಹಿತ್ಯ-ಧಾರ್ಮಿಕ ಕ್ರಾಂತಿಯು ಹೊಲಬನ್ನು ಚಲ್ಲಿ, ಬಿಜ್ಜಳನ ರಾಜ್ಯಕಾಲವನ್ನು ಐತಿಹಾಸಿಕ ಪ್ರಾಮುಖ್ಯತೆಗೇರಿಸಿದ ಭಕ್ತಿಭಂಡಾರಿ ಬಸವಣ್ಣನವರ ಬಾಲ್ಯ, ತಾರುಣ್ಯ ಮತ್ತು ಬಿಜ್ಜಳನ ಕರಣಿಕರಾಗಿ ಅವರು ರಾಜಕೀಯವನ್ನು ಪ್ರವೇಶಿಸಿ ಮಂತ್ರಿ ಪದವಿಗೇರಿದುದು, ಈ ಘಟ್ಟ "ಉದಯರವಿ" ಕಾದಂಬರಿಯ ಹಿನ್ನೆಲೆಯಾಗಿ ಆ ಕಾಲದ ಸಾಮಾಜಿಕ, ರಾಜಕೀಯ, ಪರಿಸ್ಥಿತಿಯನ್ನು, ನೆನೆದು ಸಮಸಾಮಯಿಕ ಸಾಹಿತ್ಯ ಶಾಸನಗಳಿಂದ ನಾವು ಅರಿಯಬಹುದಾದ ಪರಿಮಿತಿಯಲ್ಲಿ ನಿರೂಪಿಸಲು ಯತ್ನಿಸಿದೆ. ಇದಕ್ಕೆ ಸಹಾಯಕವಾದ ಚಾರಿತ್ರಿಕ, ಸಾಂಸ್ಕೃತಿಕ ಮತ್ತು ಭೌಗೋಳಿಕ ವಿವರಗಳನ್ನು ಪ್ರಸ್ತಾವನೆ ಮತ್ತು ಟಿಪ್ಪಣೆಗಳಲ್ಲಿ ಕೊಡಲಾಗಿದೆ."

— ಲೇಖಕರ 'ಮೊದಲಮಾತಿ' ನಿಂದ.

**ನೋಡು :** ೧. ರಾಜ್ಯಪಾಲ
೨. ಕಲ್ಯಾಣೇಶ್ವರ
೩. ನಾಗಬಂಧ
೪. ಮುಗಿಯದ ಕನಸು
೫. ಕ್ರಾಂತಿ ಕಲ್ಯಾಣ

೧೪

**ಗ್ರಂಥ :** **ಕನ್ನಡ ಕುಲದೀಪ ಶ್ರೀ ಬಸವಣ್ಣನವರ ಜೀವನ**

**ಪ್ರಭೇದ :** ಗದ್ಯ

**ಕರ್ತೃ :** ಸಿಂಪಿ ( ಲಿಂಗಣ್ಣ )

**ಕಾಲ :** ಜ : ೧೧-೨-೧೯೦೫

**ಸಂಪಾದಕ :** ಬುರ್ಲಿ ( ಬಿಂದುಮಾಧವ )

**ಆಕಾರ :** ೧೮×೧೨ ಸೆ. ಮಿ.

**ಪುಟ :** ೭+೧೨೦ = ೧೨೭

**ಸಾಲು :** ೨೭

**ಅಕ್ಷರ :** ೨೫

ಸ್ಥಳ: ಧಾರವಾಡ

ಪ್ರಕಾಶಕ: ಮಿಂಚಿನಬಳ್ಳಿ ಛಾವಣಿ

ಆವೃತ್ತಿ: ಪ್ರಥಮ ೧೯೫೪; ದ್ವಿತೀಯ ೧೯೫೭

ಮಿತಿ: ೧೯೫೭

ಬೆಲೆ: ೧-೮-೦

ಮಾಲೆ: ಮಿಂಚಿನಬಳ್ಳಿ ೧೬ನೆಯ ವರ್ಷದ ೩ನೆಯಕುಡಿ

ಸಾರಾಂಶ: ಬಸವಣ್ಣನವರ ಜೀವನವನ್ನು 'ಕನ್ನಡ ಕುಲೋದ್ಧಾರಕ' 'ಅರಿತ ಶರಣ' 'ಗೆಲುವೆನೆಂಬ ಭಾಷೆ' 'ನ್ಯಾಯ ನಿಷ್ಠುರಿ-ಲೋಕವಿರೋಧಿ' 'ಸಂಗನಿಗೆ ವೀರ, ಶರಣರಿಗೆ ವಧು' 'ಬಸವಣ್ಣನು ಹಾಯ್ದ ಹೆಜ್ಜೆ' 'ಬಸವಣ್ಣನ ಸಂಸಾರ' 'ಬಸವಣ್ಣನ ಬಾಳಬಟ್ಟೆ' 'ನಿಜ್ಜ ಶಿವರಾತ್ರಿ' 'ಮಹಾಮನದ ಭಕ್ತಿ' ಎಂಬ ೧೦ ತಲೆಬರಹಗಳಲ್ಲಿ ಔಚಿತ್ಯಪೂರ್ಣವಾಗಿ ವಿವರಿಸಲಾಗಿದೆ. ಗ್ರಂಥದ ಮುನ್ನುಡಿಯಲ್ಲಿ ಶ್ರೀ ದ. ರಾ. ಬೇಂದ್ರೆಯವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ:

"ಇತಿಹಾಸ ಸಂಶೋಧಕರ ಬಸವಣ್ಣ ಬೇರೆ, ಮತಾಭಿಮಾನಿಗಳ ಬಸವಣ್ಣ ಬೇರೆ, ಕನ್ನಡ ಕುಲದ ಬಸವಣ್ಣ ಬೇರೆ, ಶಿವಶಕ್ತಿ ಸಾಮರಸ್ಯದ ವಾಹನವಾದ ನಂದಿ ಧರ್ಮದ ಬಸವಣ್ಣ ಮತ್ತೆ ಬೇರೆ! ಈ ಚತುರ್ಮುಖದಲ್ಲಿ ಹೊಳೆದು ಹೋಗುವ, ಆದರೂ ತನ್ನ ಹೃದಯಕ್ಕೆ ಪಂಚಮ ಮುಖದಲ್ಲಿ ನೆಲೆ ನಿಂತ ಮೂರ್ತಿಯನ್ನು ತೆರೆದು ತೋರುವ ರಸೈಕ ಸಾಹಸವನ್ನು ಲಿಂಗಣ್ಣನವರು ಇಲ್ಲಿ ಮಾಡಿದ್ದಾರೆ. ಇಲ್ಲಿ ಎಂಥ ಎತ್ತರನ್ನವರಿಗೂ ನಿಲುಕದ ವಿಚಾರಗಳಿವೆ; ಎಂಥ ಕುಳ್ಳರಿಗೂ ಎಟುಕುವ ವಿಚಾರಗಳೂ ಇವೆ. ಬಸವಣ್ಣನವರ ಅಸಾಮಾನ್ಯ ವ್ಯಕ್ತಿತ್ವವು ಸರ್ವ ಸಾಮಾನ್ಯರ ಭೂಮಿಗೆ ಅವತರಿಸಬೇಕಾದರೆ ಅದರ ವೇಷ-ಭೂಷಣ ಪಾರದರ್ಶಕವಾಗಬೇಕಾಗುತ್ತದೆ. ಬಸವಣ್ಣನವರ ಸುಲಭ ವಚನಗಳಲ್ಲಿಯೂ ಘನತೆ ಅಡಗಿರುತ್ತದೆ; ಅವರ ಘನ ವಚನಗಳಲ್ಲಿಯೂ ಹೃದಯಕ್ಕೆ ಸಹಜ ಸಂವೇದ್ಯವಾಗಬಲ್ಲ ಸವಿಗಾರಿಕೆ ಇರುತ್ತದೆ. ಈ ಎರಡೂ ಪಾಕಗಳನ್ನು ಒಂದು ಸಮಪಾಕಕ್ಕೆ ತರುವದು ಹಗುರಾದ ಕೆಲಸವಲ್ಲ. ಸಿಂಪಿಯವರು ಉಚಿತವಾಗಿ ವಚನ ರಚನೆಯ ಹೊಲಿಗೆ ಬಿಚ್ಚಿ ಮತ್ತೆ ಹೊಲಿದಿದ್ದಾರೆ. ಲಿಂಗಣ್ಣನವರು ಬಸವಣ್ಣನವರ ಜೀವನದ ಲಿಂಗಮುದ್ರೆಯನ್ನು ಬಿಡಿಸಿ, ಅವರ ಪ್ರಾಣಲಿಂಗದ ರತ್ನದೊಡವುಗಳ ಪ್ರಭೆಯನ್ನು ಹಬ್ಬಿಸಿತೋರಿಸಿದ್ದಾರೆ. ಆದ್ದರಿಂದ ಈ ಪ್ರಬಂಧದ ಒಂದೊಂದೂ ಅಧ್ಯಾಯವೂ ಕೂತಮೆಟ್ಟಿಗೆ ರಭಸದಿಂದ ಓದಿಬಿಡಬಹುದಾದ ಆವೇಶವನ್ನೂ ಪ್ರಚೋದಿಸುತ್ತದೆ. ಇಡೀ ಪ್ರಬಂಧವು ಮತ್ತೆ ಮತ್ತೆ ಓದಿ ಚರ್ವಣೆಯಿಂದ ರಸವನ್ನು ವರ್ಧಿಸುವಂತೆಯೂ ಆಗಿದೆ."

—ಮುನ್ನುಡಿ ಪು. ೬.

೧೫

**ಗ್ರಂಥ : ಕನ್ನಡ ಕುಲೋದ್ಧಾರಕ**

**ಪ್ರಭೇದ :** ಚರಿತ್ರೆ

**ಕರ್ತೃ :** ಸಿಂಪಿ (ಲಿಂಗಣ್ಣ)

**ಕಾಲ :** ಜ. ೧೧–೨–೧೯೦೫

**ಆಕಾರ :** ೯×೬ ಸೆ. ಮಿ.

**ಮಿತಿ :** ೧೯೪೦

**ಬೆಲೆ :** ೦–೧–೬

**ಸಾರಾಂಶ :** "ಈ ಪುಸ್ತಕದಲ್ಲಿ ಬಸವಣ್ಣನವರ ಜೀವನ ಚರಿತ್ರೆಯಿದೆ. ಇದನ್ನು ಹರಿಹರನ 'ಬಸವರಾಜ ದೇವರ ರಗಳೆ' ಯಿಂದಲೂ ಬಸವಣ್ಣನವರ ವಚನಗಳಿಂದಲೂ ತೆಗೆದುಕೊಂಡು ಬರೆಯಲಾಗಿದೆ. ಚಿಕ್ಕದಾದರೂ ಚೊಕ್ಕಟ ವಾದ ಹೊತ್ತಿಗೆ".

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

---

**ಆಕರ :**

೧. ಶರಣ ಸಾಹಿತ್ಯ. ಸಂಪುಟ ೪; ಸಂಚಿಕೆ ೧೧-೧೨; ಪು. ೩೬೬. ೧೯೪೧.

೧೬

**ಗ್ರಂಥ : ಕನ್ನಡ ಬಸವೇಶ ವಿಜಯವು**

**ಪ್ರಭೇದ :** ಗದ್ಯ

**ಕರ್ತೃ :** ಕರಿಬಸವಶಾಸ್ತ್ರಿ (ಪಿ. ಆರ್.)

**ಕಾಲ :** ಜ. ೧೮೪೮ ಮ. ೩೦–೯–೧೯೩೧

**ಆಕಾರ :** ೧೮×೧೨ ಸೆ. ಮಿ.

**ಪುಟ :** viii + ೩೯೦ = ೩೯೮

**ಸ್ಥಳ :** ಮೈಸೂರು

**ಪ್ರಕಾಶಕ :** ಬಿ. ಎ. ಕೋದಂಡರಾಮ ಶೆಟ್ಟಿ

**ಆವೃತ್ತಿ :** ಪ್ರಥಮ

ಮಿತಿ : ೧೯೨೬

ಬೆಲೆ : ೩-೦-೦ ರೂ.

**ಸಾರಾಂಶ :** ಕಂಚಿಯ ಶಂಕರಾರ್ಯ ಕವಿಗಳು ಸಂಸ್ಕೃತದಲ್ಲಿ ಬರೆದ ಬಸವ ಪುರಾಣದ ಗದ್ಯಾನುವಾದವಿದು. ಸೋಮ ಮತ್ತು ಭೀಮ ಇವರು ಕ್ರಮವಾಗಿ ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಬರೆದ ಬಸವ ಪುರಾಣಗಳನ್ನಾಧರಿಸಿ ಸಂಸ್ಕೃತ ಬಸವ ಪುರಾಣ ರಚಿತವಾಗಿದೆ. ಈ ಗ್ರಂಥದ 'ಗದ್ಯ ಸರಳವಾಗಿದೆ. ಕಥೆಯ ಓಟಕ್ಕೆ ತಡೆಯುಂಟಾಗುವದಿಲ್ಲ'.

**ನೋಡು :** ೧. ಬಸವರಾಜ ವಿಜಯಂ (ಕನ್ನಡ)
೨. ಸಟೀಕ ವೃಷಭೇಂದ್ರ ವಿಜಯ (ಕನ್ನಡ)
೩. ಸಟೀಕ ಬಸವೇಶ ವಿಜಯಂ (ಸಂಸ್ಕೃತ-ಕನ್ನಡ)
೪. ಬಸವೇಶ ವಿಜಯಂ (ಸಂಸ್ಕೃತ)

---

ಆಕರ :

೧. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪು. ೧೩-೧೪.
೨. ಲಿಂಗವಂತರ ಆಮರ ಕೃತಿಗಳು ಮತ್ತು ಲಿಂಗವಂತ ಕವಿಗಳು, ಪು. ೧೧೯.

೧೭

**ಗ್ರಂಥ :** **ಕಲ್ಯಾಣ ಜ್ಯೋತಿ ಬಸವೇಶ್ವರ**

**ಪ್ರಭೇದ :** ಏಕಾಂಕ ನಾಟಕ

**ಕರ್ತೃ :** ಪ್ಯಾಟಿಮಠ ( ರೇವಣಸಿದ್ಧರಸ )

**ಕಾಲ :** ಸು. ೧೯೨೫

**ಆಕಾರ :** ೧೮×೧೨ ಸೆ. ಮಿ.

**ಪುಟ :** ೨೪

**ಸ್ಥಳ :** ಹುಬ್ಬಳ್ಳಿ

**ಪ್ರಕಾಶಕ :** ಎ. ಎಮ್. ಕರಡಿ, ಬುಕ್‌ಸೇಲರ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೨

**ಬೆಲೆ :** ೦=೩೨ ಪೈಸೆ

೨೦

## ಗ್ರಂಥ : ಕಲ್ಯಾಣ ಮಹಾತ್ಮ್ಯೆ

**ಪ್ರಭೇದ:** ವಚನ

**ಕರ್ತೃ:** ಚೆನ್ನಬಸವಣ್ಣ

**ಕಾಲ:** ಸು. ೧೧೬೭

**ಸಂಪಾದಕ:** ಸಂಪಾದನೆಯ ಬೋಳು ಬಸವೇಶ್ವರ

**ಆಕಾರ:** ಶ್ರೀತಾಳ ೧೩×೨ ಇಂಚು

**ಪುಟ:** ೨

**ಸಾಲು:** ೧೩

**ಸಾರಾಂಶ:** ಇದರಲ್ಲಿ ಬಸವಣ್ಣನವರ ಶ್ರೇಷ್ಠತ್ವವನ್ನೂ, ಕಲ್ಯಾಣ ಪಟ್ಟಣದ ಹಿರಿಮೆಯನ್ನೂ ವರ್ಣಿಸಲಾಗಿದೆ. ಇದು ಸುದೀರ್ಘವಾದ ಒಂದೇ ವಚನ. ಶೂನ್ಯ ಸಂಪಾದನೆಯಲ್ಲಿಯೂ ಉಪಯೋಗಿಸಲಾಗಿದೆ.

**ಆದಿ:** ಕಲ್ಯಾಣದ ಮಹಾತ್ಮ್ಯೆಯ ವಚನ।
ಯಲ್ಲಾ ಶಿವಗಣಂಗಳು ಕೇಳಿ ಕೃತಾರ್ಥರಾಗಿರಯ್ಯಾ.
ಸ್ವಸ್ತಿಸಮಸ್ತ ಪ್ರಶಸ್ತಿಸಹಿತಂ ಶ್ರೀಕಲ್ಯಾಣಪುರದ ಮಹಾತ್ಮೆ ಯೆಂತೆಂದೊಡೆ :—ವಿಸ್ತರಿಸಿ ಪೇಳ್ವೆನು; ಎಲ್ಲಾ ಶಿವಗಣಂಗಳು ಕೇಳಿ ಕೃತಾರ್ಥರಾಗಿರಯ್ಯಾ.

ಮರ್ತ್ಯಲೋಕದ ಮಹಾಗಣಂಗಳು ಕೇಳಿ ಕೃತಾರ್ಥರಾಗಿರಯ್ಯಾ
ರುದ್ರಲೋಕದ ಮಹಾಗಣಂಗಳು ಕೇಳಿ ಕೃತಾರ್ಥರಾಗಿರಯ್ಯಾ.

**ಅಂತ್ಯ:** ಶಿವಾಚಾರದ ಘನವ ಮೆರೆದಾತ ಬಸವಣ್ಣ.
ಇಂತಪ್ಪ ಬಸವಣ್ಣನ ಭಕ್ತಿ–ಜ್ಞಾನ ವೈರಾಗ್ಯ ನಿಷ್ಠೆಯನ್ನು ಬರೆದೊರೆದು ನೋಡಿ ಪ್ರಜ್ವಲಿಸಿ ಪ್ರಭರಿತವ ಮಾಡುವ ಅಶ್ವಪತಿ, ಗಜಪತಿ ನರಪತಿರಾಯನ ರಾಜಾಧಿರಾಜ ಬಿಜ್ಜಳ ಮಹಾರಾಯನು, ಆ ಬಸವಣ್ಣನು ಕಲ್ಯಾಣ ಪಟ್ಟಣದಲ್ಲಿ ಸುಖಸಂಕಥಾವಿನೋದದಿಂ ರಾಜ್ಯಂಗೈವುತ್ತಿರಲು ಆ ಕಲ್ಯಾಣದ ನಾಮವಿಡಿದು ಮಹಾತ್ಮ್ಯೆಯಂ ಮನಮೆಚ್ಚಿ ವಿಶ್ವಾಸದಿಂ ಕೇಳಿದವರ್ಗೆ ಕರ್ಮಕ್ಷಯವಹುದು. ಬರೆದೋದಿದೊಡೆ ಮೋಕ್ಷಸಾಧನವಹುದು. ಇದು ಕಾರಣ ಕೂಡಲ ಚೆನ್ನ ಸಂಗಯ್ಯ ! ನಿಮ್ಮ ಭಕ್ತ ಬಸವಣ್ಣನಿದ್ದ ಠಾವೆ ಮಹಾಕಲ್ಯಾಣವೆಂದರಿದು ದಿಬ್ಯ

ಶಾಸನ ಬರೆದು ಓದಿ ಪಠಿಸಿ ಇದೆ ಸತ್ಯವೆಂದು ಸ್ಥಾಪನವ ಮಾಡಿದವರ್ಗೆ ಸರ್ವ ಸಿದ್ಧಿಯಹುದಯ್ಯಾ, ಕೂಡಲ ಚೆನ್ನಸಂಗಮದೇವಾ, ಪ್ರಜ್ವಲಿಸಿದ ಕಾರಣ ಎನ್ನ ಭವಂ ನಾಸ್ತಿಯಾಯಿತ್ತಯ್ಯಾ.

ಕಲ್ಯಾಣದ ಮಹಾತ್ಮ್ಯ ಸಮಾಪ್ತ. ಮಂಗಳಮಹಾ.

ಇದಕ್ಕೆ 'ಸಂಪಾದನೆಯಬೋಳ ಬಸವೇಶ್ವರದೇವರು ಸೇರಿಸಿದ ಬಸವಸ್ತೋತ್ರ' ವೆಂದು ವಚನ ವಾ. ಸಂ. ಸಂಸ್ಥೆಯ ಪ್ರತಿಯಲ್ಲಿ ಹೇಳಿದೆ.

---

ಆಕರ :

1. Descriptive catalogue of the Kannada Manuscripts—Madras vol. IV; MS. No. 713; p. 1037—38.
೨. ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ವಿಭಾಗದ ವಚನ ವಾಙ್ಮಯ ಸಂಶೋಧನ ಸಂಸ್ಥೆಯ ಹಸ್ತ ಪ್ರತಿ ನಂ. ೪೯, ಪತ್ರ ೧೦೨-೧೦೪. ( ಸಮಗ್ರ )

## ೨೧

**ಗ್ರಂಥ :** **ಕಲ್ಯಾಣ ವಾಣಿ**

**ಪ್ರಭೇದ :** ನಾಟಕ (ಸರಳ ರಗಳೆ)

**ಕರ್ತೃ :** ಶರಣ

**ಕಾಲ :** ಸು. ೧೯೨೫

**ಆಕಾರ :** ೧೮×೧೨ ಸೆ. ಮಿ.

**ಸ್ಥಳ :** ಕಲಬುರ್ಗಿ

**ಮಿತಿ :** ೧೯೩೯ ?

**ಬೆಲೆ :** ೧–೦–೦ ರೂ.

**ಸಾರಾಂಶ :** "ಕಲ್ಯಾಣದಲ್ಲಿ ಬಸವ ಮತ್ತು ಬಿಜ್ಜಳ ಇವರ ಅಧಿಕಾರದ ಕಡೆಯ ಕಾಲದಲ್ಲಿ ನಡೆದ ಕ್ರಾಂತಿಯ ವಿಚಾರವನ್ನು ನಾಟಕ ರೂಪದಲ್ಲಿ ಲೇಖಕರು ಈಗ್ರಂಥದಲ್ಲಿ ಚಿತ್ರಿಸಿದ್ದಾರೆ. ಇದನ್ನು ಆಧುನಿಕ ಸಾಹಿತಿಗಳ ಮಾರ್ಗ ವಿಡಿದು ಸರಳ ರಗಳೆಯ ಛಂದಸ್ಸಿನಲ್ಲಿ ಬರೆದಂತೆ ಲೇಖಕರು ಹೇಳುತ್ತಾರೆ."

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

---

ಆಕರ :

೧. ಶರಣ ಸಾಹಿತ್ಯ. ಸಂಪುಟ ೪; ಸಂಚಿಕೆ ೧-೨; ಪು. ೪೪. ಶಕೆ ೧೮೬೧.

೨೨

**ಗ್ರಂಥ : ಕಲ್ಯಾಣೇಶ್ವರ** ಭಾ. ೩

**ಪ್ರಭೇದ :** ಕಾದಂಬರಿ

**ಕರ್ತೃ :** ಪುಟ್ಟಸ್ವಾಮಯ್ಯ ( ಬಿ )

**ಕಾಲ :** ಜ. ೨೭-೬-೧೮೯೭

**ಆಕಾರ :** ೧೮×೧೨ ಸೆ. ಮಿ.

**ಪುಟ :** ೭ + ೩೨೦ = ೩೨೭

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಶಾರದಾ ಪ್ರಕಟನಾಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೦

**ಬೆಲೆ :** ರೂ. ೩=೫೦ ಪೈ.

**ಮೂಲ :** ಪ್ರಕಟನೆ, ೧೦೮

**ಸಾರಾಂಶ :** " ಚಾಲುಕ್ಯ ರಾಜ್ಯಕಾಲದಲ್ಲಿ, ಕನ್ನಡ ನಾಡು - ನುಡಿ - ಇತಿಹಾಸದಲ್ಲಿ, ಯುಗಪ್ರವರ್ತಕನಾಗಿ ಮೆರೆದ ಬಸವೇಶ್ವರನು ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿದುದು ; ಅದರಿಂದ ಕಲ್ಯಾಣದ ನಾಗರಿಕರು ಮತ್ತು ಜನಸಾಮಾನ್ಯರ ಮೇಲೆ ಆದ ಧಾರ್ಮಿಕ ಪರಿಣಾಮ, ಅನುಭವ ಮಂಟಪಕ್ಕೆ ಅಲ್ಲಮ ಪ್ರಭುದೇವರ ಆಗಮನ, ಅದಕ್ಕೆ ಮೊದಲು ಮತ್ತು ಆ ತರುವಾಯ ಅಲ್ಲಿ ನಡೆದ ಕುತೂಹಲಕಾರಕ ಅದ್ಭುತ ಘಟನೆಗಳು—ಇವುಗಳನ್ನು ಆಧರಿಸಿ ಈ ಆಖ್ಯಾಯಿಕೆಯನ್ನು ರಚಿಸಿದೆ."

—ಕರ್ತೃವಿನ 'ಮುನ್ನುಡಿ'ಯಿಂದ.

**ನೋಡು :** ೧. ಉದಯರವಿ

೨. ರಾಜ್ಯಪಾಲ

೩. ನಾಗಬಂಧ

೪. ಮುಗಿಯದ ಕನಸು

೫. ಕ್ರಾಂತಿಕಲ್ಯಾಣ

೨೩

**ಗ್ರಂಥ : ಕಾಲ ಜ್ಞಾನದ ವಚನವು**

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಹಳಕಟ್ಟಿ ( ಫಕೀರಪ್ಪ ಗುರುಬಸಪ್ಪ ). ಜ. ೨·೭·೧೮೮೦

**ಆಕಾರ :** ೨೧×೧೩.೫ ಸೆ. ಮಿ.

**ಪುಟ :** ೪೩ ರಿಂದ ೪೭

**ಸ್ಥಳ :** ವಿಜಾಪುರ

**ಪ್ರಕಾಶಕ :** ಸಂಪಾದಕ

**ಆವೃತ್ತಿ :** ಪ್ರಥಮ

**ಮಿತಿ :** ೧೯೩೪

**ಮಾಲೆ :** ಶಿವಾನುಭವ ಗ್ರಂಥ ಮಾಲೆ, ೩೯

**ಸಾರಾಂಶ :** ಇದು ದೀರ್ಘವಾದ ಕಾಲಜ್ಞಾನ ವಚನ. ಬಸವಣ್ಣನವರ ಜನನ, ಬಸವಾದಿ ಪ್ರಮಥರ ಭಕ್ತಿ ಆಂದೋಲನೆ, ಕಲ್ಯಾಣಕ್ರಾಂತಿ — ಇತ್ಯಾದಿ ವಿಷಯಗಳ ನಿರೂಪಣೆಯಿದೆ. ಆದಿಯ ವಾಕ್ಯವು ಇಂತಿದೆ :

"ಶರಣು ಶರಣಾರ್ಥಿ, ರಾಕ್ಷಸನಾಮ ಸಂವತ್ಸರದ ಫಾಲ್ಗುಣ ಶುದ್ಧ ಏಕಾದಶಿಯಲ್ಲು ಇಪ್ಪತ್ತೇಳು ನಕ್ಷತ್ರ ಪಾಣಿಗ್ರಹಣ ಶುಭ ಕಲ್ಯಾಣದೊಳು ಸೋಮವಾರ ಅಹೋರಾತ್ರಿಯಲ್ಲಿ ಬಸವರಾಜ ದೇವರು ನಿರೂಪವ ಮಾಡಿದರು."

ಇದೇ ಗ್ರಂಥವು ಶ್ರೀ ಶಿವಬಸವಸ್ವಾಮಿಗಳು ಸಂಪಾದಿಸಿದ 'ಕಾಲಜ್ಞಾನ ಸಂಗ್ರಹ' ಎಂಬ ಗ್ರಂಥದಲ್ಲಿ ೧೯೪೬ರಲ್ಲಿ ಮುದ್ರಿತವಾಗಿದೆ.

'ಕಲಿಯುಗದ ಕಾಲಜ್ಞಾನ' ಎಂಬ ಮತ್ತೊಂದು ಗ್ರಂಥದಲ್ಲಿ ಅದರ ಸಂಪಾದಕರಾದ ಶ್ರೀ ಉಪಾಧ್ಯಾಯರು ಪ್ರಸ್ತುತ ಬಸವಣ್ಣನವರ 'ಕಾಲಜ್ಞಾನ' ವಚನವನ್ನು ಸೇರಿಸಿ ಪ್ರಕಟಿಸಿರುವದಾಗಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಹೇಳಿರುವರು.

ಕವಿಚರಿತ್ರೆಕಾರರು ಇದರಲ್ಲಿ ೬೪ ಪದಗಳಿವೆಯೆಂದು ಹೇಳಿದ್ದಾರೆ. ಅವರು ನೋಡಿದ ಗ್ರಂಥವಾವುದೋ ತಿಳಿಯದು.

೨೬

---

ಆಕರ :

೧. ಕರ್ನಾಟಕ ಕವಿಚರಿತೆ, ಭಾ. ೧. ಪು. ೧೭೬

೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೧. ಪು. ೨೮೩

೩. ಶರಣ ಸಾಹಿತ್ಯ, ಸಂಪುಟ ೧೩; ಸಂಚಿಕೆ ೩; ಪು. ೧೮೨. ಜೂನ ೧೯೫೦

೨೪

**ಗ್ರಂಥ: ಕ್ರಾಂತಿ ಕಲ್ಯಾಣ.** ಭಾ. ೬.

**ಪ್ರಭೇದ :** ಕಾದಂಬರಿ

**ಕರ್ತೃ :** ಪುಟ್ಟಸ್ವಾಮಯ್ಯ ( ಬಿ )

**ಕಾಲ :** ಜ. ೨೭-೬-೧೮೯೭

**ಆಕಾರ :** ೧೮ × ೧೨ ಸೆ. ಮಿ.

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಶಾರದಾ ಪ್ರಕಟನಾಲಯ

**ಆವೃತ್ತಿ :** ಪ್ರಥಮ

**ಬೆಲೆ :** ೬=೦೦ ರೂ.

**ಮಾಲೆ :** ಶಾರದಾ ಪ್ರಕಟನಾಲಯ, ಪ್ರಕಟನೆ, ೧೨೬

**ಸಾರಾಂಶ :** "ಬಸವೇಶ್ವರನು ಕಲ್ಯಾಣವನ್ನು ಬಿಟ್ಟದ್ದು, ಚೆನ್ನಬಸವಣ್ಣ ಬಿಜ್ಜಳನ ಮಂತ್ರಿಯಾದುದು, ಮಧುವರಸ-ಹರಳಯ್ಯಗಳ ಬಂಧನ ಮತ್ತು ನ್ಯಾಯ ವಿಚಾರಣೆ, ಮಂಚಣ್ಣನ ಆತ್ಮಹತ್ಯೆ, ಮಧುವರಸ-ಹರಳಯ್ಯ-ಶೀಲವಂತ-ಇವರಿಗೆ ಮರಣದಂಡನೆ, ಶರಣರ ಶೂಲಾರೋಹಣ, ಬಿಜ್ಜಳನ ವಧೆ, ಶರಣರು ಉಳಿವೆಗೆ ಪ್ರಯಾಣ ಬೆಳೆಸಿದುದು, ಸಂಗಮನಲ್ಲಿ ಬಸವಣ್ಣನವರ ಐಕ್ಯ—ಇತ್ಯಾದಿ ವಿಷಯಗಳು ಇದರಲ್ಲಿ ವರ್ಣಿತವಾಗಿವೆ."

—'ಮುನ್ನುಡಿ'ಯಿಂದ

**ನೋಡು :** ೧. ಉದಯ ರವಿ
೨. ರಾಜ್ಯಪಾಲ
೩. ಕಲ್ಯಾಣೇಶ್ವರ
೪. ನಾಗ ಬಂಧ
೫. ಮುಗಿಯದ ಕನಸು.

೨೫

**ಗ್ರಂಥ: ಕ್ರಾಂತಿಯ ದೀಪ**

**ಪ್ರಭೇದ:** ನಾಟಕ

**ಕರ್ತೃ:** ಮಹದೇವಯ್ಯ ( ಟಿ. ಎನ್. )

**ಕಾಲ:** ಸು. ೧೯೨೫

**ಸ್ಥಳ:** ಗದಗ

**ಪ್ರಕಾಶಕ:** ಮಡಿವಾಳಪ್ಪ ಮತ್ತು ಸಹೋದರರು

**ಮಿತಿ:** ೧೯೩೮ ?

**ಸಾರಾಂಶ:** " ಲೇಖಕರು ಕಲ್ಯಾಣ ಪಟ್ಟಣದಲ್ಲಿ ಧರ್ಮಕ್ರಾಂತಿಯನ್ನುಂಟು ಮಾಡಿದ ಬಸವೇಶ್ವರನ ಜೀವನ ಚರಿತ್ರೆಯ ಕಡೆಯ ಭಾಗವನ್ನು ಕಥಾವಸ್ತುವನ್ನಾಗಿ ಸ್ವೀಕರಿಸಿ ಈ ನಾಟಕವನ್ನು ಬರೆದಿದ್ದಾರೆ. "

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು.

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೧; ಸಂಚಿಕೆ ೬; ಪು. ೪೦೦-೪೦೧. ೧೯೩೮

೨೬

**ಗ್ರಂಥ: ಗುರು ಬಸವಾರ್ಯರ ವಚನ**

**ಪ್ರಭೇದ:** ಹಾಡು.

**ಕರ್ತೃ:** ಗುರು ಬಸವಾರ್ಯ

**ಸಾರಾಂಶ:** 'ಬಸವ ತತ್ವ ರತ್ನಾಕರ'ದ ಕರ್ತೃಗಳು, " ಕವಿಯ ಕಾಲ ಗೊತ್ತಾಗಿಲ್ಲ.... ಈ ಗ್ರಂಥದಲ್ಲಿ ನೂರಾರು ಪದ್ಯಗಳು ಬಸವಣ್ಣನವರ ಪ್ರಶಂಸೆಪರ ಇರುತ್ತವೆ. ಕೊನೆಗೆ ಕವಿಯು ಬಸವಣ್ಣನವರ ಮಂಗಳನ್ನು ಹಾಡಿ ಗ್ರಂಥ

ಸಮಾಪ್ತಿಗೊಳಿಸುತ್ತಾನೆ" ಎಂದು ಮಾತ್ರ ಹೇಳಿ ಗ್ರಂಥದಿಂದ ಕೆಳಗಿನ ಎರಡು ಪದ್ಯಗಳನ್ನು ಉದಾಹರಿಸಿರುವರು:

ಎಲ್ಲದೊಳು ಬಸವನೆ ಶಿವನು
ಎಲ್ಲರೊಳು ಶಿವಬಸವನೇ ಶಿವನು
ಎಲ್ಲರು ಮಂಗಳ ಬಸವನ ನೆನೆದು ಸ್ತ್ರೀಯ
ರೆಲ್ಲರು ಸಿಲ್ಲದೆ ಬಸವನ ಹಾಡಿರಿ ||

ಬಸವ ಜಯ ಜಯ ಎನ್ನ ಪುಣ್ಯವೆ
ಬಸವ ಜಯ ಜಯ ಎನ್ನ ಜ್ಞಾನವೆ
ಬಸವ ಜಯ ಜಯ ಎನ್ನ ಭಕ್ತಿ
ಯಸಾರ ಗುರುಬಸವ ||

'ವಚನ' ವೆಂದಿದ್ದರೂ ಇದು 'ಹಾಡಿನ' ರೂಪದಲ್ಲಿದೆ. ಕ. ಹ. ವ. ಸೂಚಿಯಲ್ಲಿಯ ಆದಿ ಮತ್ತು ಅಂತ್ಯದ ಎರಡು ಹಾಡುಗಳನ್ನು ನೋಡಿದರೆ ಇದು ಬಸವಣ್ಣನವರನ್ನು ನೆನೆಯುವದರ ಜೊತೆಗೆ ವೀರಶೈವ ಸಿದ್ಧಾಂತ ಪ್ರತಿಪಾದನೆ ಮಾಡುವದೆಂದು ತಿಳಿಯುತ್ತದೆ.

---

ಆಕರ :

೧. ಬಸವ ತತ್ವ ರತ್ನಾಕರ, ಪು. ೬೦೦
೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೧. ಪು. ೪೨೦-೨೧

೨೨

## ಗ್ರಂಥ : ಗುರುಬೋಧೆ

**ಸಾರಾಂಶ :** ಇದು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಲ್ಲಿರುವ ಹಸ್ತಪ್ರತಿ. ಪ್ರಭುದೇವ ಮತ್ತು ಬಸವ ಸಂವಾದವಾಗಿರುವದಾಗಿ ತಿಳಿದಿದೆ.

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೨೧; ಸಂಚಿಕೆ ೫; ಪು. ೧೯೨. ಆಗಸ್ಟ ೧೯೫೮

೨೮

## ಗ್ರಂಥ: ಷಟಚಕ್ರ ವಚನ

ಪ್ರಭೇದ: ವಚನ

ಕರ್ತೃ: ಬಸವಣ್ಣ

ಕಾಲ: ಸು ೧೧೬೦

ಸಾರಾಂಶ: ಈ ಗ್ರಂಥವನ್ನು ಬಸವೇಶ್ವರನು ಬರೆದಿರುವನೆಂದು ಈ. ಪಿ. ರಾಯಿಸ ಸಾಹೇಬರು ಹೇಳಿರುವರು.

---

ಆಕರ:

೧. History of Kanarese Literature. p. 53–54
೨. ಶರಣರ ಸಾಹಿತ್ಯ, ವಿಶೇಷ ಸಂಚಿಕೆ, ಪು. ೫೯, ದಿ. ೨೩-೪-೧೯೩೯

೨೯

## ಗ್ರಂಥ: ಚೆನ್ನಂಜೆ ದೇವರಿಂದ ಸಂಪಾದಿತವಾದ ಬಸವ ಸ್ತೋತ್ರದ ವಚನ ಮತ್ತು ಬಸವ ಸ್ತುತಿ-ಪ್ರಶಸ್ತಿ

ಪ್ರಭೇದ: ವಚನ-ಪದ್ಯ-ಗದ್ಯ

ಸಂಪಾದಕ: ಹುಣಿಶಾಳ (ಎಸ್. ಎಮ್.) ಮತ್ತು ಅನ್ನದಾನಯ್ಯ (ಸಿ. ಎಚ್.)

ಆಕಾರ: ೧೮×೧೨ ಸೆ. ಮಿ.

ಪುಟ: xlviii + ೪೫೦=೪೯೮

ಸ್ಥಳ: ರಾಯಚೂರು

ಪ್ರಕಾಶಕ: ಶ್ರೀ ನಾರದ ಗಡ್ಡೆಮಠ

ಆವೃತ್ತಿ: ಪ್ರಥಮ

ಮಿತಿ: ಅಗಸ್ಟ ೧೯೬೫

ಬೆಲೆ: ೨-೦೦ ರೂ.

ಮಾಲೆ: ವೈರಾಗ್ಯ ಚೆನ್ನಬಸವ ಸ್ವಾಮಿ ಗ್ರಂಥ ಮಾಲಾ, ೩

**ಸಾರಾಂಶ :** ಗ್ರಂಥವನ್ನು ನಾಲ್ಕು ಭಾಗವಾಗಿ ವಿಂಗಡಿಸಬಹುದು : **ಭಾಗ ೧ ರಲ್ಲಿ** ಪ್ರಭುದೇವ, ಚೆನ್ನಬಸವಣ್ಣ, ಮಾಚಿದೇವ, ಸಿದ್ಧರಾಮ, ಉರಿಲಿಂಗ-ಪೆದ್ದಿ, ತೋಂಟದ ಸಿದ್ಧಲಿಂಗ, ಮಹದೇವಿಯಕ್ಕ, ಅಕ್ಕನಾಗಮ್ಮ, ಮೇದಾರ ಕೇತಯ್ಯ, ಮರುಳ ಶಂಕರದೇವ, ಹಾವಿನಹಾಳ ಕಲ್ಲಯ್ಯ, ಬಹುರೂಪಿ ಚೌಡಯ್ಯ, ಮೋಳಿಗೆಯ ಮಾರಯ್ಯ, ಹಡಪದ ಅಪ್ಪಣ್ಣ, ಸೋಮನಾಥ– ಈ ೧೫ ಶಿವಶರಣರು ಬಸವಣ್ಣನವರನ್ನು ಕೀರ್ತಿಸಿ ಹೇಳಿದ ೧೨೩ ವಚನಗಳಿವೆ. ಕೊನೆಯಲ್ಲಿರುವ ವಚನವು ಪಾಲ್ಕುರಿಕಿ ಸೋಮನಾಥನದಾಗಿರಬಹುದಾಗಿದೆ. ಈ ಊಹೆ ನಿಜವಾದರೆ ಸೋಮನಾಥನಿಂದ ಬರೆಯಲ್ಪಟ್ಟ ಬೇರೆ ವಚನಗಳಿರಬೇಕೆಂದು ಸಿರ್ಥರಿಸಬೇಕಾ-ಗುತ್ತದೆ. ಈ ವಚನಗಳನ್ನು ಸಂಗ್ರಹಿಸಿದವರು ಚೆನ್ನಂಜೆ ದೇವರು. ಅವರ ಕಾಲ ಕ್ರಿ. ಶ.೧೫೩೦ ಎಂದು ಕವಿಚರಿತೆಕಾರರು ನಿರ್ಣಯಿಸಿದ್ದಾರೆ.

**ಭಾಗ ೨ ರಲ್ಲಿ** ಆಯ್ದಕ್ಕಿ ಮಾರಯ್ಯ, ನುಲಿಯ ಚಂದಯ್ಯ, ಸೊಡ್ಡಳ ಬಾಚರಸ, ಶಂಕರ ದಾಸಿಮಯ್ಯ, ಡೋಹಾರ ಕಕ್ಕಯ್ಯ, ನಿಲಲೋಚನೆ, ಅಕ್ಕ ನಾಗಮ್ಮ, ಮಹದೇವಿಯಕ್ಕ— ಇವರು ಬಸವಣ್ಣನವರನ್ನು ಕೊಂಡಾಡಿ ಬರೆದ, ೧ನೆಯ ಭಾಗದಲ್ಲಿ ಹೇಳಿರದ ೧೮ ವಚನಗಳಿವೆ. ಕೊನೆಯಲ್ಲಿ ಹರಿಹರ ಕವಿಯು ಬಸವರಾಜ ದೇವರರಗಳೆಯಲ್ಲಿ ವರ್ಣಿಸಿದ ಗದ್ಯವಿದೆ.

**ಭಾಗ ೩ ರಲ್ಲಿ** ಪ್ರಭು, ಚೆನ್ನಬಸವಾದಿಗಳ ಗೀತಗಳನ್ನೂ ಹರಿಹರಾದಿಗಳ ಕಾವ್ಯಭಾಗ ವನ್ನೂ ಬಸವಪ್ಪ ಶಾಸ್ತ್ರಿ, ಅಭಿನವ ಸರ್ವಜ್ಞ, ಮುಂತಾದವರ ವರೆಗಿನ ೧೦೧ ಕವಿ-ಗಳು ತಮ್ಮ ತಮ್ಮ ಕಾವ್ಯಗಳಲ್ಲಿ ಬಸವಣ್ಣನವರನ್ನು ವರ್ಣಿಸಿ ಬರೆದ ಪದ್ಯಗಳನ್ನೂ ಸಂಗ್ರಹಿಸಿ ಕೊಡಲಾಗಿದೆ.

**ಭಾಗ ೪ ರಲ್ಲಿ** ಬಸವಣ್ಣನವರ ದಿವ್ಯ ಭವ್ಯ ವ್ಯಕ್ತಿತ್ವವನ್ನು ಮೆಚ್ಚಿ ಹೊಗಳಿದ ಆಧುನಿಕ ಕನ್ನಡ-ಆಂಗ್ಲ ವಿದ್ವಾಂಸರ ಅಭಿಪ್ರಾಯಗಳನ್ನು ಕೊಡಲಾಗಿದೆ. ಅದರಲ್ಲಿ ಗಾಂಧೀಜಿ, ಬಸವನಾಳ, ಸರೋಜಿನಿ ನಾಯಡು, ಹಳಕಟ್ಟಿ, ಎಂ. ಎನ್. ರಾಯ, ರಾಧಾಕೃಷ್ಣನ್, ಸಿ. ಆರ್. ರೆಡ್ಡಿ, ಆರ್ಥರ್ ಮಾಯಿಲ್ಸ್, ಸಾಖರೆ, ಹುಣಿಶಾಳ ಮುಂತಾದವರ ಹೆಸರುಗಳನ್ನು ಹೇಳಬಹುದು.

ಪ್ರಾರಂಭದಲ್ಲಿ ಸಂಪಾದಕರ ವಿದ್ವತ್ಪೂರ್ಣ ಪ್ರಸ್ತಾವನೆಯಿದೆ.

**ನೋಡು :** ೧. ಬಸವ ಸ್ತೋತ್ರದ ವಚನ

---

**ಆಕರ :**

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೪೭
೨. ಕರ್ಣಾಟಕ ಕವಿಚರಿತೆ, ಭಾ. ೩, ಪು. ೨೧೪
೩. ಕನ್ನಡ ಸಂಶೋಧನ ಸಂಸ್ಥೆ ಗ್ರಂಥ ನಂ. ೭೬೧; ಪು. ೩೨ ರಿಂದ ೫೫.

೩೦

**ಗ್ರಂಥ : ಚೋರ ಬಸವ ಚರಿತ್ರ**

**ಪ್ರಭೇದ :** ಯಕ್ಷಗಾನ

**ಕರ್ತೃ :** ಮಹಂತಯ್ಯ ( ಜಂ )

**ಕಾಲ :** ೧೮೮೬

**ಸಾರಾಂಶ :** ಶ್ರೀ ಸಿಂದಗಿ ಸಿದ್ಧಪ್ಪನವರು ಬಸವಣ್ಣನವರನ್ನು ಕುರಿತು ರಚಿತವಾದ ಗ್ರಂಥಗಳ ಸೂಚಿಯಲ್ಲಿ ಪ್ರಸ್ತುತ ಗ್ರಂಥದ ಹೆಸರನ್ನು ಸೇರಿಸಿರುವರು. ಮತ್ತು ತಮ್ಮ 'ಶ್ರೀ ಬಸವೇಶ್ವರನ ಚರಿತ್ರೆ' ಗ್ರಂಥದಲ್ಲಿ ಉಪಯೋಗಿಸಿ ಕೊಂಡಿರುವರು.

---

ಆಕರ :

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬ ಮತ್ತು ೧೦೦.

೩೧

**ಗ್ರಂಥ : ಚೋರ ಬಸವೇಶ್ವರ ಪುರಾಣವು**

**ಪ್ರಭೇದ :** ವಾರ್ಧಿಕ ಷಟ್ಪದಿ **ಸಂಧಿ :** ೧೩. **ಪದ್ಯ :** ೭೫೫

**ಕರ್ತೃ :** ಶಂಕರ ಕವಿ

**ಕಾಲ :** ೧೭೬೩

**ಸಂಪಾದಕ :** ಮಣಿರಾಮ ಪ್ರಾಗದತ್ತ ವಾಜಪೇಯಿ

**ಆಕಾರ :** ಕಲ್ಲಚ್ಚು ೧೬×೧೯ ಸೆ. ಮಿ.

**ಪುಟ :** ೨೧೮

**ಸಾಲು :** ೧೪

**ಅಕ್ಷರ :** ೩೦

**ಸ್ಥಳ :** ಧಾರವಾಡ

**ಆವೃತ್ತಿ :** ಪ್ರಥಮ

**ಮಿತಿ :** ೧೮೬೪ ( ಶಕೆ ೧೭೮೬ ರಕ್ತಾಕ್ಷಿ ಸಂ. ಮಾರ್ಗಶಿರ ಬಹುಳ ೮ ).

**ಸಾರಾಂಶ :** ಇದರಲ್ಲಿ ಮಾಂಡವ್ಯಪುರದ ರಾಜನಾದ ಮಹಾದೇವನು ಕಾವಲಲ್ಲಿಟ್ಟಿದ್ದ ೬೦೦೦ ಜಂಗಮರನ್ನು ಬಸವೇಶ್ವರನು ವರ್ತಕನ ವೇಷದಲ್ಲಿ ಹೋಗಿ ಕದ್ದು ತನ್ನ ಹಸುಬೆಯಲ್ಲಿ ತುಂಬಿಕೊಂಡು ಬಂದ ಕಥೆ ವರ್ಣಿತವಾಗಿದೆ.

ಕವಿಯು ಪ್ರಥಮದಲ್ಲಿ ತನ್ನಿಷ್ಟ ದೇವನಾದ ರಾಮೇಶ್ವರನನ್ನು ಸ್ತುತಿಸಿದ್ದಾನೆ. ಪೂರ್ವಕವಿಗಳಲ್ಲಿ ಕಾಳಿದಾಸ, ಪಾಲ್ಕುರಿಕಿ ಸೋಮನಾಥ, ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಚಾಮರಸ, ಇವರನ್ನೂ; ಬಸವ, ಚೆನ್ನಬಸವ, ಮಡಿವಾಳ, ಹಡಪದಪ್ಪಣ್ಣ, ಕಿನ್ನರಯ್ಯ, ಬಾಚರಸ, ಕಲಕೇತ, ಕಕ್ಕಯ್ಯ, ಚಿಕ್ಕಯ್ಯ, ನಾಗಾಂಬೆ, ನೀಲಾಂಬೆ–ಇತ್ಯಾದಿ ಶರಣ ಶರಣೆಯರನ್ನೂ ಭಕ್ತಿಯಿಂದ ಸ್ಮರಿಸಿದ್ದಾನೆ.

ವೃಷಭೇಶ್ವರನನ್ನು ಪೂಜಿಸಿ ಮಾದರಸ ಮಾದಲಾಂಬಿಕೆಯರು ಬಸವೇಶ್ವರನನ್ನು ಪಡೆದುದು, ಹರಿಹರ ದೇವನು ಚಾಮರಸನಿಗೆ ಬಸವೇಶ್ವರನ ಮಹಿಮೆಯನ್ನು ಹೇಳಿದುದು, ಬಸವಣ್ಣನು ಮಾಂಡವ್ಯಪುರದ ಅರಮನೆಯೊಳಗಿದ್ದ ೬೦೦೦ ಗಣಂಗಳನ್ನು ಮಾಯೆಯಿಂದ ಕಲ್ಯಾಣಕೊಯ್ದುದ್ದು, ರಾಣಿ ಮಹಾದೇವಿಯು ಭೂಪಾಲಂಗೆ ಬಸವೇಶ್ವರನ ಮಹಾತ್ಮೆಯನ್ನು ಹೇಳಿದುದು, ಶಿವನನ್ನು ದಕ್ಷನು ಶೆಣಸಿ ಭಂಗಪಟ್ಟು ಪುನಃ ಶರಣಾಗತನಾದದ್ದು, ಭೂಮೀಶನಿಗೆ ಕೌಶಿಕ ವಶಿಷ್ಠರ ಹಾಗೂ ಶಿವಶರಣರ ಕಥೆ ಹೇಳಿದುದು, ಶಿವ-ಪಾರ್ವತಿಯರು ಕಲ್ಯಾಣಕ್ಕೆ ಬಂದುದು, ಹನುಮಂತನ ಇಷ್ಟಲಿಂಗವು ಬಯಲಾದುದು, ಗುರೂಪದೇಶ ಪಡೆದು ಚಾಮರಸನು ಲಿಂಗಭೋಗೋಪಭೋಗಿಯಾಗಿದ್ದುದು, ಚಾಮರಸ ಇಷ್ಟಲಿಂಗದಲ್ಲಿ ಬಯಲಾದುದು—ಇವೇ ಮೊದಲಾದ ವಿಷಯಗಳು ಮನೋಹರವಾಗಿ ವರ್ಣಿತವಾಗಿವೆ. ಕೆಲ ಐತಿಹಾಸಿಕ ಅಂಶಗಳು ಗಮನಿಸತಕ್ಕವುಗಳಾಗಿವೆ.

೩೨

**ಗ್ರಂಥ :** ಜಗಜ್ಜ್ಯೋತಿ ಬಸವೇಶ್ವರ

**ಪ್ರಭೇದ :** ನಾಟಕ

**ಕರ್ತೃ :** ಕೃಷ್ಣರಾಯ ( ಅ. ನ. )

**ಕಾಲ :** ಜ. ೯–೫–೧೯೦೮

**ಆಕಾರ :** ೧೮×೧೨ ಸೆ. ಮಿ.

**ಪುಟ :** ೮+೧೪೪ = ೧೫೨

**ಸ್ಥಳ :** ಮೈಸೂರು

**ಪ್ರಕಾಶನ:** ಆರ್. ಎನ್. ಹಬ್ಬು, ಉಷಾ ಪ್ರೆಸ್ಸು

**ಆವೃತ್ತಿ:** ಪ್ರಥಮ

**ಮಿತಿ:** ೧೯೪೯

**ಬೆಲೆ:** ೨-೦೦ ರೂ.

**ಮಾಲೆ:** ಉಷಾ ಸಾಹಿತ್ಯಮಾಲೆ, ಬಿಡಿ ಮುತ್ತು, ೫

**ಸಾರಾಂಶ:** ಈ ನಾಟಕದಲ್ಲಿ ೭ ಅಂಕಗಳಿವೆ. ಜನಸಾಮಾನ್ಯರಿಗೂ ಸುಶಿಕ್ಷಿತರಿಗೂ ರಂಗಭೂಮಿಯ ಮೇಲೆ ಅಭಿನಯಿಸಲು ಅನುಕೂಲವಾಗುವಂತೆ ಇದರ ತಂತ್ರವಿದೆ.

"ಸಿಂಗಿರಾಜಾದಿ ಕವಿಗಳಿಂದ ದೊರೆಯುವ ಕೆಲ ವಿಷಯಗಳ ಜತೆಗೆ, ಬಸವಣ್ಣನವರ ವಚನಗಳಿಂದ ಊಹಿಸಬಹುದಾದ ವಿಷಯಗಳನ್ನು ಸೇರಿಸಿ ಒಂದು ಚಿತ್ರವನ್ನು ರಚಿಸಲು ನಾನು ಯತ್ನಿಸಿದ್ದೇನೆ. ಬಸವಣ್ಣನವರು ವೀರಶೈವ ಸಮಾಜಕ್ಕೆ ಮಾತ್ರವಲ್ಲ, ಇಡಿಯ ಲೋಕಕ್ಕೆಮಾಡಿದ ಉಪಕಾರವೇನು, ನೀಡಿದ ಕಾಣಿಕೆಯೇನು, ಕೊಟ್ಟ ಸಂದೇಶ ಯಾವುದು, ಎಂದು ವಿಚಾರ ಮಾಡಿದ್ದೇನೆ. ನಾನು ನೋಡುವ ಬಸವೇಶ್ವರ ಪುರಾಣಕಾರರು ಕಾಣಿಸಿರುವ ಪರಮತ ಭರ್ತ್ಸನಾಪ್ರಿಯನೂ, ಕಟು-ಧರ್ಮಿಯೂ, ಜಾತ್ಯಾಂಧನೂ ಆದ ಬಸವೇಶ್ವರನಲ್ಲ. ದಯೆಯ, ಸಹನೆಯ, ಸಂಯಮದ ತ್ಯಾಗದ, ತಿರುಳನ್ನು ಎತ್ತಿತೋರಿ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಬಸವೇಶ್ವರ."–ಲೇಖಕರ 'ಮುನ್ನುಡಿ'ಯಿಂದ.

ಕೊನೆಯ 'ಅನುಬಂಧ' ದಲ್ಲಿ 'ಚಿತ್ರಕಲೆಯಲ್ಲಿ ಶ್ರೀ **ಬಸವಣ್ಣನವರು**' ಎಂಬ ಲೇಖನವಿದೆ. ಬಸವಣ್ಣನವರ ಒಂದು ರೇಖಾಚಿತ್ರವೂ ಇದೆ. ಅನೇಕ ಕಲಾವಿದರು ಬರೆದ ಬಸವಣ್ಣನವರ ಭಾವಚಿತ್ರಗಳನ್ನು ತುಲನಾತ್ಮಕವಾಗಿ ವಿಮ-ರ್ಶಿಸಿ 'ಶ್ರೀ ಸ್ವಾಮಿಯವರ ಚಿತ್ರ ಸರ್ವಗ್ರಾಹ್ಯವಾಗಲು ಅರ್ಹವಾಗಿದೆ' ಎಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ.

೩೩

**ಗ್ರಂಥ: ಜಗಜ್ಜ್ಯೋತಿ ಬಸವೇಶ್ವರ**

**ಪ್ರಭೇದ:** ನಾಟಕ

**ಕರ್ತೃ:** ಏಣಗಿ (ಬಾಳಪ್ಪ)

**ಕಾಲ:** ಸು. ೧೯೨೫

೨೮

**ಆಕಾರ :** ೧೮×೧೨ ಸೆ. ಮಿ.

**ಪುಟ :** ೮+೮೮=೯೬

**ಸ್ಥಳ :** ಬೆಳಗಾವಿ

**ಪ್ರಕಾಶಕ :** ಕಲಾವೈಭವ ನಾಟ್ಯ ಸಂಘ

**ಆವೃತ್ತಿ :** ಪ್ರಥಮ

**ಮಿತಿ :** ೧೯೭೬

**ಬೆಲೆ :** ೧=೦೦ ರೂ.

**ಸಾರಾಂಶ :** ಕೆ. ದೊಡ್ಡನಗೌಡ ಜೋಳದರಾಶಿ, ಅ. ನ. ಕೃ. ಮತ್ತು ಶಿವಲಿಂಗ ಸ್ವಾಮಿ ಚಿಕ್ಕೋಡಿ ಇವರು ಬಸವಣ್ಣನವರ ಮೇಲೆ ಬರೆದ ನಾಟಕಗಳನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ನಾಟಕವನ್ನು ಸಿದ್ಧಪಡಿಸಲಾಗಿದೆ. ಒಟ್ಟು ೨೧ ದೃಶ್ಯಗಳಿವೆ. ಬಸವಣ್ಣನವರು ನಾಟಕದಲ್ಲಿ ಬಿಜ್ಜಳನ ಮಂತ್ರಿಯಾಗಿಯೇ ಕಾಣಿಸಿಕೊಳ್ಳುತ್ತಾರೆ. ಅಲ್ಲಿಯ ವರೆಗಿನ ಅವರ ಜೀವನ ಚಿತ್ರವನ್ನು ನೇಪಥ್ಯದ ಹಿಂಬದಿಯಿಂದ ವರ್ಣಿಸಲಾಗುತ್ತದೆ. ಕ್ರಾಂತಿಯ ನಂತರ ಕಲ್ಯಾಣವನ್ನು ಬಿಟ್ಟುಹೋಗುವ ಪ್ರಸಂಗದಲ್ಲಿ ಬಸವಣ್ಣನವರು "ಬಂಧುಗಳೇ, ಬಿಜ್ಜಳ ಪ್ರಭುವಿನ ಕೊಲೆಯಾಯಿತು. ಮಂಚಣ್ಣ ಮಡಿದನು. ನೀಲಾಂಬಿಕೆ ಲಿಂಗೈಕ್ಯಳಾದಳು, ಕಲ್ಯಾಣದಲ್ಲಿ ಕ್ರಾಂತಿಯಾಯಿತು. ರುದ್ರಮುನಿಗಳ ಕಾಲಜ್ಞಾನದಂತೆ ಕಲ್ಯಾಣ ಪಟ್ಟಣದ ಧರ್ಮ ಕಟ್ಟೆಯ ಮೇಲೆ ಕಟುಕರು ಅಂಗಡಿಯನ್ನು ಮಂಡಿಸಿ ಮಾಂಸವನ್ನು ಮಾರ ಹತ್ತುವರು" ಎಂದು ಹೇಳುತ್ತಿರುವಂತೆ ಭೀಕರ ಶಬ್ದವಾಗಿ ಶಿವನ ಮೂರ್ತಿ ಕಾಣಿಸುವದು. ಬಸವಣ್ಣನವರು ಅದರಲ್ಲಿ ಐಕ್ಯರಾಗುವರು. ಆಗ 'ಶಂಭೋ ಹರಹರ ಮಹಾದೇವ' ಎಂಬ ಮಹಾ ಘೋಷಣೆಯೊಂದಿಗೆ ನಾಟಕ ಮುಕ್ತಾಯವಾಗುತ್ತದೆ.

ಬಸವಣ್ಣನವರ ವ್ಯಕ್ತಿತ್ವದ ಹಿರಿಮೆ, ಸಮಾಜ ವಿಡಂಬನೆ, ಡಂಭಾಚಾರ, ರಾಜಕೀಯ ಕುತಂತ್ರ-ಇತ್ಯಾದಿಗಳು ಬಹು ಪರಿಣಾಮಕಾರಿಯಾಗಿ ಚಿತ್ರಿತವಾಗಿವೆ.

೨೯

**ಗ್ರಂಥ :** ಜಗಜ್ಜ್ಯೋತಿ ಬಸವೇಶ್ವರ ಚರಿತಾಮೃತ

**ಪ್ರಭೇದ :** ಕಾದಂಬರಿ

**ಕರ್ತೃ :** ಕರ್ಪೂರ (ಕೃಷ್ಣಮೂರ್ತಿ)

**ಕಾಲ :** ಸು. ೧೯೨೫

ಆಕಾರ : ೧೮×೧೨ ಸೆ. ಮಿ.

ಪುಟ : ೨೯೦

ಸಾಲು : ೨೫

ಅಕ್ಷರ : ೨೭

ಸ್ಥಳ : ಹುಬ್ಬಳ್ಳಿ

ಪ್ರಕಾಶಕ : ಭಾರತ ಬುಕ್ ಡಿಪೋ

ಆವೃತ್ತಿ : ಪ್ರಥಮ

ಮಿತಿ : ೧೯೬೫

ಬೆಲೆ : ೨=೫೦ ರೂ.

ಸಾರಾಂಶ : ಬಸವಣ್ಣನವರ ಬಾಲ್ಯ, ವಿದ್ಯಾಭ್ಯಾಸ, ಗುರುಸೇವೆ, ಮದುವೆ, ಧರ್ಮಪ್ರಸಾರ ಕಾರ್ಯ, ಲೋಕೋದ್ಧಾರ ಕಾರ್ಯ, ಅನುಭವ ಮಂಟಪ, ಇತ್ಯಾದಿ ವಿಷಯಗಳನ್ನು ಈ ಗ್ರಂಥದಲ್ಲಿ ಕಾದಂಬರಿ ರೂಪವಾಗಿ ವಿವರಿಸಿದೆ. ವಚನಗಳ ಮೂಲಾರ್ಥವನ್ನು ತಿಳಿಯಾದ ಭಾಷೆಯಲ್ಲಿ ಹೇಳಲಾಗಿದೆ. ಬಸವೇಶ್ವರನ ಚರಿತ್ರಕ್ಕೆ ಪ್ರಾಮುಖ್ಯತೆ ಕೊಟ್ಟು, ಸಂದರ್ಭೋಚಿತವಾಗಿ ಇತರ ಶರಣರ ಕಥೆಗಳನ್ನು ಹೆಣೆಯಲಾಗಿದೆ. ಅನುಭವ ಮಂಟಪದ ಕಾರ್ಯಕಲಾಪಗಳ ವಿವರವಿದೆ.

೩೫

ಗ್ರಂಥ : **ಜಗಜ್ಯೋತಿ ಬಸವೇಶ್ವರ ಲಾವಣಿ**

ಪ್ರಭೇದ : ಲಾವಣಿ ಪದ ಸಂಖ್ಯೆ : ೧೩೪

ಕರ್ತೃ : ಕೋದಂಡರಾಮನ್ (ಜಿ)

ಕಾಲ : ಸು. ೧೯೨೫

ಆಕಾರ : ೧೬×೧೦ ಸೆ. ಮಿ.

ಪುಟ : ೫೫

ಸಾಲು : ೧೮

ಅಕ್ಷರ : ೬-೧೨

ಸ್ಥಳ : ಮೈಸೂರು

**ಪ್ರಕಾಶಕ :** ಲೇಖಕ, 'ಗುರುನಿವಾಸ'- ೧೦೨, ದಿವಾನರ ರಸ್ತೆ
**ಆವೃತ್ತಿ :** ಪ್ರಥಮ
**ಮಿತಿ :** ಅಗಸ್ಟ ೧೯೫೭
**ಬೆಲೆ :** ೦೦=೫೦

**ಸಾರಾಂಶ :** "ಪಂಡಿತ ಪ್ರಿಯವಾದದ್ದು ಕಾವ್ಯವಾಣಿ. ಪಾಮರ ಪ್ರಿಯವಾದದ್ದು ಲಾವಣಿ. ಕಾವ್ಯವು ಗೀಚುವ ಕಟ್ಟು-ನಿಟ್ಟುಗಳ ಮಿತಿ, ಪರಿಮಿತಿಗಳನ್ನು ಕೊಂಚ ಸಡಿಲಿಸಿಕೊಂಡು ಸ್ವಚ್ಛಂದವಾಗಿ ಅಂದವಾಗಿ ಸರ್ವಜನಾನುರಾಗಿಯಾಗಬಲ್ಲದು ಲಾವಣಿ. ಲಾವಣಿಗಳಲ್ಲಿ ಮಹಾಕವಿಯ ಮಹೋತ್ತುಂಗ ಭಾವನೆಗಳೂ ರಸವಚ್ಛಾಬ್ದಾರ್ಥಗಳೂ ಭಾಷೆಯ ಬಂಧುರವಾದ ಬಂಧನ ಜನವಾಣಿಯಾದ ಲಾವಣಿಗಳಿಗಿಲ್ಲ. ಸ್ಪಷ್ಟವೂ ರಸೈಕಪುಷ್ಟವೂ ಆದ ಭಾವನೆಗಳನ್ನು ಅಕ್ಲಿಷ್ಟವಾದ ಭಾಷೆಯಲ್ಲಿ ರೂಪಿಸುವದೇ, ನಿರೂಪಿಸುವದೇ ಲಾವಣಿಯ ವೈಶಿಷ್ಟ್ಯ.

"ನನ್ನ ಪ್ರಿಯ ಮಿತ್ರರಾದ ಶ್ರೀ ಕೋದಂಡರಾಮನ್‌ರವರು ಡಾಕ್ಟರು ಮಾತ್ರವಲ್ಲದೆ ಕವಿಗಳೂ ಆಗಿದ್ದಾರೆ. ಈ ಲಾವಣಿಯು ಅವರ ತೃತೀಯ ಕೃತಿ. ಬಸವಣ್ಣನವರ ಬಗ್ಗೆ ಉಜ್ವಲವಾದ ಮಹೋದ್ಗ್ರಂಥಗಳಿವೆ. ಭಕ್ತಿ, ಜ್ಞಾನ, ಕ್ರಿಯಾತ್ಮಕ ಬಸವಣ್ಣನವರ ದಿವ್ಯಜೀವನವು ಸರ್ವಸಾಮಾನ್ಯರಿಗೂ ತಿಳಿಯುವಂತಾಗಬೇಕು. ಆ ದೃಷ್ಟಿಯಿಂದಲೇ ಈ ಕೃತಿ ಮೂರ್ತಿವೆತ್ತಿದೆ. ಬಸವಣ್ಣನವರ ಬಾಳಿನ ಭವ್ಯತೆಯನ್ನೂ ಅವರ ಅವತಾರದ ದಿವ್ಯೋದ್ದೇಶವನ್ನೂ ಕವಿಯು ಹಾಡಿ ಕೊಂಡಾಡಿ ಧನ್ಯನಾದಂತೆ, ಕನ್ನಡಬಾಂಧವರೆಲ್ಲರೂ ಕೇಳಿ ಧನ್ಯರಾಗುವರೆಂದು ಹಾರೈಸುವೆನು."

—ಸಿ. ವ. ಚನ್ನಬಸವೇಶ್ವರ ಅವರ 'ಮುನ್ನುಡಿ'ಯಿಂದ

ಈ ಗ್ರಂಥವನ್ನು ಶ್ರೀಮಂಜಯ್ಯ ಹೆಗ್ಗಡೆ ಅವರಿಗೆ ಅರ್ಪಿಸಲಾಗಿದೆ. ಅವರ ಭಾವಚಿತ್ರವಿದೆ.

**ಆದಿ :** ಶ್ರೀ ಕೈಲಾಸದಿ ಶಿವ ಸಂತೋಷದಿ ।
ಪಾರ್ವತಿಯನು ಒಡಗೂಡುತಲಿ ।
ಮಹಾದೇವತೆಗಳ ಸಾನ್ನಿಧ್ಯದಲಿ ।
ನಲಿಯುತ ನಾಟ್ಯವ ಆಡುತಲಿ ।
ವಾಣಿಯು ವೀಣೆಯ ಗಾನಕೆ ಸರಿಸಮ ।
ಬ್ರಹ್ಮನ ತಾಳದ ಮೇಳದಲಿ ॥೧॥

"ಬಸವಣ್ಣನವರ ದಿವ್ಯಾನುಕಂಪಪೂರ್ಣ ಮಾನವ ಜೀವನವನ್ನು ರಸವತ್ತಾಗಿ, ಚಿತ್ತಾಕರ್ಷಕವಾಗಿ ನಿರೂಪಿಸಿರುವ ಈ ಬಸವೇಶ್ವರ ಲಾವಣಿ, ಕನ್ನಡಿಗರ ಆದರಾಭಿಮಾನಕ್ಕೆ ಪಾತ್ರವಾಗಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ."

—ಅ. ನ. ಕೃ. ಅವರ 'ಹರಕೆ'ಯಿಂದ

---

ಆಕರ :

೧. ಸಾರ್ವಜನಿಕ ಪುಸ್ತಕ ಭಂಡಾರ, ಮೈಸೂರು, ಬುಕ್ ನಂ. ೧೨, ಕ್ಲಾಸ ನಂ. k ೨೪.

೩೬

**ಗ್ರಂಥ : ಜಗದಾರಾಧ್ಯ ಬಸವಣ್ಣ**

**ಪ್ರಭೇದ :** ಗದ್ಯ-ಪದ್ಯ

**ಕರ್ತೃ :** ವಿವಿಧ ಲೇಖಕರು

**ಸಂಪಾದಕ :** ಜ್ಯೋತಿಪುರ ( ಚಂದ್ರಶೇಖರಶಾಸ್ತ್ರಿ ). ಜ. ಸು. ೧೯೨೫

**ಆಕಾರ :** ೧೨×೧೮ ಸೆ. ಮಿ.

**ಪುಟ :** ೨೪

**ಸಾಲು :** ೩೦

**ಅಕ್ಷರ :** ೧೫–೨೦

**ಸ್ಥಳ :** ರಾಯಚೂರು

**ಪ್ರಕಾಶಕ :** ಶ್ರೀ ಸಿ.ಎಚ್. ಅನ್ನದಾನೀಶ್ವರ ಹಿರೇಮಠ, ನಾರದಗಡ್ಡೆಮಠ

**ಆವೃತ್ತಿ :** ಪ್ರಥಮ

**ಮಿತಿ :** ೨೦.೪-೧೯೫೮ ( ಬಸವ ಜಯಂತಿ )

**ಬೆಲೆ :** ಅಮೂಲ್ಯ

**ಸಾರಾಂಶ :** ಬಸವಣ್ಣನವರನ್ನು ಕುರಿತು ಕವಿಗಳು, ವಚನಕಾರರು ಬರೆದ ಅಭಿಪ್ರಾಯ ಹಾಗೂ ವಚನಗಳನ್ನು ಸಂಗ್ರಹಿಸಿ ಇದರಲ್ಲಿ ಕೊಡಲಾಗಿದೆ. ಕೊನೆಯಲ್ಲಿ ಬಸವಣ್ಣನವರ ಕೆಲವು ವಚನಗಳನ್ನು ಸಂಗ್ರಹಿಸಲಾಗಿದೆ.

೩೭

## ಗ್ರಂಥ: ಜಾತಿಹೀನನ ಮನೆಯು ಜ್ಯೋತಿ.

**ಪ್ರಭೇದ:** ನಾಟಕ

**ಕರ್ತೃ:** ಕೃಷ್ಣರಾಯ (ಅ. ನ.)

**ಕಾಲ:** ಜ ೯-೫-೧೯೦೮

**ಆಕಾರ:** ೧೮×೧೨ ಸೆ. ಮಿ.

**ಪುಟ:** ೨೪

**ಸ್ಥಳ:** ಬೆಂಗಳೂರು

**ಮಿತಿ:** ೧೯೩೮ ?

**ಬೆಲೆ:** ೦-೪-೦ ಆಣೆ

**ಸಾರಾಂಶ:** " ಇದು ಕಲ್ಯಾಣ ಪಟ್ಟಣದಲ್ಲಿ ಶ್ರೀ ಬಸವೇಶ್ವರನು ಶಿವಶರಣ-ರಾದ ಹರಳಯ್ಯ ಮತ್ತು ಮಧುವಯ್ಯಗಳಿಗೆ ಬಾಂಧವ್ಯವನ್ನುಂಟು ಮಾಡಿಸುವದರ ಮೂಲಕ ಸಮಾಜ ಕ್ರಾಂತಿಯನ್ನು ಮಾಡಿದ ವಿಷಯವನ್ನೇ ಕಥಾವಸ್ತುವನ್ನಾಗುಳ್ಳ ಒಂದು ಐತಿಹಾಸಿಕ ನಾಟಕ. ಈ ಗ್ರಂಥಕ್ಕೆ " ವಿಶ್ವಪ್ರೇಮಿ ಬಸವಣ್ಣನವರು " ಎಂಬ ತಮ್ಮ ಭಾಷಣವೊಂದನ್ನು ಉಪೋದ್ಘಾತರೂಪವಾಗಿ ಲೇಖಕರು ಸೇರಿಸಿದ್ದಾರೆ.

"ಚನ್ನಪ್ಪ ಕವಿಯಿಂದ ವಿರಚಿತವಾದ "ಶರಣ ಲೀಲಾಮೃತ" ವೆಂಬ ಗ್ರಂಥದಲ್ಲಿ ಬಸವ ಪುರಾಣದಲ್ಲಿರುವದಕ್ಕಿಂತಲೂ ವಿಸ್ತಾರವಾದ ಈ ಕಥೆ ವಿವರಿಸಲ್ಪಟ್ಟಿದೆ. ಕೆಲವು ವರ್ಷಗಳ ಹಿಂದೆ ಚಾರಿತ್ರಿಕ ದೃಷ್ಟಿಯಿಂದ ಸುಪ್ರಸಿದ್ಧ ಸಾಹಿತಿಗಳಾದ ರೆವರೆಂಡ್ ಉತ್ತಂಗಿ ಚೆನ್ನಪ್ಪನವರು " ಬಸವೇಶ್ವರನೂ, ಅಸ್ಪೃಶೋದ್ಧಾರವೂ " ಎಂಬ ಹೆಸರಿ-ನಿಂದ ಇದೇ ವಿಷಯವನ್ನೊಳಗೊಂಡ ಒಂದು ಗ್ರಂಥವನ್ನು ಪ್ರಕಟಿಸಿದ್ದಾರೆ. ಈ ವಸ್ತುವನ್ನೇ ಮಾನ್ಯ ಲೇಖಕರು ಹೃದಯಂಗಮವಾದ ಒಂದು ನಾಟಕವನ್ನಾಗಿ ಮಾರ್ಪಡಿಸಿದ್ದಾರೆ.

" ಬಸವೇಶ್ವರನು ಮಾಡಿದ ಮಹತ್ಕಾರ್ಯಗಳಲ್ಲಿ ' ಹಾರವ ಮೊದಲಾಗಿ ಅಂತ್ಯಜ ಕಡೆಯಾಗಿ, ಶಿವಭಕ್ತರನ್ನೆಲ್ಲ ಒಂದೇ ಎಂಬೆ ' ಎಂಬ ತನ್ನ ಈ ಉದಾತ್ತ ತತ್ವವನ್ನು ಕಾರ್ಯರೂಪಕ್ಕಿಳಿಸಿದ ಹರಳಯ ಮಧುವಯ್ಯಗಳ ದೇಹಸಂಬಂಧವನ್ನು ಉಂಟುಮಾಡಿದ ಕಾರ್ಯವು ಅಗ್ರಗಣ್ಯವಾದುದು. ಇಂತಹ ಮಹತ್ತ್ವವಾದ ವಿಷಯ ವನ್ನು ಅತ್ಯಂತ ಸರಸವಾಗಿಯೂ, ಮಧುರವಾಗಿಯೂ, ಹೃದಯಂಗಮವಾಗಿಯೂ ಇರುವ ರೀತಿಯಿಂದ ಗ್ರಂಥಕಾರರು ವಿರಚಿಸಿ, ಕನ್ನಡ ಸಾಹಿತ್ಯಕ್ಕೆ ಮಹೋಪಕಾರ

ಮಾಡಿದ್ದಾರೆ. ಮಧ್ಯೆ ಮಧ್ಯೆ ಬಸವೇಶ್ವರ, ಶೀಲವಂತಯ್ಯ, ನೀಲಮ್ಮ, ಪ್ರಭುದೇವ ಮುಂತಾದ ಪಾತ್ರಗಳ ಮುಖದಿಂದ ಅವರು ಹಾಡಿಸಿರುವ ವಚನಗಳು ಈ ನಾಟಕಕ್ಕೆ ಅಂತ್ಯಂತ ಶೋಭೆಯನ್ನುಂಟುಮಾಡಿವೆ. ಉತ್ತಮವಾದ ಕಥಾ ಸಂವಿಧಾನದಿಂದಲೂ, ಸುಂದರ ಶೈಲಿಯಿಂದಲೂ,ಅಂದವಾದ ಮುದ್ರಣದಿಂದಲೂ ಕೂಡಿದ ಈ ಗ್ರಂಥವನ್ನು ಪ್ರತಿಯೊಬ್ಬ ಕನ್ನಡಿಗನು ಓದಬೇಕೆಂದು ನಮ್ಮ ಬಿನ್ನಹ. ”

—ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು.

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೧; ಸಂಚಿಕೆ ೯; ಪು. ೬೦೧-೬೦೨. ೧೯೩೮.

೩೮

**ಗ್ರಂಥ:** ತಮೋಹರಣ ಅರ್ಥಾತ್ ಬಸವಭಾನು

**ಪ್ರಭೇದ:** ಗದ್ಯ-ವಿಮರ್ಶೆ

**ಕರ್ತೃ:** ಪಾವಟೆ ( ಸಿದ್ಧರಾಮಪ್ಪ ದುಂಡಪ್ಪ )

**ಕಾಲ:** ಜ. ೧೮೭೪ ಮ. ೧೯೩೯.

**ಆಕಾರ:** ೨೧×೧೩ ಸೆ. ಮಿ.

**ಪುಟ:** ೮+೧೩೩+೨=೧೪೩

**ಸಾಲು:** ೨೭

**ಅಕ್ಷರ:** ೨೨

**ಸ್ಥಳ:** ಹುಬ್ಬಳ್ಳಿ

**ಪ್ರಕಾಶಕ:** ಕರ್ತೃ

**ಆವೃತ್ತಿ:** ಪ್ರಥಮ

**ಮಿತಿ:** ೧೯೨೨

**ಬೆಲೆ:** ೧-೦-೦ ರೂ.

**ಸಾರಾಂಶ:** ಬಸವಣ್ಣನವರ ಜೀವನದ ವಿಷಯವಾಗಿ ವಿರೋಧಿಗಳು ಹಾಕಿದ ಸಂಶಯಾತ್ಮಕ, ಆಪಾದನೆಯುಕ್ತ ಪ್ರಶ್ನೆಗಳಿಗೆ ವೇದ, ಆಗಮ, ಉಪನಿಷತ್ತು, ಪುರಾಣ, ಕಾವ್ಯ-ಇತ್ಯಾದಿ ಗ್ರಂಥಗಳಿಂದ ಆಧಾರಗಳನ್ನು ಕೊಟ್ಟು ಈ ಗ್ರಂಥದಲ್ಲಿ ಉತ್ತರಿಸಲಾಗಿದೆ. 'ವೀರಶೈವನಾದ ಬಸವಣ್ಣನು ಜೈನನಾದ ಭವಿ-

ಬಿಜ್ಜಳನಲ್ಲಿ ಸೇವೆಯನ್ನೇಕೆ ಮಾಡಿದನು?' 'ಬಸವ' ಹಾಗು 'ಲಿಂಗಾಯತ' ಶಬ್ದೋತ್ಪತ್ತಿ ಎಂತು? 'ಬಸವಣ್ಣನವರಿಗೆ ಸಂಸ್ಕೃತವು ಬರುತ್ತಿತ್ತೇ?' 'ಬರುತ್ತಿದ್ದರೆ ವೇದಾಗಮಗಳ ನಿಂದೆಯನ್ನೇಕೆ ಮಾಡಿದನು?'– ಇವೇ ಮುಂತಾದ ೧೦೦ ಪ್ರಶ್ನೆಗಳನ್ನು ಎದಿರಿಟ್ಟು ವಿಷಯ ಪ್ರತಿಪಾದನ ಮಾಡಲಾಗಿದೆ. ಬಹು ಕುತೂಹಲಕಾರಿಯಾದ ಗ್ರಂಥವಿದು.

---

**ಆಕರ :**

೧. ಶಾಂತೇಶ ಧರ್ಮಾರ್ಥ ವಾಚನಾಲಯ, ಧಾರವಾಡ, ಗ್ರಂಥ ನಂ. ೯೬.
೨. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪು. ೨೦೨.

೩೯

**ಗ್ರಂಥ :** ತಲೆದಂಡ

**ಪ್ರಭೇದ :** ನಾಟಕ

**ಕರ್ತೃ :** ಬೇಂದ್ರೆ (ದತ್ತಾತ್ರೇಯ ರಾಮಚಂದ್ರ)

**ಕಾಲ :** ಜ. ೩೧-೧-೧೮೯೬

**ಸಾರಾಂಶ :** ಬಸವಣ್ಣನವರ ಜೀವನದ ಕೊನೆಯ ದಿನಗಳಿಗೆ ಸಂಬಂಧಿಸಿದ ಸಿನೆಮಾಕ್ಕೆ ಅಳವಡಿಸಿದ ನಾಟಕವಿದೆಂದು ನನಗೆ ಕರ್ತೃಗಳು ಮುಖಾಮುಖಿ ಹೇಳಿದರು (೧೮-೧೦-೬೦). ಅಪ್ರಕಟಿತ.

---

**ಆಕರ :**

ಶರಣ ಸಾಹಿತ್ಯ, ವಿಶೇಷ ಸಂಚಿಕೆ, ಪು. ೮೧. ದಿ. ೨೩-೪-೧೯೩೯

೪೦

**ಗ್ರಂಥ :** ಧರ್ಮಭಂಡಾರಿ ಬಸವಣ್ಣನವರು

**ಪ್ರಭೇದ :** ಚರಿತ್ರೆ

**ಕರ್ತೃ :** ಜವಳಿ (ಬಸವರಾಜ ಚೆನ್ನವೀರಪ್ಪ)

**ಕಾಲ :** ಜ. ೧೯೩೧

**ಆಕಾರ :** ೧೮×೧೨ ಸೆ. ಮಿ.

**ಪುಟ :** ೪೮+೩೦೯ = ೩೫೭

**ಸಾಲು :** ೨೭

**ಅಕ್ಷರ :** ೨೫

**ಸ್ಥಳ :** ಧಾರವಾಡ ಮತ್ತು ದಾವಣಗೆರೆ

**ಪ್ರಕಾಶಕ :** ಮಲ್ಲಾಬಾದಿ ಮಹಾಂತಪ್ಪ ಸಹೋದರರು,
ಪಂಪಾಸಾಹಿತ್ಯ ಪ್ರಕಟನಾಲಯ

**ಆವೃತ್ತಿ :** ಪ್ರಥಮ

**ಮಿತಿ :** ೨೦-೧೨-೧೯೬೩

**ಬೆಲೆ :** ೬=೦೦ ರೂ.

**ಮಾಲೆ :** ಪ್ರೇಮದ ಬಳ್ಳಿಯ ಬಳಗ, ೧೨.

**ಸಾರಾಂಶ :** " ಮೂರು ನೂರು ಐವತ್ತು ಪುಟಗಳಿಗೆ ಮೇಲ್ಪಟ್ಟ ಈ ಕೃತಿಯಲ್ಲಿ ಪ್ರಸ್ತಾವನೆಯನ್ನು ಸೇರಿಸಿ ಹತ್ತು ಲೇಖನಗಳಿವೆ. ಅವುಗಳಲ್ಲಿ ಹಲವಾರು ಬಗೆಯ ವ್ಯಾಸಂಗವಿದೆ. ಬಸವಣ್ಣನವರನ್ನು ಕುರಿತು ತೀರ ಪ್ರಾಚೀನ ಮತ್ತು ಅರ್ವಾಚೀನ-ವಾಗಿರುವ ಎರಡು ಕಾವ್ಯಗಳಿಂದ ಸಾಮಗ್ರಿಯನ್ನು ಅಳವಡಿಸಿದ ಎರಡು ಲೇಖನ-ಗಳಿವೆ. ಬಸವಣ್ಣನವರ ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಹಿತ್ಯಕ ವಿಚಾರಗಳನ್ನು ವಿವೇಚಿಸುವ ಲೇಖನಗಳಿವೆ. ಬಸವಣ್ಣನವರ ವ್ಯಕ್ತಿತ್ವ ಮತ್ತು ಅವರ ವಚನಗಳ ಶೈಲಿಯನ್ನು ಕುರಿತು ಎರಡು ದೀರ್ಘ ಲೇಖನಗಳು ಇಲ್ಲಿಯ ಪ್ರಮುಖ ಆಕರ್ಷಣೆಯೆನ್ನಬಹುದು. ಬಸವಣ್ಣನವರ ವಚನಗಳನ್ನು ಆಳವಾಗಿ ಸೂಕ್ಷ್ಮವಾಗಿ ನಿರುಕಿಸುವ ದೃಷ್ಟಿಯು ಇಲ್ಲಿ ಸ್ಪಷ್ಟವಾಗಿದೆ. ಭೀಮ ಕವಿಯ ' ಭಕ್ತಿ ಭಾಂಡಾರಿ ' ಎಂಬ ಪದವನ್ನು ಶೀರ್ಷಿಕೆಯನ್ನಾಗಿ ಬಳಸಿಕೊಂಡ ಕೀರ್ತಿಶೇಷ ಎಂ. ಆರ್. ಶ್ರೀಯವರ ಗ್ರಂಥವು ಸುಪ್ರಸಿದ್ಧವಿದೆ. ಬಸವಣ್ಣನವರ ವಚನದಲ್ಲಿಯ ' ಧರ್ಮಭಂಡಾರಿ ಬಸವಣ್ಣನವರು ' ಎಂಬ ಶೀರ್ಷಿಕೆಯನ್ನು ಈ ಕೃತಿಗೆ ಕೊಡ-ಲಾಗಿದೆ. ಬಸವಣ್ಣನವರ ಮೂರ್ತಿಸ್ವರೂಪದ ಹಿರಿಮೆಯನ್ನು ಇಲ್ಲಿ ಸ್ಪಷ್ಟಗೊಳಿಸ-ಲಾಗಿದೆ.

" ಈ ಗ್ರಂಥದಲ್ಲಿಯ ಎಲ್ಲ ನಿರ್ಣಯಗಳನ್ನು ಎಲ್ಲರೂ ಒಪ್ಪುವರೆಂದು ನಾನು ಭಾವಿಸಿಲ್ಲ. ಅಲ್ಲದೆ ಲೇಖಕರು ಬರಿಯ ನಿರ್ಣಯಗಳನ್ನು ಮಂಡಿಸಿಲ್ಲ. ತಮ್ಮ ದೃಷ್ಟಿಯ ಭಿನ್ನಾಭಿಪ್ರಾಯಗಳನ್ನು ಎತ್ತಿಹೇಳಿದ್ದಾರೆ. ಅಲ್ಲಲ್ಲಿ ಕೆಲವು ಅಂಶಗಳನ್ನು ಹೆಚ್ಚು ಎಳೆ ದಂತಿದ್ದರೂ ಇಲ್ಲಿಯ ವಿವೇಚನೆಯು ಗಮನಾರ್ಹವಾಗಿದೆ. ಲೇಖಕರು ಸಮಂಜಸವೆನಿಸುವ ಆಧಾರಗಳನ್ನು ಒದಗಿಸಿದ್ದಾರೆ. ಅವುಗಳ ಬಗೆಗೆ ಇನ್ನೊಂದು ಪಾರ್ಶ್ವವಿರುವದು

ಸಾಧ್ಯವಿದೆ. ಆದುದರಿಂದ ಬಸವಣ್ಣನವರನ್ನು ಕುರಿತು ವ್ಯಾಸಂಗದ ಪರಿಧಿಯನ್ನು ಹೆಚ್ಚಿಸುವಲ್ಲಿ ಈ ಗ್ರಂಥವು ಪ್ರಚೋದಕವೇ ಆಹುದು. "

—ಪ್ರೊ. ಸ. ಸ. ಮಾಳವಾಡ ಅವರ 'ಮುನ್ನುಡಿ'ಯಿಂದ

೪೧

## ಗ್ರಂಥ : ನಮಸ್ಕಾರ ಗದ್ಯ

**ಕರ್ತೃ :** ಪಾಲ್ಕುರಿಕಿ ಸೋಮನಾಥ

**ಸಾರಾಂಶ :** "ಇದರಲ್ಲಿ ಒಂದುನೂರು ಹದಿನೆಂಟು ಪಾದಗಳಿವೆ. ಪ್ರತಿ ಪಾದದಲ್ಲಿಯೂ ನಾಲ್ಕು ನಾಲ್ಕು ಮಾತ್ರೆಗಳ, ನಾಲ್ಕು ನಾಲ್ಕು ಗಣಗಳಿವೆ. ಪ್ರತಿ ಪಾದದ ಅಂತ್ಯದಲ್ಲಿ 'ನಮೋ' ಎಂಬ ಶಬ್ದವಿದೆ. ಇದರಲ್ಲಿ ದ್ವಿಪದ ಪ್ರಾಸ ನಿಯಮವೂ ನಿರ್ವಹಣೆಯಾಗಿದೆ.

"ಉದಾಹರಣೆಗೆ :— ಶರಣೋತ್ಕರ ಸಂಸರ್ಗಾಯ ನಮೋ, ನಿರಸಿತಖಿಲ ಸ್ವರ್ಗಾಯ ನಮೋ, ಸಾಕ್ಷಾತ್ಕಲಿಯುಗ ಭರ್ಗಾಯ ನಮೋ, ಬಕ್ಷಿತ - ವಿಕ್ಷಿ ಸಂವರ್ಗಾಯ ನಮೋ

"ಈ ಗದ್ಯದ ಪ್ರತಿಪಾದದ ಕೊನೆಯಲ್ಲಿ,'ನಮ' ಶಬ್ದವು ಸೇರಿರುವದರಿಂದ, ಈ ಗದ್ಯಕ್ಕೆ 'ನಮಸ್ಕಾರಗದ್ಯ' ವೆಂದೂ, ಇದರಲ್ಲಿ ಪ್ರತಿಪಾದವನ್ನೂ ಕುಸುಮವನ್ನಾಗಿ ಪರಿಗಣಿಸಿ, ಇದಕ್ಕೆ 'ಬಸವಾಷ್ಟೋತ್ತರ ಶತನಾಮ ಕುಸುಮ'ವೆಂದು ಸೋಮ-ನಾಥನು ಉಲ್ಲೇಖಿಸಿದ್ದಾನೆ."

—ಶ್ರೀ ಬಂಡಾರು ತಮ್ಮಯ್ಯನವರು

---

**ಆಕರ :**

೧. ಶರಣ ಸಾಹಿತ್ಯ, ಸಂಪುಟ ೧೭; ಸಂಚಿಕೆ ೭; ಪು. ೪೪೦. ಅಕ್ಟೋಬರ ೧೯೫೪

೪೨

## ಗ್ರಂಥ : ನಂದಿಯಾಗಮ ಲೀಲೆ

**ಪ್ರಭೇದ :** ಕಾವ್ಯ - ಭಾಮಿನಿಷಟ್ಪದಿ **ಸಂಧಿ** : ೧೫, **ಪದ** : ೧೧೦೦

**ಕರ್ತೃ :** ವೀರಸಂಗಯ್ಯ ( ಕೋ )

**ಕಾಲ :** ೧೫೮೪

ಆಕಾರ : ಕಾಗದ ೧೩·೩×೮·೩ ಇಂಚು

ಪತ್ರ : ೨೭೮

ಸಾಲು : ೨೪

ಅಕ್ಷರ : ೧೫

ಸಾರಾಂಶ : ನಂದಿಯ ಅವತಾರವಾದ ಬಸವೇಶ್ವರನ ಚರಿತ್ರೆ ವರ್ಣಿತವಾಗಿದೆ. ಕವಿಯು ' ಭಕ್ತಿಪಾರವಶ್ಯದಿಂದ ಚರಿತ್ರೆಗೆ ವಿರೋಧವಾದ ಎಷ್ಟೋ ಸಂದರ್ಭಗಳನ್ನು ಈ ಗ್ರಂಥದಲ್ಲಿ ನಿರೂಪಿಸಿದ್ದಾನೆ. ' ಬಸವೇಶ್ವರನು ಭೂಮಂಡಲವನ್ನು ಉದ್ಧರಿಸಲು ಹುಟ್ಟಿಬಂದನೆಂದು ಹೇಳಿದೆ. ಕಾವ್ಯದಿಂದ ಕೆಲವುಪದ್ಯ ಗಳನ್ನು ಆಯ್ದು ಕೆಳಗೆ ಕೊಟ್ಟಿದೆ.

ಬಸವನ ನಾಮವ ನುಡಿದು ಬದುಕಿದೆ।
ಬಸವನ ನಾಮವ ಕೇಳಿ ಜೀವಿಪೆ।
ಬಸವನ ನಾಮವ ಬರೆದು ಭವದಾ ಬಂಧನವ ವಿಧಿಪೆ।
ಬಸವ ನಾಮವ ನೋಡಿ ಸುಖಿಸುವೆ।
ಬಸವ ನಾಮವ ನುಡಿದು ಧನ್ಯನು।
ಬಸವ ನಾಮವ ಹೃದಯದಲಿಟ್ಟು ನೆನವನರ್ಪಿಸುವೆ ॥ ಸಂ. ೨, ಪ. ೧

ಗರುಡಗಾಂಧರ್ವ ಕಿನ್ನರಕ್ಷರು।
ಸಿದ್ಧ ವಿದ್ಯಾಧರರು ಅಸುರರು।
ಹರಿಯು ಅಜ ರುದ್ರ ಇಂದ್ರರಮರರು ಮುಣುಗಿ ತೇಲುತಿರೆ।
ಪರಮ ವೃಷಭಾವತಾರದಲಿ ಬಂದು।
ಶರಧಿಗಾಜ್ಞೆಯ ಮಾಡಿ ಪಾದದೀ।
ಧರಣಿ ನಿರ್ಮಿತ ಮಾಡಿದಾತನ ಚರಣಕೆರಗುವೆನೂ ॥ ಸಂ. ೫, ಪ. ೧

ನಡೆಯು ಪರುಷವು ಪಾದ ಪೀಠವು।
ನುಡಿಯು ಪರುಷವು ವಾಕ್ಕು ಜಿಂಹೆಲಿ।
ವಿಡಿದ ಕರದಲಿ ಹಸ್ತ ಪರುಷವು ಘನವ ತೋರುತಲಿ।
ಒಡನೆ ನಯನದಿ ನೋಟ ಪರುಷವು।
ಕೊಡುವುದಿಷ್ಟಾರ್ಥ ಭಾವ ಪರುಷದಿ।
ಒಡೆಯ ಬಸವನ ತವನಿಧಿಯ ಚರಣಕೆರಗುವೆನು ॥ ಸಂ. ೯, ಪ. ೨

ಆದಿ ಬಸವನ ಪಾದ ಸೋಂಕಲು ।
ಮೇದಿನಿಯ ಉತ್ಪತ್ತಿ ವೈದಿವುದು ।
ವೇದ ನಾಲ್ಕು ವಿರಾಟ ಪುರುಷನುಯೆಂದು ಸ್ತುತಿಸುವವು ।
ಬೋಧ ಗುರುವಿನ ಚರಣದಿಂದಲಿ ।
ಆದುದು ಸರ್ವರಿಗೆ ಮೋಕ್ಷವು ।
ಈ ಧರೆಗೆ ವೃಷಭ ಆಧಾರೆನುತ ನಮಿಸುವೆನು ॥ ಸಂ. ೧೨, ಪ. ೨

---

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೨. ಪು. ೨೨೯, ಕ್ರಮಾಂಕ ೭೩೧; ಮತ್ತು ಕೆ. ಎ. ೩೦೬.
೨. ಶರಣ ಸಾಹಿತ್ಯ, ವಿಶೇಷ ಸಂಚಿಕೆ, ಪು. ೬೫. ದಿ. ೨೩-೪-೧೯೩೯.
೩. ಬಸವ ತತ್ವ ರತ್ನಾಕರ, ಪು. ೫೯೫- ೫೯೬.

೪೩

ಗ್ರಂಥ : **ನಾಗಬಂಧ** ಭಾ. ೪
ಪ್ರಭೇದ : ಐತಿಹಾಸಿಕ ಕಾದಂಬರಿ
ಕರ್ತೃ : ಪುಟ್ಟಸ್ವಾಮಯ್ಯ ( ಬಿ )
ಕಾಲ : ಜ. ೨೭-೬-೧೮೯೭
ಆಕಾರ : ೧೮×೧೨ ಸೆ. ಮಿ.
ಪುಟ : ೭+೨೭೧ = ೨೭೮
ಸಾಲು : ೩೦
ಅಕ್ಷರ : ೨೫
ಸ್ಥಳ : ಬೆಂಗಳೂರು
ಪ್ರಕಾಶಕ : ಶಾರದಾ ಪ್ರಕಟನಾಲಯ
ಆವೃತ್ತಿ : ಪ್ರಥಮ
ಮಿತಿ : ೧೯೬೨
ಬೆಲೆ : ೩=೦೦ ರೂ.
ಮಾಲೆ : ಶಾರದಾ ಪ್ರಕಟನಾಲಯ, ಪ್ರಕಟನೆ, ೧೨

**ಸಾರಾಂಶ :** "ಬಸವಣ್ಣನವರು ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ ಕನ್ನಡ ನಾಡಿನಲ್ಲಿ ಅಭೂತಪೂರ್ವವಾದ ಧರ್ಮಕ್ರಾಂತಿಯ ಕಾರಣರಾದರು.... ಅನಂತರ ಕೆಲವು ವರುಷಗಳಲ್ಲಿಯೇ ಇನ್ನೊಂದು ಬೇರೆ ಸ್ವರೂಪದ ಕ್ರಾಂತಿಯುಂಟಾಯಿತು. ಮೊದಲನೆಯ ಕ್ರಾಂತಿ ರಚನಾತ್ಮಕ ಮತ್ತು ಸಾಂಸ್ಕೃತಿಕವಾದರೆ ಎರಡನೆಯದು ವಿನಾಶಕ ಮತ್ತು ರಾಜಕೀಯವಾಗಿತ್ತು. ಈ ಎರಡನೆಯ ಕ್ರಾಂತಿಯ ಪರಿಣಾಮವಾಗಿ ಕಲ್ಯಾಣದಲ್ಲಿ ನೆರದಿದ್ದ ಶರಣರೆಲ್ಲ ತಮ್ಮ ಕಟ್ಟಕಡೆಯ ನಿಲುವನ್ನು ಕಾಣಲು ಚದುರಿ ಹೋಗಬೇಕಾಯಿತು. ಈ ಎರಡನೆಯ ಕ್ರಾಂತಿಯ ನಿಜಸ್ವರೂಪ, ಅದಕ್ಕೆ ಹಿನ್ನೆಲೆಯಾದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಪರಿಸ್ಥಿತಿ, ಆಗಿನ ಕಾಲದ ಜನರ–ಮುಖ್ಯವಾಗಿ ಶ್ರೀಮಂತರ ಸಾಮಂತರ ವಿಲಾಸಮಯ ವೈಭವ ಜೀವನ, ತ್ಯಾಗ ಮತ್ತು ವಿರಕ್ತಿಪ್ರಧಾನವಾದ ಶೈವ-ಶರಣ ಧರ್ಮದಿಂದ ಅದರ ಮೇಲೆ ಒದಗಿದ ಪ್ರತಿಘಾತ ಇವುಗಳನ್ನು ಪ್ರಸ್ತುತ ಕಾದಂಬರಿಯಲ್ಲಿ ನಿರೂಪಿಸಲು ಪ್ರಯತ್ನಿಸಿದ್ದೇನೆ."

—ಲೇಖಕರ 'ಮೊದಲ ಮಾತಿ'ನಿಂದ

**ನೋಡು :** ೧. ಉದಯರವಿ
೨. ರಾಜ್ಯಪಾಲ
೩. ಕಲ್ಯಾಣೇಶ್ವರ
೪. ಮುಗಿಯದ ಕನಸು
೫. ಕ್ರಾಂತಿ-ಕಲ್ಯಾಣ

೪೪

**ಗ್ರಂಥ :** **ಪರಮಾತ್ಮನ ಸ್ವರೂಪ**

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಹಳಕಟ್ಟಿ (ಫಕೀರಪ್ಪ ಗುರುಬಸಪ್ಪ) ಜ. ೨-೭-೧೮೮೦

**ಆಕಾರ :** ೨೧ × ೧೩ ಸೆ. ಮಿ.

**ಪುಟ :** ೪೭

**ಸ್ಥಳ :** ವಿಜಾಪುರ

ಪ್ರಕಾಶಕ : ಕರ್ತೃ
ಆವೃತ್ತಿ : ಪ್ರಥಮ
ಮಿತಿ : ೧೯೪೮
ಬೆಲೆ : ೦-೧೨-೦ ಆಣೆ
ಮಾಲೆ : ಶಿವಾನುಭವ ಗ್ರಂಥಮಾಲಾ, ೧೧

**ಸಾರಾಂಶ :** ಇದರಲ್ಲಿ ಪರಮಾತ್ಮನಿಗೆ ಸಂಬಂಧಪಟ್ಟ ಬಸವಣ್ಣನವರ ೧೦೧ ವಚನಗಳನ್ನು ಸಂಗ್ರಹಿಸಲಾಗಿದೆ. ವಚನಗಳಿಗೆ ಅರ್ಥ ಬರೆಯಲಾಗಿದೆ. 'ದೇವರು ಒಬ್ಬನೇ ಇದ್ದಾನೆ' 'ಕಿರುಕುಳ ದೇವತೆಗಳೆಲ್ಲರೂ ಪರಮಾತ್ಮನಲ್ಲ' 'ಯಜ್ಞಾದಿಗಳನ್ನು ಮಾಡದಿರು' 'ಬಲಿ ಕೊಡಬೇಡ' 'ಜ್ಯೋತಿಷ್ಯವನ್ನು ನಂಬಬೇಡ' 'ತೀರ್ಥಯಾತ್ರೆಗಳನ್ನು ಮಾಡಬೇಡ' 'ಪ್ರಾಯಶ್ಚಿತ್ತಗಳಿಲ್ಲ' 'ಕರ್ಮಠನಾಗಬೇಡ' 'ಪರಮಾತ್ಮನು ತನ್ನಲ್ಲಿಯೇ ಇದ್ದಾನೆ,' 'ಲಿಂಗಧ್ಯಾನ' 'ಲಿಂಗದಲ್ಲಿ ಸಾಮರಸ್ಯ'– ಈ ತಲೆಕಟ್ಟುಗಳಿಗೆ ಸಂಬಂಧಿಸಿ ಪರಮಾತ್ಮನ ನಿಲವನ್ನು ವಿವರಿಸುವ ಬಸವಣ್ಣನವರ ವಚನಗಳನ್ನು ಕೊಡಲಾಗಿದೆ.

"ಗ್ರಾಮಾಂತರಗಳಲ್ಲಿರುವ ಜನರು ಬಸವೇಶ್ವರನ ವಚನಗಳ ನಿಜಸ್ವರೂಪವನ್ನೂ ಅವುಗಳಲ್ಲಿರುವ ತತ್ವಗಳನ್ನೂ ಅರಿತುಕೊಳ್ಳಬೇಕೆಂಬುದೇ ಈ ಗ್ರಂಥದ ಮುಖ್ಯ ಉದ್ದೇಶವಾಗಿರುತ್ತದೆ."

—ಸಂಪಾದಕರ 'ಪ್ರಸ್ತಾವನೆ'ಯಿಂದ

೪೫

**ಗ್ರಂಥ : ಪಂಚ ಪ್ರಕಾರದ ಗದ್ಯ**
**ಕರ್ತೃ :** ಪಾಲ್ಕುರಿಕಿ ಸೋಮನಾಥ

**ಸಾರಾಂಶ :** "ಇದು ಅನ್ವರ್ಥಕ ನಾಮಾಂಕಿತವಾಗಿದೆ. ಈ ಗದ್ಯವು ಐದು ವಿಧವಾಗಿದೆ. ಮೊದಲನೆ ಪ್ರಕಾರದಲ್ಲಿ ಎಂಟು ಗದ್ಯಗಳನ್ನು ರಚಿಸಿದ್ದಾನೆ. ಇದರಲ್ಲಿ ಕೇವಲ ಪ್ರಾಸ ವಿಶೇಷವನ್ನು ಮಾತ್ರ ನಿರ್ವಹಿಸಿಲಾಗಿದೆ. ಆದರೆ ಉಳಿದ ನಾಲ್ಕು ಪ್ರಕಾರ ಗದ್ಯಗಳಲ್ಲಿ ಮಾತ್ರ ಗಣಗಳು ಬಂಧಿತವಾಗಿವೆ.

"ಎರಡನೇ ಪ್ರಕಾರ ಗದ್ಯದಲ್ಲಿ ಹದಿನಾರು ಪಾದಗಳಿವೆ. ಪ್ರತ್ಯೇಕ ಚರಣಂಗಳಲ್ಲಿಯೂ ನಾಲ್ಕು ನಾಲ್ಕು ಮಾತ್ರೆಗಳ ನಾಲ್ಕು ಗಣಗಳಿವೆ. ಮುಕ್ತ ಪದಗ್ರಸ್ತ, ಶಬ್ದಾಲಂಕಾರ ಸಹಿತವಾಗಿದೆ.

"ತೃತೀಯ ಪ್ರಕಾರದ ಗದ್ಯದಲ್ಲಿ ಒಟ್ಟು ಮೂವತ್ತೊಂದು ಚರಣಗಳಿವೆ. ಇದರಲ್ಲಿ ಮುಕ್ತ ಪದಗ್ರಸ್ತರಹಿತವಾದ ಅಂತ್ಯಕ್ಷರ ಪ್ರಾಸವಿದೆ. ತುರೀಯ ಪ್ರಕಾರ ಗದ್ಯದಲ್ಲಿ ಪ್ರತಿಪಾದದಲ್ಲಿಯೂ ಐದೈದು ಮಾತ್ರೆಗಳ ಎರಡೆರಡು ಗಣಗಳೂ ಸರ್ವ ಲಘುನಿಯಮವೂ ಅಂತ್ಯ ಪ್ರಾಸವೂ ಹನ್ನೆರಡು ಪಾದಗಳೂ ಇವೆ.

"ಪಂಚಮ ಪ್ರಕಾರ ಗದ್ಯದಲ್ಲಿ ಒಟ್ಟು ಮೂವತ್ತೊಂದು ಚರಣ ಎಂಟು ಪಾದ-ಗಳೂ, ಪ್ರತಿಪಾದದಲ್ಲಿಯೂ ನಾಲ್ಕು ನಾಲ್ಕು ಮಾತ್ರೆಗಳ ಎರಡೆರಡು ಗಣಗಳು ಇರುವವಲ್ಲದೇ ಸರ್ವಲಘುನಿಯಮವೂ ಅನುಸರಿಸಲಾಗಿದೆ.

"ಉದಾಹರಣೆ : **ಪ್ರಥಮ ಪ್ರಕಾರ ಗದ್ಯ** :–ನಿರಾಕುಳ ನಿರರ್ಗಳ ನಿರತಿ-ಶಯ ನಿಜಭಕ್ತಿ ತಾತ್ಪರ್ಯ ಶರಣಗಣ ಚರಣಾರವಿಂದ ಮಕರಂದ ದಾರಾಭಿಷೇಕ ಸಂಗತ ಮಂಗಳಾಲಂಕಾರ ವಿರಚಿತೋತ್ತಮಾಂಗ ಅನವರತ ಸುಖಾನುಷಂಗ ಜ್ಞಾನ ವೈರಾಗ್ಯೈಶ್ವರ್ಯ ವಿಭ್ರಾಜಿತಗುಣೋತ್ತುಂಗ, ಸಕಲಲೋಕ ಪ್ರಸಾರಿತ-ಕೀರ್ತಿಕಾಂತಾ ಭುಜಂಗ ದೇವ ಬಸವಾ.

**ದ್ವಿತೀಯ**:— ದೂರ ನಿರಾಕೃತ ಭವಸಂಸರ್ಗಾ ಸರ್ಗಸ್ಥಲಯ ಪಾಲನ ಭರಿತಾ ಚರಿತಾರ್ಥಖಿಲ ಜಂಗಮಭಕ್ತಾ ಭಕ್ತಜನಾಂತಃಕರಣ ನಿಯುಕ್ತಾ ದೇವ ಬಸವಾ.

**ತೃತೀಯ ಪ್ರಕಾರ**:— ಜಯ ಜಯ ಭಕ್ತ ಪದಾಂಬ ಜಭೃಂಗಾ ಜಯ ಜಯ ಮಂಗಳ ಮಹಿಮೋತ್ತುಂಗ ದೇವ ಬಸವಾ.

**ಚತುರ್ಥ ಪ್ರಕಾರ**:–– ಜಯ ದುರಿತಪರಿಹಣ, ಜಯ ಸುಕೃತ ಪರಿಚರಣ ಜಯ ನಿಕೃತರ ವಿಕಿರಣ ಜಯ ಸುಕ ವಿನುತಿ ಕಲಿತ ಜಯ ವಿಕಚ ಮುಖಲಿಖಿತ ಜಯ ವಿನಯ ನಯ ಮಿಳಿತ....ದೇವ ಬಸವಾ.

**ಪಂಚಮ ಪ್ರಕಾರದ ಪದ್ಯ**:— ಜಯ ಶಿವರಂಜನ, ಜಯ ಭವಭಂಜನ ಜಯ ಕರುಣಾಕರ, ಜಯವರ ಭೀಕರ, ಜಯಮಿತ ಭೂಷಣ, ಜಯಶ್ರಿತ ಪೋಷಣ ಜಯ ಗುಣರಾಜಿತ, ಜಯಗಣಪೂಜಿತ, ಜಯ ಜಯ ಶ್ರೀ ಬಸವದಂಡನಾಥ ನಮಸ್ತೇ ನಮಸ್ತೇ ನಮಃ"

—ಶ್ರೀ ಬಂಡಾರು ತಮ್ಮಯ್ಯನವರು

---

**ಆಕರ** :

೧. ಶರಣ ಸಾಹಿತ್ಯ, ಸಂಪುಟ ೧೭; ಸಂಚಿಕೆ ೭; ಪು. ೪೩೯-೪೦. ಅಕ್ಟೋಬರ ೧೯೫೪

೪೩

## ಗ್ರಂಥ : ಬಸವ ಕಂದ

**ಪ್ರಭೇದ :** ಕಂದ

**ಕರ್ತೃ :** ಚೆನ್ನಮಲ್ಲ

**ಆಕಾರ :** ತಾಳೆಗರಿ ೧೯ × ೫ ಸೆ. ಮಿ.

**ಪತ್ರ :** ೧೮೨ ರಿಂದ ೨೦೩

**ಸಾರಾಂಶ :** ಬಸವಣ್ಣನವರನ್ನು ಕಂದ ಪದ್ಯಗಳಲ್ಲಿ ಕೀರ್ತಿಸುವ ಕಾವ್ಯವಿದು. ಇದರ ಆದಿ ಅಂತ್ಯಗಳ ಒಂದೊಂದು ಪದ್ಯವನ್ನಿಲ್ಲಿ ಎತ್ತಿ ಕೊಡುತ್ತೇವೆ:

**ಆದಿ :** ಶ್ರೀ ಮಹಾದೇವನೆ ಶಂಕರ
ಸೋಮನೆ ಸುಖಪೂರ್ಣಧಾಮ ನಿತ್ಯನೆ ನಿರಘನೆ ।
ಕಾಮಿತ ವರಸುರ ಭೂಜನೆ
ಪ್ರೇಮದಿ ಸಲಹೆನ್ನ ಪರಮ ಗುರು ಬಸವೇಶಾ ॥ ೧ ॥

**ಅಂತ್ಯ :** ಕಂದ ಶತವಂದು ಕುಸುಮವ ।
ಚಂದದಿ ಚೆನ್ನಮಲ್ಲ ಬಸವಗುರುವಿನ ಚರಣಾ ॥
ದ್ವಂದ್ವವನು ತನ್ನ ಹೃದಯದ ।
ಮಂದಿರದೊಳಗಿರಿಸಿ ಸರಿಸಿ ಭಜಿಸಿದ ಸತತಂ ॥೧೦೨॥

ಇದು ಬಸವ ಪದ ಪದಾಂಕಿತ ।
ಇದನಾವವನೋದಿ ಕೇಳುತಿಹ ಸದ್ಭಕ್ತರ ॥
ಸದನವದು ಶಿವನಿರುತಿಹ ।
ಸದನವು ನಿಜ ಬಸವ ಗುರು ಭಜಿಸಿರೆ ಸತತಂ ॥೧೦೩॥

**ನೋಡು :** ೧. ಬಸವ ಸ್ತೋತ್ರದ ಕಂದ

---

**ಆಕರ :**

೧. ಸಮಗ್ರ ವಚನ ವಾಙ್ಮಯ ಪ್ರಕಟನಾ ಯೋಜನೆಯ ಗ್ರಂಥ ಭಂಡಾರ ಹಸ್ತಪ್ರತಿ ನಂ. ೧೩೧ (೧೭).

೪೭

**ಗ್ರಂಥ :** ಬಸವ ಕೃತಿ

**ಪ್ರಭೇದ :** ವೃತ್ತ-ಕಂದ

**ಕರ್ತೃ :** ಷಡಕ್ಷರ ದೇವ

**ಕಾಲ :** ೧೬೭೦

**ಸಂಪಾದಕ :** ಹಿರೇಮಠ (ಆರ್. ಸಿ.)

**ಆಕಾರ :** ೨೧×೧೩ ಸೆ. ಮಿ.

**ಸ್ಥಳ :** ಧಾರವಾಡ

**ಪ್ರಕಾಶಕ :** ಕರ್ನಾಟಕ ವಿಶ್ವವಿದ್ಯಾಲಯ

**ಮಿತಿ :** ೧೯೬೭

**ಸಾರಾಂಶ :** ಇದು 'ಬಸವರಾಜ ವಿಜಯಂ' ದ ಕೊನೆಗೆ ಅನುಬಂಧದಲ್ಲಿ ಮುದ್ರಿತವಾಗಿದೆ. "ಈ ಬಸವ ಸ್ತುತಿ ಪದ್ಯ ಸಂಗ್ರಹದಲ್ಲಿ ಎರಡು ಬಗೆಯ ಪದ್ಯಗಳಿವೆ: ೧. ಸಂಸ್ಕೃತ ಪದ ಭೂಯಿಷ್ಟವಾದ ಅರ್ಥಗಾಂಭೀರ್ಯದ ವೈಭವದಿಂದ ಬಸವೇಶನ ವ್ಯಕ್ತಿತ್ವವನ್ನು ಚಿತ್ರಿಸುವ ಲಲಿತ ಪದ ವೃತ್ತಗಳು; ೨. ಕವಿಯ ಅಂತರಂಗದಿಂದ ಹೊರಹೊಮ್ಮಿದ ಭಾವಲಹರಿಗಳನ್ನು ಸೂಸುವ ಆತ್ಮನಿವೇದನ ಪರವಾದ ಇತರ ವೃತ್ತ ಕಂದಗಳು."

—ಸಂಪಾದಕರ 'ಮುನ್ನುಡಿ' ಯಿಂದ

**ಆದಿಯಲ್ಲಿಯ ಪದ್ಯ ಇಂತಿದೆ :**

ಶ್ರೀ ಕರಗುಣೌಂಬುಧಿ ಸುಧಾಕರ ಕಳಾಧರ ಕೃ–
ಪಾಕಲಿತ ಲೋಚನ ದಿವಾಕರ ಸಹಸ್ರಾ--
ಲೋಕ ರುಚಿವಿಗ್ರಹ ಪಿನಾಕಧರ ದರ್ಶನಕ–
ಳಾಕರ ಸುಪುಣ್ಯ ಪರಿಪಾಕಯುತ ಸೇವ್ಯಾ-
ಭೀಕರಯಮ ಪ್ರಹರ ನಾಕಸದನಾರ್ಚ್ಯ ಪದ
ಕೋಕನದ ನಿರ್ಜಿತವರಾಕ ಪರವಾದಾ–
ನೀಕ ವಿನತಾಸುತ ಪತಾಕನುತ ಪಾಲಿಸು ಗ-
ಣೈಕ ಪತಿ ಪಾಲಿತ ಸುಲೋಕ **ಬಸವೇಶಾ.**

೪೮

**ಗ್ರಂಥ : ಬಸವ ಗೀತ**

**ಕರ್ತೃ :** ಮಲ್ಲಿಕಾರ್ಜುನ ಪಂಡಿತಾರಾಧ್ಯ

**ಕಾಲ :** ಸು. ೧೧೬೭

**ಸಾರಾಂಶ :** ಈ ಗ್ರಂಥ ಮಲ್ಲಿಕಾರ್ಜುನ ಪಂಡಿತಾರಾಧ್ಯ ಕೃತವೆಂದು ಕವಿಚರಿತೆಕಾರರ ಅಭಿಪ್ರಾಯ. "ಈತನು ಕಲ್ಯಾಣಕ್ಕೆ ಹೋಗಿ ಬಸವನನ್ನು ನೋಡಬೇಕೆಂದು ಹೊರಟು ಹಾನುಗಲ್ಲಿಗೆ ಬಂದಾಗ ದಾರಿಯಲ್ಲಿ ಒಬ್ಬ ಚರನು ಬಂದು "ಬಸವಂ ಕೂಡಲ ಸಂಗಮೇಶ್ವರನಲ್ಲಿ ಅಡಗಿದಂ; ಬಿಜ್ಜಳನಂ ಶರಣರು ಕೊಂದರು" ಎಂದು ಹೇಳಲು "ಬಸವ ಬಯಲಾದೆಯಾ" ಎಂದು ಅಳಲಿ **ಗೀತವನ್ನು** ಹಾಡಿದನು" ಎಂದು ಕವಿಚರಿತೆಕಾರರು ಹೇಳಿದ್ದಾರೆ. ಈ ಹೇಳಿಕೆಯ ಮೇಲಿಂದ ಮಲ್ಲಿಕಾರ್ಜುನ ಪಂಡಿತರು **ಬಸವಗೀತ** ಅಥವಾ ಬಸವ ಮಹಾತ್ಮ್ಯಗೀತ ಎಂಬ ಗ್ರಂಥವನ್ನು ಕನ್ನಡದಲ್ಲಿ ಬರೆದಿರಬೇಕೆಂದು ತಿಳಿಯುತ್ತದೆ.

ಬಸವತತ್ವ ರತ್ನಾಕರದಲ್ಲಿ ಹೀಗೆ ಹೇಳಿದೆ:

"ಶ್ರೀ ಬಸವಣ್ಣನವರ ಬಗ್ಗೆ ಇವರು (ಪಂಡಿತಾರಾಧ್ಯ) 'ಬಸವಗೀತೆ' ಎಂಬುವ ಕನ್ನಡ ಕಾವ್ಯವನ್ನೂ, 'ಬಸವ ಮಹಿಮಲು' ಎಂಬ ತೆಲಗು ಕಾವ್ಯವನ್ನೂ, ಬರೆದಿರುತ್ತಾರೆ."

---

**ಆಕರ :**

೧. ಕರ್ನಾಟಕ ಕವಿಚರಿತೆ, ಭಾ. ೧, ಪು. ೨೧೩-೨೧೪
೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೫
೩. ಬಸವ ತತ್ವ ರತ್ನಾಕರ, ಪು. ೬೭೫

೪೯

**ಗ್ರಂಥ : ಬಸವ ಗೀತೆ**

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

ಸಂಪಾದಕ: ಮಲ್ಲಾಬಾದಿ (ವೀರಭದ್ರಪ್ಪ)

ಆಕಾರ: ೧೭ × ೧೨ ಸೆ. ಮಿ.

ಪುಟ: ೪೦

ಸಾಲು: ೨೫

ಅಕ್ಷರ: ೨೪

ಸ್ಥಳ: ಧಾರವಾಡ

ಪ್ರಕಾಶಕ: ಶಿ. ಬ. ಹರಿಹರ, ತೋಂಟದಾರ್ಯ ಪ್ರೆಸ್

ಆವೃತ್ತಿ: ತೃತೀಯ

ಮಿತಿ: ೧೯೪೬

ಬೆಲೆ: ೦-೬-೦ ಆಣೆ

ಆಕರ: ಪ್ರೇಮದ ಬಳ್ಳಿಯ ಬಳಗದ ಪ್ರಕಟನೆ, ೧

ಸಾರಾಂಶ: ಬಸವಣ್ಣನವರು ನಿರೂಪಿಸಿದ ೧೭೮ ವಚನಗಳ ಸಂಗ್ರಹ. ಭಾವಗೀತೆಯ ರೂಪದಲ್ಲಿ ವಚನಗಳನ್ನು ಮುದ್ರಿಸಿರುವರು. ಸಂಪಾದಕರ 'ಸವಿನುಡಿ' ಯಲ್ಲಿ ಬಸವಣ್ಣನವರು ಮಾಡಿದ ಲೋಕೋಪಕಾರದ ಕಾರ್ಯಗಳ ವಿಶೇಷ ವರ್ಣನೆಯಿದೆ.

೫೦

ಗ್ರಂಥ: **ಬಸವ ಚರಿತ್ರೆ**

ಪ್ರಭೇದ: ಯಕ್ಷಗಾನ

ಕರ್ತೃ: ಚೆನ್ನಪ್ಪ ಕವಿ

ಕಾಲ: ೧೭೫೦

ಆಕಾರ: ೧೩·೧×೧·೪ ಇಂಚು

ಪತ್ರ: ೪೬ ರಿಂದ ೮೩

ಸಾಲು: ೮

ಅಕ್ಷರ: ೬೨

**ಸಾರಾಂಶ:** ಇದು 'ಶರಣ ಲೀಲಾಮೃತ' ಗ್ರಂಥದ ಭಾಗವಿದ್ದು ಕೇವಲ ಬಸವಣ್ಣನವರ ಚರಿತ್ರೆಗೆ ಸಂಬಂಧಿಸಿದುದಾಗಿದೆ.

---

ಆಕರ:

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩. ಪು. ೧೮

೫೧

**ಗ್ರಂಥ: ಬಸವ ಚರಿತ್ರೆ**

**ಪ್ರಭೇದ:** ಭಾಮಿನಿ ಷಟ್ಪದಿ **ಸಂಧಿ:** ೪ **ಪದ:** ೧೫೫ **ಗ್ರಂಥ:** ೯೦

**ಕಾಲ:** ಸು. ೧೬೦೦

**ಆಕಾರ:** ೭.೬×೨ ಇಂಚು

**ಪತ್ರ:** ೧–೨೮

**ಸಾಲು:** ೯

**ಅಕ್ಷರ:** ೪೦

**ಸಾರಾಂಶ:** ಇದರಲ್ಲಿ ಪರಮೇಶ್ವರನು ಬಸವಣ್ಣನವರ ಘನತೇಜ ಮಹಿಮೆಯನ್ನು ಪಾರ್ವತಿಗೆ ವರ್ಣಿಸಿ ಹೇಳಿದ್ದಾನೆ. ಬಸವಣ್ಣನವರ ಪವಾಡಗಳು ಹೇಳಲ್ಪಟ್ಟಿವೆ. ಕಾವ್ಯದ ಆದಿಯಲ್ಲಿ ೨ ಸಂಸ್ಕೃತ ಶ್ಲೋಕಗಳಿವೆ.

ಅನಂತರ ಕಾವ್ಯವು ಹೀಗೆ ಪ್ರಾರಂಭವಾಗುತ್ತದೆ:

ಶ್ರೀ ಬಸವಲೀಲಾ ವಿನೋದ
ಶ್ರೀ ಬಸವ ಘನತೇಜ ಮಹಿಮೆಯ
ಶ್ರೀ ಬಸವ ಪುಣ್ಯಾದಿ ಚರಿತ್ರೆಯ ಗಿರಿಜೆ ಕೇಳೆಂದ ||ಪಲ್ಲ||

ಗಿರಿಜೆ ಕೇಳ್ಮನ್ನಾದಿಯಲಿ ನಾ |
ಪರಮನಲ್ಲದೆ ಸ್ಮರಿಸೆ ಬಸವ |
ಚರಣ ಕಮಲ ಪಿಡಿಯೆನಾತನ ಘನಕೆ ಘನವೆಂದೂ |
ಹರಣದೊಡೆಯನು ಬಸವರಾಜನು |
ಕರುಣದೊಡೆಯನು ಬಸವರಾಜನು |
ಮರಣವಿರಹಿತನಾಗಿ ಕೊಂಡಾಡಿದೆನು ಕೈಲಾಸಪುರದೊಳಗೆ ||೧||

**ಕಾವ್ಯಮುಕ್ತಾಯ ಷಟ್ಪದಿ**

ಬಸವ ಜಯ ಜಯ ಭಕ್ತವತ್ಸಲ
ಬಸವ ಜಯ ಜಯ ಶಿವನ ಪದವಿಯ
ಕುಸುಮಜಾತೆಯ ಮಂತ್ರಮಾತೆಯ ಜಯತು ವರಗೌರಿ।
ವಸುಧೆ ಶ್ರೀ ಕಲ್ಯಾಣಪಟ್ಟದಿ।
ಬಸವರಾಜನ ಘನ ಪವಾಡವ
ಶಶಿಮುಖಿಯು ಪಾರ್ವತಿಗೆ ಪೇಳಿದ ಶಿವನೆ ಜಯಜಯತು

ಇದಕ್ಕೆ 'ಬಸವೇಶ್ವರ ಚರಿತ್ರೆ' ಎಂದೂ ಕರೆಯುವರು.

ಶ್ರೀ ವ್ಹಿ. ಶಿವಾನಂದರು ಕವಿಯ ಕಾಲ ಕ್ರಿ-ಶ ಸು. ೧೬೦೦ ಎಂದು ಹೇಳಿರುವರು.

---

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩. ಪು. ೧೪-೧೭ ಮತ್ತು ೩೬-೩೭, ಹಸ್ತಪ್ರತಿಗಳು: ನಂ. ಕೆ ೧೯೩; ಕೆ ೨೧; ಕೆ ೪೨೧/೩

೨. ಬಸವ ತತ್ವ ರತ್ನಾಕರ, ಪು. ೬೧೧

೩. ವ್ಹಿ. ಶಿವಾನಂದ: ಸೀಮಾಪುರುಷ ಷಡಕ್ಷರದೇವ, ಪು. ೭೮

೪. ಪ್ರೊ. ಜಿ. ಎಂ. ಉಮಾಪತಿಶಾಸ್ತ್ರಿ, ಬಾಗಲಕೋಟೆ ಇವರ 'ಶಾರದಾಭವನ' ಗ್ರಂಥ-ಭಂಡಾರದಲ್ಲಿ ಪ್ರತಿ ಇದೆ.

೫. ವಚನ ವಾಙ್ಮಯ ಪ್ರಕಟನಾಯೋಜನೆ (ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾ-ಲಯ) ಹಸ್ತಪ್ರತಿ ನಂ. ೩೩೩ (i)

## ೫೨

**ಗ್ರಂಥ:** ಬಸವ ಚರಿತ್ರೆಯ ಲಾವಣಿ

**ಪ್ರಭೇದ:** ಲಾವಣಿ

**ಕರ್ತೃ:** ನಂಜಪ್ಪ ( ಮಾ. ನಂ. )

**ಕಾಲ:** ಸು. ೧೯೨೫

**ಆಕಾರ:** ೧೮×೧೨ಸೆ. ಮಿ.

**ಪುಟ:** ೭+೪೭ = ೫೪

**ಸಾಲು:** ೨೭

**ಅಕ್ಷರ :** ೧೭–೨೩

**ಸ್ಥಳ :** ಬೆಂಗಳೂರು

**ಪ್ರಕಾಶಕ :** ವೀರ ಸಾಹಿತ್ಯ ಭಾಂಡಾರ

**ಆವೃತ್ತಿ :** ಪ್ರಥಮ

**ಮಿತಿ :** ೧೯೪೫

**ಬೆಲೆ :** ೦-೪-೦ ಆಣೆ

**ಮಾಲೆ :** ವೀರಶೈವ ಸಾಹಿತ್ಯ ಭಾಂಡಾರ ಗ್ರಂಥಮಾಲೆ, ೬

**ಸಾರಾಂಶ :** " ಶ್ರೀ ಮಾ. ನಂ. ನಂಜಪ್ಪನವರು ಹರಿಹರನ ಬಸವರಾಜ ದೇವರ ರಗಳೆ, ಸಿಂಗಿರಾಜನ ಮಲಬಸವ ಪುರಾಣ, ಭೀಮ ಕವಿಯ ಬಸವಪುರಾಣ, ಚಾಮರಸನ ಪ್ರಭುಲಿಂಗ ಲೀಲೆ, ಅರ್ಜುನವಾಡದ ಶಿಲಾಶಾಸನ ಮತ್ತು ಶಿವಶರಣರ ವಚನಗಳು ಮೊದಲಾದವುಗಳಿಂದ ಈ ಲಾವಣಿಯ ಕಥಾವಸ್ತುವನ್ನು ಸಂಗ್ರಹಿಸಿದ್ದಾರೆ. ಇದರಲ್ಲಿ ಸಾಹಿತ್ಯದ ಸೌಕುಮಾರ್ಯವೂ, ಇತಿಹಾಸದ ಸತ್ಯ ಸಂಧತೆಯೂ, ಹಾಡು ಗಬ್ಬದ ಸರಳ ಕೋಮಲತೆಯೂ ಒಟ್ಟಿಗೆ ಬೆರೆತಿವೆ. ಆದುದರಿಂದಲೇ ಇದು ಬಸವಣ್ಣನವರ ಚರಿತ್ರೆಯನ್ನು ಸಂಗ್ರಹವಾಗಿ ಅರಿತು ಹಾಡಿ ಆನಂದಿಸಲು ಒಳ್ಳೆಯ ಸಾಧನವಾಗಿದೆ. ವಾಚಕರಿಗೆ ಈ ಲಾವಣಿಯು ಅಲ್ಪ ಶ್ರಮದಿಂದ ಹೆಚ್ಚುಲಾಭವನ್ನುಂಟು ಮಾಡುತ್ತದೆ."

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ 'ಮುನ್ನುಡಿ'ಯಿಂದ

ಬಸವೇಶ್ವರ, ನೀಲಾಂಬಿಕೆ, ಬಾಗೇವಾಡಿಯ ಬಸವೇಶ್ವರ ದೇವಾಲಯ– ಈ ಮೂರು ಚಿತ್ರಗಳಿವೆ.

೫೩

**ಗ್ರಂಥ : ಬಸವ ಚರಿತ್ರೆಯ ಹಾಡು**

**ಪ್ರಭೇದ :** ಗೋವಿನ ಹಾಡು.

**ಕರ್ತೃ :** ನಂಜಪ್ಪ ( ಮಾ. ನಂ. )

**ಕಾಲ :** ಸು. ೧೯೩೫

**ಆಕಾರ :** ೧೮×೧೦.೫ ಸೆ. ಮಿ.

**ಪುಟ :** ೬+೨೧ = ೨೭

**ಸಾಲು :** ೨೮

**ಅಕ್ಷರ :** ೧೨

**ಸ್ಥಳ :** ಚಿಕ್ಕಪೇಟೆ. ಬೆಂಗಳೂರು

**ಪ್ರಕಾಶಕ :** ವೀರಶೈವ ಸಾಹಿತ್ಯ ಭಾಂಡಾರ,

**ಆವೃತ್ತಿ :** ಪ್ರಥಮ

**ಮಿತಿ :** ೧೯೪೫

**ಬೆಲೆ :** ೦–೩–೦ ಆಣೆ

**ಮಾಲೆ :** ವೀರಶೈವ ಸಾಹಿತ್ಯ ಭಾಂಡಾರ ಗ್ರಂಥಮಾಲೆ, ೪

**ಸಾರಾಂಶ :** " ಶ್ರೀ ಬಸವೇಶ್ವರ ಚರಿತ್ರೆಯನ್ನು ಗೋವಿನ ಹಾಡಿನ ಧಾಟಿಯಲ್ಲಿ ರಚಿಸಿದರೆ ಜನಸಾಮಾನ್ಯರಿಗೂ ಮಹಿಳೆಯರಿಗೂ,ಮಕ್ಕಳಿಗೂ ಶ್ರೀ ಬಸವಣ್ಣನವರ ದಿವ್ಯ ಜೀವಿತವನ್ನು ತಿಳಿದುಕೊಳ್ಳಲೂ ಸ್ವತಃ ಹಾಡಿಕೊಳ್ಳಲೂ ಅನುಕೂಲವಾದೀತು-ಸುಲಭವಾದೀತು ಎಂಬ ಒಂದು ಅಭಿಲಾಷೆಯು ಮೂಡಿದುದರ ಫಲವಾಗಿ ಈ ಕೃತಿಯನ್ನು ರಚಿಸಲಾಗಿದೆ."

" ಈ 'ಬಸವ ಚರಿತ್ರೆಯ ಹಾಡಿ'ನ ಕಥಾ ವಸ್ತುವನ್ನು ಹರಿಹರ ಮಹಾಕವಿಯ ಬಸವರಾಜ ದೇವರ ರಗಳೆಯ ಕಥೆಯೊಳಗಣ ಕೊಂಚ ಬದಲಾವಣೆಯೊಡನೆಯೂ....ಫ. ಗು. ಹಳಕಟ್ಟಿ ಅವರ ಬಸವೇಶ್ವರ ಚರಿತ್ರೆ ಎಂಬ ಲೇಖಾಂಕಗಳೊಳಗಣ ಕೆಲವು ಅಭಿಪ್ರಾಯಗಳನ್ನು ಆರಿಸಿಕೊಂಡು ಹೆಣೆಯಲಾಗಿದೆ. ಅದ್ಭುತಗಳನ್ನೂ ಪವಾಡಗಳನ್ನೂ ಆದಷ್ಟು ಕಡಿಮೆಮಾಡಿ ಸಾಧ್ಯವಾದಮಟ್ಟಿಗೂ ಸಹಜವಾಗಿ ಕಥಾನಿರೂಪಣೆ ಮಾಡಲಾಗಿದೆ."

—ಲೇಖಕರ 'ಬಿನ್ನಹ' ದಿಂದ

ಬಾಗೇವಾಡಿ ಶ್ರೀ ಬಸವೇಶ್ವರ ದೇವಸ್ಥಾನ, ಕೂಡಲಸಂಗಮೇಶ್ವರ ಮಂಟಪ, ಶ್ರೀ ಬಸವಣ್ಣನವರ ಹಾಗೂ ಶ್ರೀ ನಿಲಾಂಬಿಕಾ ದೇವಿಯರ ಚಿತ್ರಗಳಿವೆ.

೫೪

**ಗ್ರಂಥ :** ಬಸವ ಚಾರಿತ್ರ್ಯದ ರಾಜನೀತಿ

**ಪ್ರಭೇದ :** ಷಟ್ಪದಿ

**ಕರ್ತೃ :** ಚನ್ನಪ್ಪ

ಕಾಲ : ಸು. ೧೭೫೦

ಆಕಾರ : ೧೧೫×೧·೭ ಇಂಚು

ಪತ್ರ : ೩೯

ಸಾಲು : ೬

ಅಕ್ಷರ : ೪೫

ಸಾರಾಂಶ : ಶರಣಲೀಲಾಮೃತದ ಭಾಗವಾಗಿರುವದಾಗಿ ತಿಳಿದಿದೆ.

---

ಆಕರ :

೧. ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು, ಹಸ್ತಪ್ರತಿ, ಸಂ. ಕೆ. ೨೪೧
೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

೫೫

ಗ್ರಂಥ : ಬಸವ ಜಯಂತಿ ಲಾವಣಿ ಮತ್ತು ಎರ್ರಿಸ್ವಾಮಿಗಳ ಲಾವಣಿ

ಪ್ರಭೇದ : ಲಾವಣಿ

ಕರ್ತೃ : ಕರಿಬಸವಶಾಸ್ತ್ರಿ

ಕಾಲ : ಸು. ೧೯೨೫

ಪುಟ : ೧೬

ಸ್ಥಳ : ರಾಯದುರ್ಗ

ಮಿತಿ : ೧೯೪೧ ?

ಸಾರಾಂಶ : ಪ್ರಾರಂಭದ ಭಾಗದಲ್ಲಿ ಬಸವಣ್ಣನವರನ್ನು ಕುರಿತ ಒಂದು ಲಾವಣಿ ಇದೆ.

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೪; ಸಂಚಿಕೆ ೪; ಕ್ರಿ.ಶ. ೧೯೪೧, ಸಾಹಿತ್ಯ ಸುಗ್ಗಿ ವಿಭಾಗದಲ್ಲಿ ಹೇಳಿದೆ.

೫೬

**ಗ್ರಂಥ:** ಬಸವ ಜನ್ಮ ಮಹಾಕಾವ್ಯವು

**ಪ್ರಭೇದ :** ಚಂಪೂ **ಸಂಧಿ :** ೧೬ **ಗದ್ಯ-ಪದ್ಯ :** ೧೧೮೧

**ಕರ್ತೃ :** ಹಂಪಸಾಗರ ( ಗುರುಲಿಂಗಪ್ಪ ಶಾಂತವೀರಪ್ಪ )

**ಕಾಲ :** ಜ. ೧೮೯೦ ? ಮ ೨೮-೩-೧೯೫೯

**ಆಕಾರ :** ೧೮×೧೨ ಸೆ. ಮಿ.

**ಪುಟ :** ೧೫+೨೩೭=೩೫೨

**ಸ್ಥಳ :** ನಾಯಕನೂರು ( ತಾ. ನವಲಗುಂದ, ಜಿ. ಧಾರವಾಡ )

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೨

**ಬೆಲೆ :** ೪=೦೦ ರೂ.

**ಸಾರಾಂಶ :** ನಂದಿಯು ಬಸವೇಶ್ವರನಾಗಿ ಭೂಲೋಕದಲ್ಲಿ ಜನ್ಮವೆತ್ತಿದ ಕಥೆ ಇದು. ಶಿವನು ಒಡ್ಡೋಲಗದಲ್ಲಿ ಕುಳಿತಿರಲು ವೃಷಭನು ಆತನ ಪ್ರದಕ್ಷಿಣೆಯನ್ನು ಮಾಡಿ ಮಲಗಿಕೊಳ್ಳಲು ಬಾಲವು ದೇವೇಂದ್ರನು ಕುಳಿತ ಸ್ಥಾನದ ಕಡೆಗೆ ಬೀಳುವದು. ಇದು ಅವಮಾನವೆಂದು ಬಗೆದ ದೇವೇಂದ್ರನು ಬಾಲದೊಳಗಿನ ರೋಮ ಒಂದನ್ನು ಕೀಳುವನು. ನಂದಿಯು ಆಗ ಕೋಪಗೊಂಡು ಕಾಡಿಗೆ ಹೋಗುವನು. ಆಗ ಪ್ರಪಂಚದಲ್ಲಿ ಕೋಲಾಹಲವೆದ್ದಿತು. ದೇವತೆಗಳು ಶಿವನನ್ನು ಮೊರೆಹೊಕ್ಕರು. 'ದೇವೇಂದ್ರನು ವಿನಯದಿಂದ ನಂದೀಶನಲ್ಲಿ ಕ್ಷಮೆ ಕೇಳಿ ಕರೆತಂದರೆ ಲೋಕದಲ್ಲಿ ನೆಮ್ಮದಿಯುಂಟಾಗುವದೆಂದು' ಶಿವನು ಹೇಳಿದನು. ಆದರೆ ದೇವೇಂದ್ರನು ಕ್ಷಮೆ ಕೇಳದೆ ನಂದೀಶ್ವರನೊಡನೆ ಕಾದಿ ಪರಾಜಿತನಾಗಿ, ಶಿವಶಾಪದಿಂದ ಪಟ್ಟದಕಲ್ಲಿನಲ್ಲಿ ಅನಿಮಿಷನಾಗಿ ಜನ್ಮಿಸುವನು. ಅನಂತರ ಒಂದು ದುರ್ಧರ ಪ್ರಸಂಗದಲ್ಲಿ ನಂದೀಶ್ವರನು ತನ್ನ ಇಷ್ಟಲಿಂಗವನ್ನು ಅರಿಯದೆ ಅನಿಮಿಷನ ಕೈಯಲ್ಲಿ ಕೊಡಲು ಅವನಿಗೆ ಪೂರ್ವಜನ್ಮದ ಸ್ಮರಣೆಯುಂಟಾಯಿತು. ಕೂಡಲೇ ಲಿಂಗದೊಡನೆ ಕೈಲಾಸಕ್ಕೆ ಪಲಾಯನ ಮಾಡಲು ನಂದೀಶನು ಅವನನ್ನು ಹಿಂಬಾಲಿಸಿದನು. ಕೈಲಾಸದ ದ್ವಾರದಲ್ಲಿ ಜಯ-ವಿಜಯರು ಭವಿಯಾಗಿದ್ದ ನಂದಿಯನ್ನು ಒಳಗೆ ಬಿಡಲಿಲ್ಲ. ಶಿವನಿಗೆ ನಂದೀಶನನ್ನು ಮುಟ್ಟಬಾರದೆಂದು ಆಕ್ಷೇಪವೆತ್ತಿದರು. ಶಿವನು ನಿರುಪಾಯನಾಗಿ ನಂದಿಗೆ ಭೂಲೋಕದಲ್ಲಿ ಜನ್ಮಿಸಬೇಕೆಂದೂ ಅಲ್ಲಿ ತಾನು

ಲಿಂಗದೀಕ್ಷೆ ಮಾಡುವದಾಗಿಯೂ ಅಪ್ಪಣೆಯಿತ್ತನು. ಆಗ ಅವನು ಈಶ್ವರನಿಂದ ಷಟ್‌ಸ್ಥಲ ಕ್ರಮವನ್ನು ಅರಿತುಕೊಂಡು ತನ್ನ ಜನ್ಮೋದ್ಧಾರಕ್ಕಾಗಿ ಅಕ್ಷಯ ತೃತೀಯ ದಿವಸ ಮಾದರಸ-ಮಾದಲಾಂಬಿಕೆಯರಿಗೆ ಪುತ್ರನಾಗಿ ಭೂಮಿಯಲ್ಲಿ ಅವತರಿಸಿದನು.

ಲಕ್ಷ್ಮೀಶ, ಷಡಕ್ಷರ, ಅದೃಶ್ಯ, ವಿರೂಪಾಕ್ಷ ಪಂಡಿತ, ಚಿದಾನಂದಾವಧೂತ— ಈ ಕವಿಕಾವ್ಯಗಳ ಪ್ರಭಾವ ಈ ಕಾವ್ಯದಲ್ಲಿ ಒಡೆದು ತೋರುತ್ತದೆ.

೫೭

**ಗ್ರಂಥ :** ಬಸವಣ್ಣನವರ ಉಪಮೆಗಳು

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಹರ್ಡೇಕರ (ಮಂಜಪ್ಪ)

**ಆಕಾರ :** ಡೆಮಿ ೧/೧೨

**ಪುಟ :** ೨೪

**ಸ್ಥಳ :** ಹೊಸಪೇಟೆ

**ಪ್ರಕಾಶಕ :** ಚಿತ್ರವಾಡಿಗಿ ಮಹಾಂತಪ್ಪ

**ಮಿತಿ :** ೧೯೪೪ ?

**ಬೆಲೆ :** ಉಚಿತ

**ಮಾಲೆ :** ಶ್ರೀ ಕಲ್ಮಠೇಶ್ವರ ರಥೋತ್ಸವ ಗ್ರಂಥಮಾಲೆ

**ಸಾರಾಂಶ :** " ಶ್ರೀ ಹರ್ಡೇಕರ ಮಂಜಪ್ಪನವರು ಬಸವಣ್ಣನವರ ಕೆಲವು ಸುಂದರವಾದ ಉಪಮೆಗಳುಳ್ಳ ವಚನಗಳನ್ನು ಸಂಗ್ರಹಿಸಿ ಈ ಗ್ರಂಥದಲ್ಲಿ ಪ್ರಕಟಿಸಿರುತ್ತಾರೆ."

—ಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳು

---

**ಆಕರ :**

೧. ಶರಣ ಸಾಹಿತ್ಯ, ಸಂಪುಟ ೬; ಸಂಚಿಕೆ ೧೧; ಪು. ೪೪೧ ಜನವರಿ ೧೯೪೪

೫೮

## ಗ್ರಂಥ : ಬಸವಣ್ಣನವರ ಚರಿತ್ರೆ

**ಪ್ರಭೇದ :** ಗದ್ಯ–ಮಕ್ಕಳ ಸಾಹಿತ್ಯ

**ಕರ್ತೃ :** ಹರ್ಡೇಕರ (ಮಂಜಪ್ಪ)

**ಕಾಲ :** ಜ. ೧೮–೨–೧೮೮೫ ಮ. ೩–೧–೧೯೪೭

**ಸಾರಾಂಶ :** ಚಿಕ್ಕಮಕ್ಕಳಿಗಾಗಿ ಬರೆದ ಬಸವಣ್ಣನವರ ಕಥೆ.

---

...ಕರ :

೧. ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ, ಪು. ೧೨೪೫–೪೮.

೫೯

## ಗ್ರಂಥ : ಬಸವಣ್ಣನವರ ಮಹತ್ಕಾರ್ಯ

**ಪ್ರಭೇದ :** ಚರಿತ್ರ

**ಕರ್ತೃ :** ಪಲ್ಲಾಪೂರಮಠ (ಷಡಕ್ಷರಯ್ಯ ಸಿದ್ದಯ್ಯ)

**ಕಾಲ :** ಸು. ೧೯೨೫

**ಪುಟ :** ೨೨

**ಸ್ಥಳ :** ಕಲಬುರ್ಗಿ

**ಪ್ರಕಾಶಕ :** ಕರ್ತೃ

**ಮಿತಿ :** ೧೯೩೬

**ಬೆಲೆ :** ೦–೨–೦ ಆಣೆ.

**ಸಾರಾಂಶ :** ಬಸವಣ್ಣನವರ ವಚನಗಳನ್ನಾಧಾರಿಸಿ ಬರೆದ ಗ್ರಂಥವಿದು.

---

...ಕರ :

೧. ವಿಜಾಪುರದ ಪ್ರೊ. ಸಂಗಮನಾಥ ಹಂಡಿ ಅವರ ಗ್ರಂಥ ಸಂಗ್ರಹದಲ್ಲಿದೆ.

೬೦

**ಗ್ರಂಥ: ಬಸವಣ್ಣನವರ ಯೋಜನೆಗಳು**

**ಪ್ರಭೇದ**: ಪ್ರಬಂಧ–ಗದ್ಯ

**ಕರ್ತೃ**: ಜವಳಿ ( ಬಸವರಾಜ ಚನ್ನವೀರಪ್ಪ )

**ಕಾಲ**: ಜ. ೧೯೩೧

**ಆಕಾರ**: ೧೬×೧೦ ಸೆ. ಮಿ.

**ಪುಟ**: ३೮

**ಸ್ಥಳ**: ಧಾರವಾಡ

**ಪ್ರಕಾಶಕ**: ರಜಿಸ್ಟ್ರಾರ, ಕರ್ನಾಟಕ ವಿಶ್ವವಿದ್ಯಾಲಯ

**ಆವೃತ್ತಿ**: ಪ್ರಥಮ

**ಮಿತಿ**: ೧೯೬೨

**ಬೆಲೆ**: ೦೦=೨೫ ಪೈಸೆ

**ಮಾಲೆ**: ಪ್ರಚಾರೋಪನ್ಯಾಸ ಮಾಲೆ, ೨೭.

**ಸಾರಾಂಶ**: ಬಸವಣ್ಣನವರು ಆರ್ಥಿಕ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ರಂಗಗಳಲ್ಲಿ ನಿರ್ಮಿಸಿದ ಯೋಜನೆಗಳ (plans) ವಿವೇಚನೆಯನ್ನು ಈ ಗ್ರಂಥದಲ್ಲಿ ಮಾಡಿದೆ.

೬೧

**ಗ್ರಂಥ: ಬಸವಣ್ಣನವರ ಲೀಲಾ**

**ಪ್ರಭೇದ**: ಯಕ್ಷಗಾನ

**ಕರ್ತೃ**: ಫಕೀರಪ್ಪ

**ಕಾಲ**: ಸು. ೧೯೦೦

**ಮಿತಿ**: ೧೯೨೩

ಸಾರಾಂಶ: ಶ್ರೀ ಸಿಂದಿಗಿ ಸಿದ್ದಪ್ಪನವರು ಬಸವಣ್ಣನವರನ್ನು ಕುರಿತು ರಚಿತವಾದ ಗ್ರಂಥಗಳ ಸೂಚಿ ('ಗ್ರಂಥಾವಳಿ') ಯಲ್ಲಿ ಪ್ರಸ್ತುತ ಗ್ರಂಥವನ್ನು ಸೇರಿಸಿರುವರು.

---

ಆಕರ:

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೫

೬೨

## ಗ್ರಂಥ: ಬಸವಣ್ಣನವರ ಲೀಲಾ

**ಬೆಲೆ:** ೦-೩-೦ ಆಣೆ

**ಸಾರಾಂಶ:** ೧೯೨೭ ರಲ್ಲಿ ಪ್ರಕಟವಾಗಿರಬಹುದಾದ **'ಶ್ರೀ ಜಗದ್ಗುರು ಸಿದ್ಧೇಶ್ವರ ಸ್ವಾಮಿಗಳವರ ಚರಿತ್ರೆಯು'** ಎಂಬ ಗ್ರಂಥದ ಕೊನೆಯಲ್ಲಿ ಶ್ರೀ ಎ. ಆರ್. ಶಿವನಾಗಪ್ಪನವರು ತಮ್ಮಿಂದ ಪ್ರಕಾಶಗೊಂಡ ಗ್ರಂಥಗಳ ಯಾದಿಯಲ್ಲಿ ಈ ಗ್ರಂಥವನ್ನು ಉಲ್ಲೇಖಿಸಿದ್ದಾರೆ. ಇದು ಕ್ರಮಾಂಕ ೬೧ ಆಗಿರಬಹುದೇ ?

**ನೋಡು:** ೧. ಶ್ರೀ ಬಸವಣ್ಣನವರ ಲೀಲಾ-ಪದ್ಯಾವಲಿ

೬೩

## ಗ್ರಂಥ: ಬಸವಣ್ಣನವರ ಲೋಕಪ್ರಿಯ ವಚನಗಳು

**ಪ್ರಭೇದ:** ವಚನ

**ಕರ್ತೃ:** ಬಸವಣ್ಣ

**ಕಾಲ:** ೧೧೬೭

**ಸಂಪಾದಕ:** ಭೂಸನೂರಮಠ (ಎಸ್.ಎಸ್.) ಮತ್ತು ಕರ್ಕಿ(ಡಿ.ಎಸ್.)

**ಆಕಾರ:** ೧೮×೧೩ ಸೆ.ಮಿ.

**ಪುಟ:** xiii+೫೬ = ೬೯

**ಸ್ಥಳ:** ಬೆಳಗಾವಿ

**ಪ್ರಕಾಶಕ:** ವಚನ ಮಂಟಪ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೩

**ಬೆಲೆ :** ೦೦=೭೫

**ಸಾರಾಂಶ :** ಶಿವಕಾರುಣ್ಯ, ವಿಷಯ ಸುಖ, ಅನಿತ್ಯ, ಅಂತರಂಗ ಶುದ್ಧವಾಗಲಿ, ಅಹಂಕಾರ ಬೇಡ, ವಿನಯವಿರಲಿ, ನುಡಿದಂತೆ ನಡೆ, ಸತ್ಯವೇ ಸ್ವರ್ಗ, ಪ್ರಾಣಗಳಲ್ಲಿ ದಯವಿರಲಿ, ಪರವಧುವೆಂದರೆ ಮಹಾದೇವಿ, ಸದಾಚಾರಿಯಾಗಿರು, ಸಜ್ಜನರ ಸಂಗಮಾಡು, ಕಷ್ಟಗಳಿಗೆ ಅಂಜಬೇಡ, ಪ್ರಪಂಚವನ್ನು ಬಿಡಬೇಡ, ಕಾಯಕವೇ ಕೈಲಾಸ, ದಾಸೋಹ ಮಾಡು, ಭಕ್ತರೇ ಬಂಧು ಬಳಗ, ಸದ್ಭಕ್ತನೇ ಕುಲಜ, ದೇವರನ್ನು ಮನಮುಟ್ಟಿ ನೆನೆ, ಭಕ್ತಿಯ ನಿಜಸ್ವರೂಪ, ಒಬ್ಬನೇ ದೇವರು, ಸಾಮರಸ್ಯ– ಈ ತಲೆಬರೆಹಗಳಿಗೆ ಅನ್ವರ್ಥಕವಾಗಿ ಬರುವಂತೆ ಬಸವಣ್ಣನವರ ವಚನಗಳನ್ನು ವಿಭಾಗಿಸಿಕೊಟ್ಟಿದೆ.

೬೪

**ಗ್ರಂಥ :** ಬಸವಣ್ಣನವರ ವಚನಗಳು

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ೧೧೬೨

**ಸಂಪಾದಕ :** ಹರಿಶಂಕರದೇವ (ಬ)

**ಪುಟ :** ೧೨೦

**ಸ್ಥಳ :** ಮದ್ರಾಸ

**ಪ್ರಕಾಶಕ :** ಗ್ರಂಥರತ್ನಾಕರ ಮುದ್ರಾಕ್ಷರ ಶಾಲೆ

**ಆವೃತ್ತಿ :** ಪ್ರಥಮ

**ಮಿತಿ :** ೧೮೯೯

---

ಆಕರ :

೧. ಮೈಸೂರು ಪ್ರಾಚ್ಯ ವಿದ್ಯಾಸಂಶೋಧನಾಲಯ ಗ್ರಂಥಭಂಡಾರದ ಪ್ರತಿ, k ೧೮೮೪

೬೫

ಗ್ರಂಥ : ಬಸವಣ್ಣನವರ ವಚನಗಳು

ಪ್ರಭೇದ : ವಚನ

ಸ್ಥಳ : ಬೆಂಗಳೂರು.

ಸಾರಾಂಶ : ಇದು ಮೈಸೂರು ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯ ಕನ್ನಡ ಗ್ರಂಥಭಂಡಾರದಲ್ಲಿದೆ.

---

ಆಕರ :

೧. Catalogue of printed Kannada works in the Oriental Research Institute, Mysore, p. 76, No. k 107.

೬೬

ಗ್ರಂಥ : ಬಸವಣ್ಣನವರ ವಚನಗಳು

ಸ್ಥಳ : ಬಳ್ಳಾರಿ

ಸಾರಾಂಶ : ಈ ಪ್ರತಿ ಮೈಸೂರು ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯ ಕನ್ನಡ ಗ್ರಂಥಭಂಡಾಗದಲ್ಲಿದೆ.

---

ಆಕರ :

೧. Catalogue of printed Kannada works in the Oriental Research Institute, Mysore, p. 76. No. k. 148.

೬೭

ಗ್ರಂಥ : ಬಸವಣ್ಣನವರ ವಚನಗಳು

ಪ್ರಭೇದ : ವಚನ

ಕರ್ತೃ : ಬಸವಣ್ಣ

**ಕಾಲ :** ಸು. ೧೧೬೭

**ಪುಟ :** ೨೪

**ಸ್ಥಳ :** ಹುಬ್ಬಳ್ಳಿ

**ಪ್ರಕಾಶಕ :** ಬಸವೇಶ್ವರ ಪುಸ್ತಕ ಭಾಂಡಾರ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೨

**ಬೆಲೆ :** ೦ ೦=೨೫

**ಸಾರಾಂಶ :** ಬಸವಣ್ಣನವರ ಕೆಲವು ವಚನಗಳ ಸಂಗ್ರಹ.

೬೮

**ಗ್ರಂಥ : ಬಸವಣ್ಣನವರ ವಚನಗಳು**

**ಪ್ರಭೇದ :** ವಚನ–ಭಾವಾರ್ಥ **ಸಂಖ್ಯೆ :** ೧೨೩

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಅನುವಾದಕ :** ಜೀವನ (ಎಂ)

**ಆಕಾರ :** ೧೮×೧೨ ಸೆ.ಮಿ.

**ಪುಟ :** ೩೫೫

**ಸಾಲು :** ೨೮

**ಅಕ್ಷರ :** ೨೫

**ಸ್ಥಳ :** ಹುಬ್ಬಳ್ಳಿ

**ಪ್ರಕಾಶಕ :** ಸಿಟಿ ಬುಕ್ ಸ್ಟಾಲ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೬

**ಬೆಲೆ :** ೧=೫೦ ರೂ.

**ಸಾರಾಂಶ :** ಬಸವಣ್ಣನವರ ವಚನಗಳಿಗೆ ಸರಳಗನ್ನಡದಲ್ಲಿ ವಿವರಣೆ-ಯನ್ನು ಕೊಡಲಾಗಿದೆ.

೬೯

## ಗ್ರಂಥ : ಬಸವಣ್ಣನವರ ವಚನಗಳು

**ಪ್ರಭೇದ :** ವಚನ-ಭಾವಾರ್ಥ **ವಚನ ಸಂಖ್ಯೆ:** ೧೧೬೦

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ವಿಹಾರಿ, ಗು. ನಾ.

**ಆಕಾರ :** ೧೮ × ೧೩ ಇಂಚು

**ಪುಟ :** ೫೫೮

**ಸ್ಥಳ :** ಹುಬ್ಬಳ್ಳಿ

**ಪ್ರಕಾಶಕ :** ಬಿ. ಜಿ. ಸಂಕೇಶ್ವರ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೭

**ಬೆಲೆ :** ೨=೫೦ ರೂ.

**ಸಾರಾಂಶ :** ಬಸವಣ್ಣನವರ ೧೧೬೦ ವಚನಗಳಿಗೆ ಹೊಸಗನ್ನಡದಲ್ಲಿ ಭಾವಾನುವಾದ ಕೊಟ್ಟಿದೆ. ಷಟ್‌ಸ್ಥಲ ಕಟ್ಟನ್ನು ಸಡಿಲಿಸಿ ವಚನಗಳನ್ನು ಹಿಂದು ಮುಂದು ಮಾಡಲಾಗಿದೆ. ಷಟ್‌ಸ್ಥಲ ಕಟ್ಟನಲ್ಲಿಲ್ಲದ ಕೆಲವು ಹೆಚ್ಚಿನ ವಚನ ಗಳನ್ನು ಸೇರಿಸಿದೆ.

೭೦

## ಗ್ರಂಥ : ಬಸವಣ್ಣನವರು

**ಪ್ರಭೇದ :** ಚರಿತ್ರೆ

**ಕರ್ತೃ :** ಹಂಜಿ (ಸದಾಶಿವ ವೀರಭದ್ರಪ್ಪ)

**ಕಾಲ :** ಸು. ೧೯೨೫

**ಸ್ಥಳ :** ಬಾಗಲಕೋಟೆ

**ಮಿತಿ :** ೧೯೫೬ ?

**ಬೆಲೆ :** ೧-೮-೦ ರೂ.

ಸಾರಾಂಶ : "ಕರ್ಣಾಟಕ ಮಹಾಪುರುಷರಾದ ಶ್ರೀ ಬಸವೇಶ್ವರರನ್ನು ಕುರಿತು ಈ ಗ್ರಂಥವು ನಿರ್ಮಾಣವಾಗಿದೆ. ಇದರಲ್ಲಿ ಬಸವಣ್ಣನವರ ಸರಳ ಜೀವನ, ಭಕ್ತಿಜೀವನ, ವಿಶ್ವಧರ್ಮ, ಸಮಾಜ ಮಂದಿರ, ಸ್ತ್ರೀಯರ ಉನ್ನತಿ, ಕನ್ನಡದ ಸೇವೆ, ವಚನಾಮೃತ, ಪ್ರಭಾವ, ಸಂದೇಶ, ಬಸವಣ್ಣನವರ ಹಿರಿಮೆ— ಇತ್ಯಾದಿ ಪ್ರಕರಣಗಳಿವೆ. ಗ್ರಂಥಕರ್ತೃಗಳು ಬಸವಣ್ಣನವರನ್ನು ಕುರಿತಾದ ಹಲವಾರು ಗ್ರಂಥಗಳನ್ನು ಅವಲೋಕಿಸಿ ಇದನ್ನು ಸಿದ್ಧಗೊಳಿಸಿದ್ದಾರೆ. ಬಸವಣ್ಣನವರನ್ನು ತಿಳಿಯಲು ಸಾಮಾನ್ಯರಿಗೆ ಒಳ್ಳೆಯ ದಾರಿ ತೋರಿದೆ. ಭಾಷೆ ಸರಳ, ನಿರೂಪಣೆ ಉತ್ತಮ, ಗ್ರಂಥ ಉಪಯುಕ್ತ."

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೨೦; ಸಂಚಿಕೆ ೨-೩; ಪು. ೧೪೩ ಮೇ-ಜೂನ್ ೧೯೫೭

೭೧

ಗ್ರಂಥ ಬಸವಣ್ಣನವರು

**ಕರ್ತೃ :** ಚನ್ನಪ್ಪ ( ಟಿ. ಎನ್. ) ಮತ್ತು ಶ್ರೀನಾಥ

**ಕಾಲ :** ಸು. ೧೯೩೫

**ಆಕಾರ :** ೨೧ × ೧೨ ಸೆ. ಮಿ.

**ಪುಟ :** ೯೪

**ಸ್ಥಳ :** ಬೆಂಗಳೂರು

**ಪ್ರಕಾಶನ :** ವಿದ್ಯಾವಿಲಾಸ ಪ್ರಕಟಣಾಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೩೪

**ಬೆಲೆ :** ೦-೮-೦ ಆಣೆ

ಸಾರಾಂಶ : ಬಸವಣ್ಣನವರ ಜನನ, ಉಪನಯನ, ಗುರುಕುಲವಾಸ, ವಿವಾಹ, ಉದ್ಯೋಗ– ಇತ್ಯಾದಿ ವಿಷಯಗಳನ್ನು ಪ್ರಾರಂಭದಲ್ಲಿ ವಿಶದೀಕರಿಸಿದೆ. ಸಾಂಪ್ರದಾಯವ ಕಥೆ ಬಸವಣ್ಣನವರ ೧೬ ಪವಾಡಗಳ ಚಿತ್ರಸಹಿತ ವರ್ಣನೆ ಇದೆ. ಅಂದಿನ ಸಂದಿಗ್ಧ ಕಾಲ ಪರಿಸ್ಥಿತಿಯಲ್ಲಿ ಬಸವಣ್ಣನವರು ಮಾಡಿದ ಮತಪ್ರಚಾರ ಕಾರ್ಯವನ್ನು ವಿಶದಪಡಿಸಿದೆ. ಕಲ್ಯಾಣ ಕ್ರಾಂತಿಗೆ ಹರಳಯ್ಯ ಮಧುವಯ್ಯಗಳ

ವಿಜಾತೀಯ ರಕ್ತಸಂಬಂಧವೆ ಕಾರಣವೆಂದು ಹೇಳಿದೆ. ಕೊನೆಗೆ ಬಸವಣ್ಣನವರು ಜೀವನದ ವಿವಿಧ ರಂಗಗಳಲ್ಲಿ ಬೀರಿದ ಪ್ರಭಾವದ ವಿವರವಿದೆ.

೭೨

**ಗ್ರಂಥ: ಬಸವಣ್ಣನವರು**

**ಪ್ರಭೇದ:** ಗದ್ಯ-ಚರಿತ್ರೆ

**ಕರ್ತೃ:** ಚಿಂತಾಮಣಿ (ಈಶ್ವರ ಚಂದ್ರ)

**ಕಾಲ:** ಸು ೧೯೨೫

**ಆಕಾರ:** ೧೮×೧೨ ಇಂಚು

**ಪುಟ:** ii+೧೮=೨೦

**ಸಾಲು:** ೨೪

**ಅಕ್ಷರ:** ೨೬

**ಸ್ಥಳ:** ಬೆಳಗಾವಿ

**ಪ್ರಕಾಶಕ:** ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿ

**ಆವೃತ್ತಿ:** ದ್ವಿತೀಯ ಪ್ರಥಮ

**ಮಿತಿ:** ೧೯೫೮ ೧೯೫೩

**ಬೆಲೆ:** ೦–೪–೦ ಆಣೆ

**ಮಾಲೆ:** ಸಮಾಜ ಶಿಕ್ಷಣ ಪ್ರಸಾರಕ ಗ್ರಂಥಮಾಲೆ, ೮

**ಸಾರಾಂಶ:** ಇದರಲ್ಲಿ 'ಬಸವಣ್ಣನವರ ಸಂಕ್ಷಿಪ್ತ ಚರಿತ್ರೆಯು ಹಿತವಾದ ಮಿತವಾದ ಸರಳ ಶೈಲಿಯಲ್ಲಿ ಬರೆಯಲಾಗಿದೆ. ಕಥಾಸರಣಿ ಆಕರ್ಷಕವಾಗಿದೆ. ಭಾಷೆ ಸುಲಭವಾಗಿದ್ದು ಶುಚಿಯಾಗಿದೆ. ಬಸವಣ್ಣನವರ ಬಾಳಬಳ್ಳಿಯು ಅವರವೇ ಆದ ವಚನಗಳ ಹಂದರದ ಮೇಲೆ ಹಬ್ಬಿ ಹಸುರೇರಿ ಕಳೆಗಟ್ಟುವಂತೆ ಬಹು ಸುಂದರವಾಗಿ ದಕ್ಷತೆಯಿಂದ ಬೆಳೆಯಿಸಲಾಗಿದೆ."

—ಶ್ರೀ ಎಸ್. ಡಿ. ಇಂಚಲ ಅವರ 'ಮೊದಲ ನುಡಿ'ಯಿಂದ

ಇದು ನೂತನವಾಗಿ ಸಾಕ್ಷರರಿಗಳಾದ ವಯಸ್ಕರಿಗಾಗಿ ಬರೆಯಲ್ಪಟ್ಟಿದೆ.

೭೩

ಗ್ರಂಥ : ಬಸವಣ್ಣನವರು ಬಯಸಿದ ಸಮಾಜ ರಚನೆ

ಪ್ರಭೇದ : ಪ್ರಬಂಧ

ಕರ್ತೃ : ಗಲಗಲಿ (ಕೆ. ಕೆ.)

ಕಾಲ : ಸು. ೧೯೨೫

ಆಕಾರ : ೧೮×೧೨ ಸೆ. ಮಿ.

ಪುಟ : ೨೦

ಸಾಲು : ೨೮

ಅಕ್ಷರ : ೨೪

ಸ್ಥಳ : ಸವದತ್ತಿ (ಬೆಳಗಾವಿ ಜಿಲ್ಹೆ)

ಪ್ರಕಾಶಕ : ಕರ್ತೃ

ಆವೃತ್ತಿ : ಪ್ರಥಮ

ಮಿತಿ : ಬಸವ ಜಯಂತಿ ೧೯೪೮

ಬೆಲೆ : ಅಮೂಲ್ಯ

ಸಾರಾಂಶ : 'ಬಸವಣ್ಣವರು ಜಾತಿಯನ್ನು ನಿರ್ಮೂಲಗೊಳಿಸದರು; ಸ್ತ್ರೀಯರಿಗೆ ಸ್ವಾತಂತ್ರ್ಯ ದೊರಕಿಸಿಕೊಟ್ಟರು; ಅನುಭವದ ಒರೆಗೆ ತಿಕ್ಕಿನೋಡಿ ಸತ್ಯವೆಂದು ತೋರುವ ನಿಯಮಗಳನ್ನು ಅನುಸರಿಸುವ ಹೊಸ ರೀತಿಯ ಶಾಸ್ತ್ರಸಂವಿಧಾನವನ್ನು ಅನುಷ್ಠಾನದಲ್ಲಿ ತಂದರು; ಕಾಯಕವೇ ಕೈಲಾಸವೆಂದು ಸಾರಿ ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಒಂದಿಲ್ಲೊಂದು ಉದ್ಯೋಗವನ್ನು ಅವಲಂಬಿಸಬೇಕೆಂದು ಕಡ್ಡಾಯ ಮಾಡಿದರು; ಪ್ರಜಾಪ್ರಭುತ್ವಕ್ಕೆ ತಳಹದಿ ಹಾಕಿದರು. ಹೀಗಾಗಿ ಅವರು ರಚಿಸಿದ ಸಮಾಜವು ದಯಭರಿತ, ಉದ್ಯೋಗಶೀಲ, ಸರ್ವಾಂಗಸುಂದರ ಸಮಾಜವಾಯಿತು' ಎಂಬಿತ್ಯಾದಿ ವಿಚಾರಗಳು ಇದರಲ್ಲಿ ವಿವೇಚಿಸಲ್ಪಟ್ಟಿವೆ.

೭೪

ಗ್ರಂಥ : ಬಸವತತ್ವ ಪ್ರಕಾಶ ಭಾ. ೧–೨

ಪ್ರಭೇದ : ಗದ್ಯ–ಚರಿತ್ರೆ

**ಕರ್ತೃ :** ವಿರಕ್ತಮಠ (ಅನ್ನದಾನೀಶ್ವರ)

**ಆಕಾರ :** ೧೭×೧೧ ಸೆ.ಮಿ.

**ಪುಟ :** iv+೪೭=೫೧

**ಸಾಲು :** ೨೫

**ಅಕ್ಷರ :** ೨೫

**ಸ್ಥಳ :** ಬಾಗಲಕೋಟೆ

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೦

**ಬೆಲೆ :** ೦–೪–೦ ಆಣೆ

**ಸಾರಾಂಶ :** ಪ್ರಥಮ ಭಾಗದಲ್ಲಿ ಬಸವಣ್ಣನವರ ತತ್ವಗಳನ್ನು ಪ್ರಕಟಗೊಳಿಸುವ ೧೨ ಪ್ರಬಂಧಗಳಿವೆ.

" 'ವಚನಶಾಸ್ತ್ರದ ವೈಭವ', 'ವೀರಶೈವನ ಭಕ್ತಿಯೋಗ', 'ವೀರಶೈವ ಧರ್ಮದ ನಿಜತತ್ವ'— ಈ ವಿಷಯಗಳಲ್ಲಿ ವೀರಶೈವ ತತ್ವವಿವೇಚನೆಯಿದೆ. 'ಕಾಯಕತತ್ವ' ಈ ವಿಷಯದಲ್ಲಿ ಶಿವಶರಣರ ಆರ್ಥಿಕ ವಿಚಾರಗಳು ಬಂದಿವೆ. 'ಶಿವಾನುಭವ ಮಂಟಪ' ಈ ವಿಷಯದಲ್ಲಿ ವೀರಶೈವ ಸಮಾಜ ಸಂಘಟನೆಯ ವಿಷಯಗಳು ಬಂದಿವೆ. 'ಬಸವ ಮಹಾತ್ಮನ ದಿವ್ಯಸಂದೇಶ'ದಲ್ಲಿ ಅವನ ಉಚ್ಚ ವಿಚಾರಗಳ ಪ್ರತಿಪಾದನೆಯು ಇದೆ."

—ಡಾ. ಫ. ಗು. ಹಳಕಟ್ಟಿಯವರ 'ಮುನ್ನುಡಿ'ಯಿಂದ

೨ನೆಯ ಭಾಗವು ಪ್ರಕಟವಾಗಿದೆಯೆಂದು ಲೇಖಕರು ಸಮಕ್ಷಮದಲ್ಲಿ ತಿಳಿಸಿದರು. ಆದರೆ ಗ್ರಂಥ ನನಗೆ ಲಭಿಸಲಿಲ್ಲ.

"ವೀರಶೈವ ಸಮಾಜವು Herbert Spencerನ ತತ್ವದ ಪ್ರಕಾರ ಪೂರ್ಣ ಸಮಾಜವು. ಅದರಲ್ಲಿ ಸಮಾನತೆ, ಬಂಧುಪ್ರೀತಿ ಹಾಗು ಸ್ವಾತಂತ್ರ್ಯ ತತ್ವಗಳಿವೆ. ಆಧ್ಯಾತ್ಮ ಮೂಲ ಸಮಾಜ ನಿರ್ಮಾಣ ಅರ್ಥಾತ್ ಸರ್ವೋದಯದ ಮೂಲ ಆಧ್ಯಾತ್ಮ– ಇದೇ ಬಸವನ ಉಚ್ಚ ತತ್ವವು." ಇವು ಅವರೇ ಬರೆದು ಕಳಿಸಿದ ಮಾತುಗಳು.

೭೫

**ಗ್ರಂಥ:** ಬಸವತತ್ವ ರತ್ನಾಕರ

**ಪ್ರಭೇದ:** ಗದ್ಯ-ವಿವೇಚನೆ

**ಕರ್ತೃ:** ಹಿರೇಮಠ (ಚಂದ್ರಶೇಖರ ಶಾಸ್ತ್ರಿ)

**ಕಾಲ:** ಸು. ೧೯೦೦

**ಆಕಾರ:** ೨೫×೧೭ ಸೆ. ಮಿ.

**ಪುಟ:** xxxiv + ೭೦೦ = ೭೩೪

**ಸಾಲು:** ೩೪

**ಅಕ್ಷರ:** ೨೮

**ಸ್ಥಳ:** ಮೈಸೂರು

**ಪ್ರಕಾಶಕ:** ಶಿ. ವಿಶ್ವನಾಥ ಮತ್ತು ಶಿ. ರಾಜಶೇಖರ ಹಿರೇಮಠ ಸಹೋದರರು, ಹೊಳಲು (ಜಿ. ಬಳ್ಳಾರಿ)

**ಆವೃತ್ತಿ:** ಪ್ರಥಮ

**ಮಿತಿ:** ೧೯೬೧

**ಬೆಲೆ:** ೧೮-೦೦ ರೂ.

**ಸಾರಾಂಶ:** ಬಸವಣ್ಣನವರ ಜೀವನವನ್ನು ವಿವಿಧ ಕೋನಗಳಿಂದ ದೃಷ್ಟಿಸಿ ಬರೆದ ಗ್ರಂಥವಿದು. ಪ್ರಾರಂಭದಲ್ಲಿ ಬಸವಣ್ಣನವರ ಸಾಂಪ್ರದಾಯದ ಜೀವನ ಚರಿತೆಯನ್ನು ವಿವೇಚಿಸಲಾಗಿದೆ. ಬಸವಣ್ಣನವರ ವಿಚಾರಗಳನ್ನು ವೇದ, ಉಪ ನಿಷತ್ತು, ಭಗವದ್ಗೀತೆ, ಶಿವಾಗಮ- ಇವುಗಳಲ್ಲಿಯ ವಿಚಾರಗಳಿಗೆ ಹೋಲಿಸ ಲಾಗಿದೆ. ಧ್ಯಾನ, ಭಕ್ತಿ, ಕ್ರಿಯಾ-ಜ್ಞಾನ-ಯೋಗಗಳಲ್ಲಿ ಅವರು ನೈಪುಣ್ಯ ಹೊಂದಿದ್ದ ರೆಂದು ಹೇಳಿದೆ. ಲಿಂಗದ ಕಲ್ಪನೆಯ ಬಗೆಗೆ ಐತಿಹಾಸಿಕ ಅವಲೋಕನ ಮಾಡಿ ಬಸವಣ್ಣನವರು ಲಿಂಗಪೂಜೆಯ ಬಗೆಗೆ ಹೇಳಿದ ಮೇಲ್ಮೆಯನ್ನು ವರ್ಣಿಸಲಾಗಿದೆ.

'ಬಸವಣ್ಣನವರು ಜಾತೀಯತೆಯನ್ನು ನಿರ್ಮೂಲನಮಾಡಿದರು. ಅಸ್ಪೃಶ್ಯರನ್ನು ಉದ್ಧರಿಸಿದರು. ಶಿವಾನುಭವ ಮಂಟಪ ಸ್ಥಾಪಿಸಿ ಲೋಕೋದ್ಧಾರದ ಕಾರ್ಯಗಳನ್ನು ಕೈಕೊಂಡರು. ಕನ್ನಡ ಸಾಹಿತ್ಯಕ್ಕೆ ಕಳೆಕಟ್ಟಿದರು. ಅಹಿಂಸಾ ತತ್ತ್ವವನ್ನು ಬೇರೂರಿದರು. ಶೂದ್ರರೆಂದು ಗಣಿಸಲ್ಪಟ್ಟ ಸ್ತ್ರೀಯರ ಸ್ಥಾನಮಾನಗಳನ್ನು ಉನ್ನತ ಮಟ್ಟಕ್ಕೇರಿಸಿದರು. ಪವಾಡಪುರುಷರಾಗಿ ಮೆರೆದರು. ಪ್ರತಿಜ್ಞೆಗಳನ್ನು ಮಾಡಿ ಜೀವನದಲ್ಲಿ ಅವುಗಳನ್ನು ಚಾಚೂ ತಪ್ಪದೆ ನೆರವೇರಿಸಿದರು. ಏಕೇಶ್ವರ ವಾದವನ್ನು

ಬೋಧಿಸಿದರು. ಷಟ್‌ಸ್ಥಲ ಚಕ್ರವರ್ತಿಗಳಾಗಿ ರಾಜಕಾರಣಪಟುಗಳಾಗಿ ಬಾಳಿದರು. ಶಾಸನಗಳಲ್ಲಿ ಕೀರ್ತಿಸಲ್ಪಟ್ಟರು'–ಇತ್ಯಾದಿ ಮಾತುಗಳನ್ನು ವಿವರಿಸಿ ಬರೆಯಲಾಗಿದೆ.

ಬಸವಣ್ಣನವರನ್ನು ಕೀರ್ತಿಸಿದ ಕನ್ನಡ, ಆಂಗ್ಲ, ತೆಲಗು, ಸಂಸ್ಕೃತ ಕವಿಗಳ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿ ಕೊನೆಯಲ್ಲಿ ಹೆಣೆಯಲಾಗಿದೆ.

ಸಂಶೋಧಕರಿಗೆ ಸಹಾಯಕ ಸಾಹಿತ್ಯವಾಗಿದೆ. ಸಾಮಾನ್ಯ ಓದುಗರಲ್ಲಿ ಬಸವಣ್ಣನವರ ಬಗೆಗೆ ಪ್ರೀತಿ-ಭಕ್ತಿ-ಗೌರವಗಳನ್ನು ಉಂಟುಮಾಡುತ್ತದೆ.

೭೬

**ಗ್ರಂಥ : ಬಸವ ತಾರಾವಳಿ ರಗಳೆ**

**ಪ್ರಭೇದ :** ರಗಳೆ

**ಸಾರಾಂಶ :** ಪ್ರೊ. ಡಿ. ಕೆ. ಭೀಮಸೇನರಾವ ಅವರಿಗೆ ಹೈದರಾಬಾದ ಪ್ರಾಂತದಲ್ಲಿ ಈ ಪ್ರತಿ ದೊರೆತಿರುವದೆಂದು 'ಶರಣ ಸಾಹಿತ್ಯ' ಪತ್ರಿಕೆಯಲ್ಲಿ ಪ್ರಕಟವಾದ ತಮ್ಮ **"ಹೈದರಾಬಾದು ಪ್ರಾಂತದಲ್ಲಿ ಕನ್ನಡ ಗ್ರಂಥಗಳ ಸಂಶೋಧನೆ"** ಎಂಬ ಲೇಖನದಲ್ಲಿ ಹೇಳಿರುವರು. ಅಪ್ರಕಟಿತ.

---

ಆಕರ :

೧ ಶರಣ ಸಾಹಿತ್ಯ, ಸಂಪುಟ ೧೨; ಸಂಚಿಕೆ ೪; ಪು. ೧೭೬. ೧೯೪೯

೭೭

**ಗ್ರಂಥ : ಬಸವ ತ್ರಿವಿಧಿ**

**ಪ್ರಭೇದ :** ತ್ರಿಪದಿ

**ಕರ್ತೃ :** ಕಳಕೇ ಒಡೆಯರಮಠ (ಚೆನ್ನಕವಿ ಬಸವಯ್ಯ)

**ಕಾಲ :** ಜ. ೧೮೭೪ ಮ. ೫–೩–೧೯೪೬

**ಸಾರಾಂಶ :** 'ದ್ಯಾಂಪುರ ಚೆನ್ನಕವಿ'ಗಳೆಂದು ಇವರು ಪ್ರಸಿದ್ಧರಾಗಿದ್ದಾರೆ. ಇಪ್ಪತ್ತಕ್ಕೂ ಮಿಕ್ಕಿ ಬರೆದ ಅವರ ಕೃತಿಗಳಲ್ಲಿ **'ಬಸವ ತ್ರಿವಿಧಿ'**ಯೂ ಒಂದು.

ನಮ್ಮ ಅವಲೋಕನಕ್ಕೆ ಗ್ರಂಥ ಸಿಕ್ಕಿಲ್ಲ. ತ್ರಿಪದಿಗಳಲ್ಲಿ ಬಸವಣ್ಣನವರನ್ನು ಕೀರ್ತಿ ಸಿರಲಿಕ್ಕೆ ಸಾಕು. ಅಪ್ರಕಟಿತ.

---

ಆಕರ :

೧. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪು. ೪೬

೨. ಬಸವತತ್ವ ರತ್ನಾಕರ, ಪು. ೬೨೬

೩. ಡಾ. ಆರ್. ಸಿ. ಹಿರೇಮಠರಿಂದ ಸಂಪಾದಿತ ಚೆನ್ನಕವಿಕೃತ ಶ್ರೀ ಬಾಲಲೀಲಾ ಮಹಾಂತೇಶ್ವರ ಪುರಾಣ, ಪ್ರಸ್ತಾವನೆ, ಪು. ೨

೭೮

ಗ್ರಂಥ : ಬಸವಧ್ವಾಂತ ದಿವಾಕರ

ಪ್ರಭೇದ : ವಿಮರ್ಶಾತ್ಮಕ ಪ್ರಶ್ನೋತ್ತರ

ಕರ್ತೃ : ಉಜ್ಜಯಿನೀ (ಗುರುಸಿದ್ಧಶಾಸ್ತ್ರಿ)

ಕಾಲ : ಸು. ೧೯೦೦

ಆಕಾರ : ೧೮×೧೨ ಸೆ.ಮಿ.

ಪುಟ : x+೧೪೨ = ೧೫೨

ಸಾಲು : ೨೪

ಅಕ್ಷರ : ೨೨

ಸ್ಥಳ : ಮೈಸೂರು

ಪ್ರಕಾಶಕ : ಕರ್ತೃ

ಆವೃತ್ತಿ : ದ್ವಿತೀಯ

ಮಿತಿ : ೧೯೩೦

ಬೆಲೆ : ೦–೮–೦ ಆಣೆ

ಮಾಲೆ : ಶ್ರೀ ಕಾಶೀನಾಥ ಗ್ರಂಥಮಾಲೆ, ೮

**ಸಾರಾಂಶ :** 'ಬಸವಾದಿ ನಿಜತತ್ವ ದರ್ಪಣ' ಗ್ರಂಥದಲ್ಲಿಯ ಪ್ರಶ್ನೆಗಳಿಗೆ ಶ್ರೀ ಬಸವರಾಜ ಶಾಸ್ತ್ರಿಗಳು ಉತ್ತರವಿತ್ತುದನ್ನು ಅವ್ಹಾನಿಸಿ ವಿಮರ್ಶೆ ಮಾಡಲಾಗಿದೆ. ಒಟ್ಟು ೧೮೭ ಉತ್ತರಗಳಿಗೆ ವಿಮರ್ಶೆಯಿದೆ.

ಆಕರ :

೧ ಸಾರ್ವಜನಿಕ ಪುಸ್ತಕ ಭಂಡಾರ, ಮೈಸೂರು; ಬುಕ್ ನಂ. ಗ ೫ : ೩೯;
ಕ್ಲಾಸ ನಂ. k ೨೯

೭೯

## ಗ್ರಂಥ : ಬಸವನ ಅನುಭವ

**ಸಾರಾಂಶ :** ಕವಿಚರಿತೆಕಾರರು, "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆ ಇರುವ ಗ್ರಂಥಗಳನ್ನು ನಮಗೆ ತಿಳಿದಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟದ್ದೇವೆ" ಎಂದು ಹೇಳಿದ್ದಾರೆ. ಗ್ರಂಥವು ಬಸವಣ್ಣನವರನ್ನು ಕುರಿತಾಗಿರಬಹುದೆಂಬ ಭಾವನೆಯಿಂದ ಇಲ್ಲಿ ಎತ್ತಿಕೊಂಡಿದ್ದೇವೆ.

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೩
೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೫

೮೦

## ಗ್ರಂಥ : ಬಸವನ ಚರಿತೆ

**ಪ್ರಭೇದ :** ಷಟ್ಪದಿ–ಹಾಡು

**ಸಾರಾಂಶ :** ಕವಿಚರಿತೆಕಾರರು "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟದ್ದೇವೆ" ಎಂದು ಹೇಳಿರುವರು. ಬಸವಣ್ಣನವರ ಚರಿತ್ರೆಯಾಗಿರಬಹುದೆಂಬ ಊಹೆಯಿಂದ ಇಲ್ಲಿ ಎತ್ತಿಕೊಟ್ಟದ್ದೇವೆ.

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೩

೮೧

## ಗ್ರಂಥ: ಬಸವನ ಚಂದದ ಅರಮನೆ

**ಸಾರಾಂಶ :** ಕವಿಚರಿತೆಕಾರರು "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂದು ಹೇಳಿರುವರು. ಇದು ಬಸವಣ್ಣನವರನ್ನು ಕುರಿತಾಗಿ ಬರೆದುದೆಂಬ ಊಹೆಯಿಂದ ಇಲ್ಲಿ ಎತ್ತಿಕೊಟ್ಟಿದ್ದೇವೆ.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೬

೮೨

## ಗ್ರಂಥ: ಬಸವನ ಪವಾಡದ ವಚನ

**ಸಾರಾಂಶ:** ಶ್ರೀ ಸಿಂದಿಗಿ ಸಿದ್ಧಪ್ಪನವರು ಬಸವೇಶ್ವರನನ್ನು ಕುರಿತು ಬರೆಯಲ್ಪಟ್ಟ ಗ್ರಂಥಗಳ ಯಾದಿಯಲ್ಲಿ ಇದರ ಹೆಸರನ್ನು ಸೇರಿಸಿರುವರು.

---

**ಆಕರ :**

೧. ಬಸವೇಶ್ವರನ ಚರಿತ್ರೆ, ಪು. ೯೬

೮೩

## ಗ್ರಂಥ: ಬಸವನ ಪವಾಡ ರಗಳೆ

**ಪ್ರಭೇದ :** ರಗಳೆ **ಕಂದಪದ್ಯ:** ೨ **ನುಡಿ:** ೨೭ **ಸಾಲು** ೫೪

**ಕರ್ತೃ :** ಬಸವಲಿಂಗ

**ಸಾರಾಂಶ:** ಅಪ್ರಕಟಿತ. ಆದಿಯ ಕಂದ ಪದ್ಯದಿಂದ ಕವಿ-ಕೃತಿಗಳ ಬಗೆಗೆ ತಿಳಿಯುತ್ತದೆ. ಆದರೆ 'ಬಸವತತ್ವ ರತ್ನಾಕರ'ದ ಕರ್ತೃಗಳು ಈ ಗ್ರಂಥವನ್ನು ಅವಲೋಕಿಸಿದುದೆಲ್ಲಿಯೆಂಬುದನ್ನು ಹೇಳಿಲ್ಲ. ಕಾರಣ ಉಳಿದ ವಿಷಯ ತಿಳಿಯುವದಿಲ್ಲ. ಅವರು ಉದಾಹರಿಸಿದ ಪದ್ಯಗಳನ್ನಿಲ್ಲಿ ಎತ್ತಿ ಕೊಟ್ಟಿದ್ದೇವೆ :

ಆದಿ : ||ಕಂದ|| ಬಸವನ ಪವಾಡ ರಗಳೆಯ ।
ನಸವಮಾಕ್ಷನ ಕೃಪೆಗೆ ಶಿವನ ಭಕ್ತರ ಕೃಪೆಗಂ ।
ವಶನಾಗಿ ಬದುಕಲೋಸುಗ ।
ನುಸಿರ್ದಂ ವರ **ಬಸವಲಿಂಗ**ನತಿ ಭಕ್ತಿಯೊಳಂ ||

ಶ್ರೀಮದಭವಧರ್ಮರೂಪನಾಗಿ ಶಿವನ ಪೊತ್ತೆ ಬಸವ ।
ವ್ಯೋಮಕೇಶನಾಜ್ಞೆಯಿಂ ಶೈಲಾದಿಯಾಗಿ ಮೆರೆದೆ ಬಸವ ||೧||
ಸ್ಕಂದನಾಗಿ ಮೆರೆದೆ ಬಸವ ನೀಲಲೋಹಿತನಾದೆ ಬಸವ ।
ಅಂದು ಮನೋಹರನುಮುಗ್ರ ಪ್ರಮಥನಾಗಿ ಮೆರೆದೆ ಬಸವ ||೨||
ಪರಮ ವೃಷಭನಾಗಿ ಅನಿಮಿಷಂಗೆ ಲಿಂಗವಿತ್ತೆ ಬಸವ ।
ಭರದೆ ಬಸವನಾಗಿ ಬಂದು ಮಹಿಮೆಗಳನೆ ತೋರ್ದೆ ಬಸವ ||೩||

ಅಂತ್ಯ: ||ಕಂದ|| ಬಸವನ ನಾಮವೆ ಸುಖದಂ ।
ನಿಸದಂ ಪುಸಿಯಲ್ತಿದೆಂಬುದಕ್ಕೆ ನಾನೆ ಹವಣಂ ।
ರಸೆಯೋಳ್ ರೋಗಿ ಎನಿಸಿದಾಂ ।
ಬಸವ ನನೀನತಿ ಸುಖಮನಾಂತು ಸುಖಿಯಾಗಿರ್ದೆಂ ||೧||

---

ಆಕರ :

೧. ಬಸವತತ್ವ ರತ್ನಾಕರ, ಪು. ೪೯೬-೪೯೭

೮೪

**ಗ್ರಂಥ : ಬಸವನ ಷಟ್ಸ್ಥಲದ ಬೆಡಗಿನ ವಚನದ ಟೀಕೆ**

**ಪ್ರಭೇದ :** ವಚನ-ಟೀಕೆ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೦

**ಟೀಕಾಕಾರ :** ಸೋಮಶೇಖರ ಶಿವಯೋಗಿ **ಕಾಲ:** ಸು ೧೭೦೦

**ಸಾರಾಂಶ :** ಬಸವಣ್ಣನವರ ವಚನಗಳಲ್ಲಿ ಕಠಿಣವಾದ ವಿಶೇಷಾರ್ಥವುಳ್ಳವುಗಳಿಗೆ ಟೀಕೆ ಬರೆದಿದ್ದಾನೆ. ಅಪ್ರಕಟಿತ. ಕವಿಚರಿತೆಕಾರರು ಈತನ ಬಗೆಗೆ ಕೆಳಗಿನಂತೆ ಹೇಳುತ್ತಾರೆ :

"ಇವನು ಬಸವನ ಷಟ್‌ಸ್ಥಲದ ಬೆಡಗಿನ ವಚನದ ಟೀಕೆ, ತೋಂಟದ ಸಿದ್ಧಲಿಂಗನ ಷಟ್ಸ್ಥಲ ಜ್ಞಾನ ಸಾರಾಮೃತದ ವಚನ ಟೀಕೆ, ಇವುಗಳನ್ನು ಬರೆದಿದ್ದಾನೆ."

**ನೋಡು** : ೧. ಷಟುಸ್ಥಲದ ವಚನಗಳು (ಟೀಕೆ).
೨. ಬಸವೇಶ್ವರ ದೇವರ ವಚನ ಸಾರಾರ್ಥ (ಟೀಕು ಸಹಿತ)
೩. ಶ್ರೀ ಬಸವಣ್ಣನವರ ಷಟ್‌ಸ್ಥಳದ ವಚನಗಳು.

**ಆಕರ :**

೧ ಕರ್ಣಾಟಕ ಕವಿಚರಿತೆ, ಭಾ. ೨, ಪು. ೫೨೬

೮೫

**ಗ್ರಂಥ :** ಬಸವನ ನಾಟಕ

**ಪ್ರಭೇದ :** ಯಕ್ಷಗಾನ

**ಮಿತಿ :** ೧೯೧೧

**ಸಾರಾಂಶ :** ಶ್ರೀ ಸಿಂದಿಗಿ ಸಿದ್ಧಪ್ಪನವರು ಬಸವಣ್ಣನವರ ಮೇಲೆ ರಚಿತವಾದ ಗ್ರಂಥಗಳ ಸೂಚಿಯಲ್ಲಿ ಪ್ರಸ್ತುತ ಗ್ರಂಥದ ಹೆಸರನ್ನು ಸೇರಿಸಿರುವರು.

**ಆಕರ :**

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೫

೮೬

**ಗ್ರಂಥ :** ಬಸವನ ಷಡಕ್ಷರೀ ರಗಳೆ

**ಸಾರಾಂಶ :** "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂಪು ಯಾದಿಗೊಳಿಸುತ್ತ ಕವಿಚರಿತೆಕಾರರು ಪ್ರಸ್ತುತ ಕೃತಿಯ ಹೆಸರನ್ನು ಉಲ್ಲೇಖಿಸಿದ್ದಾರೆ. ಅಪ್ರಕಟಿತ.

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೬.

೮೭

**ಗ್ರಂಥ: ಬಸವ ನಾಮ**

**ಪ್ರಭೇದ:** ಸ್ತೋತ್ರ **ನುಡಿ:** ೧೦೮

**ಕರ್ತೃ:** ವೀರಪ್ಪ ಶಾಸ್ತ್ರಿ (ಎಸ್)

**ಕಾಲ:** ಸು ೧೯೦೦

**ಮಿತಿ:** ೧೯೩೫

**ಸಾರಾಂಶ:** ಬಸವಣ್ಣನವರ ಸ್ತುತಿಯಾಗಿದೆ.

---

ಆಕರ:

೧. ಶ್ರೀ ಎಸ್. ಶಿವಣ್ಣ, ಸಂಶೋಧನ ವಿದ್ಯಾರ್ಥಿ, ಕನ್ನಡ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಅವರು ಕಳಿಸಿದ ಸಂಗ್ರಹದಿಂದ.

೮೮

**ಗ್ರಂಥ: ಬಸವ ನಾಮಾವಳಿ**

**ಪ್ರಭೇದ:** ಸ್ತೋತ್ರ-ರಗಳೆ. **ಪದ್ಯಸಂಖ್ಯೆ:** ೨೭

**ಕರ್ತೃ:** ?

**ಆಕಾರ-ಅಳತೆ:** ೭·೫ × ೬ ಇಂಚು

**ಸಾಲು:** ೨೪

**ಅಕ್ಷರ:** ೨೫

**ಸಾರಾಂಶ:** ಬಸವ ಸ್ತೋತ್ರವಾಗಿದೆಯೆಂದು ತಿಳಿದಿದೆ.

---

ಆಕರ:

೧. ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, ಹಸ್ತಪ್ರತಿ, ನಂ. ೩೭೫/೩

೮೯

**ಗ್ರಂಥ: ಬಸವ ನಾಮಾವಳಿ**

**ಪ್ರಭೇದ:** ಸ್ತೋತ್ರ

**ಕರ್ತೃ:** ಘನಮಠಾರ್ಯರು

**ಕಾಲ :** ಸು. ೧೮೨೮

**ಸಾರಾಂಶ :** ಕವಿ: "ಭಕ್ತಿಸುಧಾಸಾರವೆಂಬುವ ಗ್ರಂಥದಲ್ಲಿ ಬಸವಣ್ಣನವರ ಬಗ್ಗೆ ಅನೇಕ ಪದಗಳನ್ನು ಹಾಡಿರುವರಲ್ಲದೆ **ಬಸವ ನಾಮಾವಳಿ** ಮತ್ತು **ಬಸವ ಮಹಿಮಾ ತ್ರಿವಿಧಿ**ಗಳನ್ನು ರಚಿಸಿರುತ್ತಾರೆ" ಎಂದು ಬಸವತತ್ವ ರತ್ನಾಕರದ ಕರ್ತೃಗಳು ಹೇಳಿದ್ದಾರೆ. ಗ್ರಂಥ ನಮ್ಮ ಅವಲೋಕನಕ್ಕೆ ದೊರೆತಿಲ್ಲ. ಅಪ್ರಕಟಿತ.

---

ಆಕರ:

೧ ಬಸವತತ್ವ ರತ್ನಾಕರ, ಪು. ೫೯೨

೯೦

**ಗ್ರಂಥ:** ಬಸವ ಪವಾಡ

**ಪ್ರಭೇದ:** ಸಾಂಗತ್ಯ **ಪದ್ಯ :** ೧೮೫೪

**ಕರ್ತೃ:** ಗುರುಚೆನ್ನಬಸವನ ಶಿಷ್ಯ

**ಕಾಲ:** ಸು. ೧೬೫೦

**ಆಕಾರ:** ಕಾಗದ ೮ ೩ × ೬·೫ ಇಂಚು

**ಪುಟ:** ೧—೧೯೩

**ಸಾಲು :** ೧೬

**ಅಕ್ಷರ :** ೧೪

**ಸಾರಾಂಶ:** ಗ್ರಂಥವು ಬಸವಣ್ಣನವರು ಗೈದ ಪವಾಡಗಳನ್ನು ವರ್ಣಿಸುತ್ತದೆ. ಅಪ್ರಕಟಿತ.

**ಆದಿ :** ಬಸವೇಶ್ವರ ದೇವರ ಪವಾಡವ ಬರವುದಕ್ಕೆ ಶುಭಮಸ್ತು

||ಕಂದ|| ಬಸವ ಪವಾಡವನಿದ ನೀ
ಉಸುರುವೆ ಭಕ್ತಿಯಲಿ ಕೇಳ್ದ ಭಕ್ತರಿಗೆಲ್ಲಂ
ದೆಶೆಗೆಟ್ಟು ಕರ್ಮಪೋಪುದು
ಶಶಿಧರನು ಸಂತೋಷದಿ ಆಯುರಾರೋಗ್ಯ ನೀವಂ || ೧ ||

ಗುರು ಚಂನ ಬಸವರಾಜನು ಹರುಷದೊಳೆಂನ
ಕರದು ಕೃಪೆಯಲ್ಲಿ ಪೇಳಿದರೂ
ಧರೆಯೊಳು ಬಸವ ಪವಾಡವ ತಿದ್ದಿ ವಿ
ಸ್ತರಿಸೆನಲುಸುರ್ದೆ ಚಿತ್ತಯಿಸಿ ॥ ೧೦ ॥

ಅಂತ್ಯ : ಬಸವೇಶ್ವರನ ಕಾವ್ಯದ ಕೇಳ್ವವರಿಗೆ
ದೆಸೆಗೆಟ್ಟು ಪಾಪವ್ವೋಡುವದೂ
ಶಿಶು ಪಶು ಧನ ಧಾನ್ಯ ಆಯುರಾರೋಗ್ಯವಾ
ಶಶಿಧರನಿತ್ತು ರಕ್ಷಿಸನೂ

ಅಂತು ಸಂಧಿ ೫ ಕಂ ಪದನು ೭೯೮ ಕಂ ಮಂಗಳ ಮಹಾ ಶ್ರೀ ತಾರಣ ಸಂವತ್ಸರದ ಮಾಘ ಮಾಸದ ಬಹುಳ ಪಂಚಮೆಯಲ್ಲು ಅಗಸನ ಹಳ್ಳಿ ಬಸವಲಿಂಗ ದೇವರು ಹುರಳಿ ಹಾಳ ಕೆಂಡ್ಯೆಯಗೆ ಬರೆದುಕೊಟ್ಟ ಪುಸ್ತಕಕ್ಕೆ ಸುಭಮಸ್ತು ಶ್ರೀ.

---

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೨೦, ನಂ. ಕೆ. ೫೮೨/೧. ಮತ್ತು ಪು. ೨೧, ನಂ. ಕೆ. ಬಿ. ೪೫೪

೨. Alphabetical catalogue of Kannada Manuscripts in the Oriental Research Institute, Mysore, 1891 to 1951 p. 22, No. B 454.

೯೧

## ಗ್ರಂಥ : ಬಸವ ಪವಾಡದ ಕಂದ

**ಪ್ರಭೇದ :** ಕಂದ ?

**ಸಾರಾಂಶ :** "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂಬ ಶೀರ್ಷಿಕೆಯ ಕೆಳಗೆ ಕವಿಚರಿತೆಕಾರರು ಈ ಗ್ರಂಥವನ್ನು ಉಲ್ಲೇಖಿಸಿದ್ದಾರೆ.

---

**ಆಕರ :**

೧ ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೬

೯೨

ಗ್ರಂ ಬಸವ ಪವಾಡದ ರಗಳೆ

ಪ್ರಭೇದ: ರಗಳೆ ನುಡಿ : ೧೧೨

ಕರ್ತೃ : ಹರಿಹರ ?

ಕಾಲ : ಸು. ೧೨೦೦

ಆಕಾರ : ತಾಳ ಓಲೆ ೬×೧ ಇಂಚು

ಪತ್ರ: ೨೩

ಸಾಲು : ೭

ಸಾರಾಂಶ : ಗ್ರಂಥದ ಆದ್ಯಂತದಲ್ಲಿ 'ಹಂಪೆಯ ವಿರುಪಾಕ್ಷಾ' ಎಂಬ ಮುದ್ರಿಕೆಯಿಂದ ಮುಗಿಯುವ ಕಂದ ಪದ್ಯಗಳಿವೆ. ಹಂಪೆಯು ಹರಿಹರ ಕವಿ ಬರೆದಿರಬಹುದೇ ? ಇದರಲ್ಲಿ ೮೮ ಪವಾಡಗಳಿವೆ.

ದ್ವಿತೀಯ ಚರಣದ ಕೊನೆಗೆ "ಮೆರೆದ ಬಸವ" ಎಂಬ ಮಾತು ತಪ್ಪದೇ ಬರುತ್ತದೆ.

ಆದಿ: ||ಕಂದ|| ಬಸವಣ್ಣನು ಕಲ್ಯಾಣದೊ ।
ಳೆಸೆವ ಪವಾಡವನು ಮೆರೆದ ಯೆಂಬಂತ್ತೆಂಟುಂ ।
ವಸುಧಾಧಿಪ ಬೆರ್‍ಗಾಗಲು ।
ಅಸಮಾಕ್ಷಂ ದೇವ ಹಂಪೆಯ ವಿರೂಪಾಕ್ಷಾ ||

ಪವಾಡಗಳು :

ಹಿರಿಯ ತುರಿಯದಿಂದ ಸಂಗಮೇಶ್ವರಂಗೆ ಬರಲು ಮುಂದೆ ।
ಹರಿವ ನದಿಯನೆರಡು ಭಾಗವನ್ನು ಮಾಡಿ ಮೆರೆದ ಬಸವ ||
ತಂದು ಸಂಗಮೇಶ್ವರಂಗೆ ಬೋನವಿಡಲು ಉಣ್ಣದಿರಲು ।
ಅಂದು ಮೊದಲು ಜಂಗಮಕ್ಕೆ ಮಾಡಿತೋರಿ ಮೆರೆದ ಬಸವ ।'

ಅಂತ್ಯ : ಮಂಗಳಾಂಗ ತನ್ನ ಪ್ರಾಣಲಿಂಗ ಸಂಗಮೇಶನೊಳಗೆ ।
ಅಂಗವರಿತು ವಿರುಪಾಕ್ಷನೊಳಗೆ ಬೆರೆದು ಮೆರೆದ ಬಸವ ||

ಕಂದ॥ ಪರಮಗುರು ಬಸವರಾಜಂ
ಮೆರೆದ ಪವಾಡಗಳ ನಿಮ್ಮ ಕೃಪೆಯಿಂದೆನಗಂ ॥
ವರಮತಿಯನಿತ್ತು ರಕ್ಷಿಸ ।
ಲೊರೆದೆಂ ಸಲಹಯ್ಯ ಹಂಪೆಯ ವಿರುಪಾಕ್ಷಾ ॥

---

ಆಕರ :

೧ Descriptive Catalogue of the Kannada Manuscripts in the Government Oriental Manuscripts Library-Madras, Vol. IV, MS. No. 505, p. 827-29.

೨ ಕರ್ಣಾಟಕ ಕವಿಚರಿತೆ, ಭಾಗ ೩, ಪು. ೨೮೪

೩ Alphabetical Catalogue of Kannada Manuscripts in the Oriental Research Institute, Mysore-1891-1951 No. B26212

೪ ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ವಿಭಾಗದ ವಚನ ವಾಙ್ಮಯ ಪ್ರಕಟನಾ ಯೋಜನೆಯ ತಾಳೆಗರಿ ಗ್ರಂಥ, ನಂ. ೧೦೩೧

೯೩

**ಗ್ರಂಥ :** ಬಸವ ಪವಾಡ ಲೀಲಾಮೃತ

**ಪ್ರಭೇದ :** ಭಾಮಿನಿ ಷಟ್ಪದಿ **ಸಂಧಿ :** ೧೧ **ಪದ್ಯ :** ೯೮೦

**ಕರ್ತೃ :** ನರೇಗಲ್ಲ ಶಿವ (ಬಸ ?) ಪ್ಪ ಶಾಸ್ತ್ರಿ

**ಕಾಲ :** ಸು. ೧೮೨೫

**ಸಾರಾಂಶ :** ಕವಿಯು ಧಾರವಾಡ ಜಿಲ್ಹೆಯ ನರೇಗಲ್ಲ ಗ್ರಾಮದವನು. "ಇದರಲ್ಲಿ ಬಸವ ಚರಿತ್ರವ ಸುಲಭ ಶೈಲಿಯಲ್ಲಿ ಬರೆದಿದೆ." ಅಪ್ರಕಟಿತ.

ಕಾವ್ಯದಲ್ಲಿ ಪುರದ ಶೃಂಗಾರವಿಂತಿದೆ :

ಎಲ್ಲಿ ನೋಡಲು ಝಲ್ಲಿ ತೋರಣ ।
ವಲ್ಲಿಗಲ್ಲಿಗೆ ಮಕರ ತೋರಣ ।
ಬಿಲ್ಲು ಬಾಗಿದವೋಲು ಎಸೆದುವು ಕನಕ ತೋರಣವು ।

ಮಲ್ಲಿಗೆಯ ಸರದೊಳಗೆ ತೋರಣ ।
ಝಲ್ಲಿ ನವರತ್ನಗಳ ತೋರಣ ।
ವೆಲ್ಲಿ ನೋಡಲು ಎಸೆಯುತಿರ್ದವು ಹಸಿರು ತೋರಣವು ॥

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೬೧-೪೬೨
೨. ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು, ಪು. ೧೧೨

೯೪

**ಗ್ರಂಥ : ಬಸವ ಪುರಾಣವು**

**ಪ್ರಭೇದ :** ಭಾಮಿನಿ ಷಟ್ಪದಿ **ಸಂಧಿ :** ೬೧ **ಪದ್ಯ :** ೩೬೨೩

**ಕರ್ತೃ :** ಭೀಮಕವಿ

**ಕಾಲ :** ೧೩೬೯

**ಆಕಾರ :** ೩೦×೨೧ ಸೆ. ಮಿ.

**ಪುಟ :** ೬೭೦

**ಸಾಲು :** ೩೬

**ಸ್ಥಳ :** ಮಂಗಳೂರು

**ಆವೃತ್ತಿ :** ಪ್ರಥಮ (ಲಿಥೊ ಮುದ್ರಣ)

**ಮಿತಿ :** ೧೮೫೦

**ಸಾರಾಂಶ :** ಕನ್ನಡದಲ್ಲಿ ಬಸವಣ್ಣನವರನ್ನು ಕುರಿತು ರಚಿಸಲ್ಪಟ್ಟ ಪ್ರಾಚೀನ ಕಾವ್ಯಗಳಲ್ಲಿ ಇದೊಂದು. ಪಾಲ್ಕುರಿಕಿ ಸೋಮನಾಥ ಕವಿಯು ತೆಲುಗಿನಲ್ಲಿ ಬರೆದ 'ಬಸವ ಪುರಾಣಮು' ದ ಕನ್ನಡ ಪರಿವರ್ತನೆಯಿದು. ಕಥಾನಾಯಕ ಬಸವಣ್ಣನವರ ವ್ಯಕ್ತಿತ್ವದ ಘನತೆಯನ್ನು ಕೀರ್ತಿಸುತ್ತದೆ.

**ಕಥೆ :** ಪಶುಪತಿಯ ವಾಹನವಾದ ನಂದಿನಾಥನು ಬಸವನಾಮದಿಂದ ಭೂತಳದ ಬಾಗೆವಾಡಿಯ ಮಾದರಸ ಮಾದಲಾಂಬಿಕೆಯರ ಪುತ್ರನಾಗಿ ಜನಿಸುವನು. ಆಗ ಸಂಗಮನಾಥನಿಂದ ಲಿಂಗದೀಕ್ಷೆಯಾಗುವದು. ಎಂಟನೆಯ ವರ್ಷಕ್ಕೆ ಮುಂಜಿಯ ಸಂಸ್ಕಾರವನ್ನು ತಿರಸ್ಕರಿಸಿ ಅಕ್ಕ ನಾಗಾಂಬಿಕೆಯೊಡನೆ ಗೃಹತ್ಯಾಗಮಾಡಿ ಹೊರಡುವನು. ಸಂಗಮ ಕ್ಷೇತ್ರಕ್ಕೆ ಬರುವನು. ಇತ್ತ ಉಪನಯನ

ಮಹೋತ್ಸವಕ್ಕಾಗಿ ಬಂದ ಬಿಜ್ಜಳನ ಭಂಡಾರಿಯೂ ತನ್ನ ಸೋದರ ಮಾವನೂ ಆದ ಬಲದೇವ ಮಂತ್ರಿಯು ಅಳಿಯನ ನಿಶ್ಚಲ ಭಕ್ತಿಯನ್ನು ಮೆಚ್ಚಿ ಮಗಳು ಗಂಗಾಬಿಕೆ-ಯನ್ನು ಮದುವೆಮಾಡಿಕೊಡಲು ನಿಶ್ಚಯಿಸುವನು. ವಿಜ್ರಂಭಣೆಯಿಂದ ಮದುವೆ-ಜರುಗುವದು.

ಕೆಲಕಾಲದ ಮೇಲೆ ಬಲದೇವನು ಕಲ್ಯಾಣದಲ್ಲಿ ಶಿವಾಧೀನನಾಗುವನು. ಬಿಜ್ಜಳರಾಯನು ಅವನ ಸ್ಥಾನಕ್ಕೆ ಅಳಿಯ ಬಸವೇಶ್ವರನನ್ನು ಆಯ್ಕೆಮಾಡಿ ಸಂಗಮ ಕ್ಷೇತ್ರದಿಂದ ಕರೆಯಿಸಿಕೊಳ್ಳುವನು. ಬಿಜ್ಜಳನ ಸಮಕ್ಷಮದಲ್ಲಿ ಬಸವಣ್ಣನು ಅನೇಕ ಪವಾಡಗಳನ್ನು ಮೆರೆಯಿಸಿ ಶಿವನ, ಶಿವಶರಣರ ಕೀರ್ತಿಯನ್ನು ಬೆಳಗಿಸುವನು. ಅಂತ್ಯಜ ಹರಳಯ್ಯನ ಮಗನಿಗೆ ಬ್ರಾಹ್ಮಣ ಮಧುವಯ್ಯನ ಮಗಳನ್ನು ಕೊಟ್ಟು ವಿವಾಹ ನೆರವೇರಲು, ವರ್ಣಸಂಕರವಾಯಿತೆಂದು ಬಿಜ್ಜಳನು ಆ ಇಬ್ಬರ ಕಣ್ಣು ಕೀಳಿಸಿದನು. ಇದು ಶಿವದ್ರೋಹವಾಯಿತೆಂದು ಬಗೆದು ಜಗದೇವನು ಬಸವಾದಿಗಳ ಆಜ್ಞೆಯ ಮೇರೆಗೆ ಬಿಜ್ಜಳನ ಕೊಲೆಮಾಡುವನು. ಜಗದೇವನು ಸಹ ಆತ್ಮಹತ್ಯೆ ಮಾಡಿಕೊಂಡು ಸಾಯುವನು. ಬಸವಣ್ಣನವರು ಸಂಗಮೇಶ್ವರನಲ್ಲಿ ಬಯಲಾಗು-ವರು. ಚನ್ನಬಸವಾದಿ ಶರಣರು ಉಳಿವೆ ಕ್ಷೇತ್ರಕ್ಕೆ ಪ್ರಯಾಣಬೆಳೆಸುವರು.

---

ಆಕರ :

೧. ಬಸವ ಭಾಂಡಾರ, ಲಿಥೋ, ೧.
೨. Catalogue of the Kannada, Badaga and Kurga books in the library of the British Museum, p. 22
೩. ಕರ್ನಾಟಕ ಕವಿಚರಿತೆ, ಭಾ. ೧, ಪು. ೪೨೪
೪. ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೨೨-೨೪

## ೯೫

**ಗ್ರಂಥ :** ಬಸವ ಪುರಾಣವು

**ಪ್ರಭೇದ :** ಭಾಮಿನಿ ಷಟ್ಪದಿ **ಸಂಧಿ :** ೬೧ **ನುಡಿ :** ೩೬೨೩

**ಕರ್ತೃ :** ಭೀಮಕವಿ

**ಕಾಲ :** ೧೩೬೯

**ಸಂಪಾದಕ :** ಅಪ್ಪಾಜಿ (ಅಣ್ಣಪ್ಪ) ಮತ್ತು ರಾಮಾಶಾಸ್ತ್ರೀ (ಬೆಂಗಳೂರು)

**ಪುಟ :** ೪೪೨ + ೩ = ೪೪೫

**ಸ್ಥಳ :** ಬೆಂಗಳೂರು

ಪ್ರಕಾಶಕ : ವಾಜಪೇಯ ಕೃಷ್ಣಯ್ಯ, ರಾಜೇಶ್ವರಿ ಮುದ್ರಾಕ್ಷರ ಶಾಲೆ
ಆವೃತ್ತಿ : ಪ್ರಥಮ ದ್ವಿತೀಯ
ಮಿತಿ : ೧೮೯೮ ೧೯೧೪

ಸಾರಾಂಶ : ಮೇಲೆ ನಂ. ೯೪ ರಲ್ಲಿ ಹೇಳಿದ ಗ್ರಂಥವಿದು. ಮುದ್ರಣ ದೃಷ್ಟಿ-ಯಿಂದ ಮಹತ್ವವೆಂದರಿತು ಇಲ್ಲಿ ವರ್ಣಿಸಿದ್ದೇವೆ.

೯೬

**ಗ್ರಂಥ : ಬಸವ ಪುರಾಣ**
**ಪ್ರಭೇದ :** ಭಾಮಿನಿ ಷಟ್ಪದಿ
**ಕರ್ತೃ :** ಭೀಮಕವಿ
**ಮಿತಿ :** ೧೯೨೬
**ಬೆಲೆ :** ೧-೪-೦ ರೂ.

**ಸಾರಾಂಶ :** ಹುಬ್ಬಳ್ಳಿ ವಾಗ್ವಿಲಾಸ ಬುಕ್ ಡಿಪೋದ ಒಡೆಯರಾದ ಶ್ರೀ ಏ. ಆರ್. ಶಿವನಾಗಪ್ಪನವರು ತಮ್ಮಲ್ಲಿ ಸಿಗುವ ಗ್ರಂಥಗಳ ಯಾದಿಯನ್ನು ೧೯೨೭ ರಲ್ಲಿ ಪ್ರಕಟವಾಗಿರಬಹುದಾದ 'ಶ್ರೀ ಜಗದ್ಗುರು ಸಿದ್ಧೇಶ್ವರ ಸ್ವಾಮಿಗಳವರ ಚರಿತ್ರೆ'ಯ ಗ್ರಂಥದ ಕೊನೆಯಲ್ಲಿ ಮುದ್ರಿಸಿದ್ದಾರೆ. ಆದರಲ್ಲಿ ಪ್ರಸ್ತುತ ಗ್ರಂಥದ ನಾಮ ನಿರ್ದೇಶನ ಮಾಡಿದ್ದಾರೆ. ಮುದ್ರಣ ದೃಷ್ಟಿಯಿಂದ ಮಹತ್ವವೆಂದರಿತು ಇಲ್ಲಿ ವರ್ಣಿಸಿರುವೆವು. ಮೇಲೆ ನಂ. ೯೪ ರಲ್ಲಿ ಹೇಳಿದ ಗ್ರಂಥವೇ ಇದು.

೯೭

**ಗ್ರಂಥ : ಬಸವ ಪುರಾಣ** ಸಂಪುಟ ೧-೨
**ಪ್ರಭೇದ :** ಭಾಮಿನಿ ಷಟ್ಪದಿ **ಸಂಧಿ :** ೬೦ **ಪದ್ಯ :** ೩೬೨೮
**ಕರ್ತೃ :** ಭೀಮಕವಿ
**ಕಾಲ :** ೧೩೬೯
**ಸಂಪಾದಕ :** ಹಿರೇಮಠ ( ಆರ್. ಸಿ.)
**ಆಕಾರ :** ೨೧×೧೪ ಸೆ. ಮಿ.

**ಪುಟ :** xiv+೯೫೪ = ೯೬೮

**ಸಾಲು :** ೨೦

**ಸ್ಥಳ :** ಧಾರವಾಡ

**ಪ್ರಕಾಶಕ :** ಸಾಹಿತ್ಯಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ

**ಆವೃತ್ತಿ :** ಪ್ರಥಮ

**ಮಿತಿ :** ಪ್ರ. ಸಂಪುಟ ೧೧-೧೦-೧೯೫೮ ದ್ವಿ. ಸಂಪುಟ ೨೩-೪-೧೯೬೬

**ಬೆಲೆ :** ಪ್ರ. ಸಂಪುಟ ೬=೦ ರೂ. ದ್ವಿ. ಸಂಪುಟ ೮=೦೦ ರೂ.

**ಮಾಲೆ :** ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪ್ರಕಟನೆ, ೧೩.

**ಸಾರಾಂಶ :** ಎರಡು ಕಾಗದದ ಹಸ್ತಪ್ರತಿಗಳು, ಒಂದು ಕಲ್ಲಚ್ಚಿನ ಪ್ರತಿ, ಮೂರು ತಾಡವೋಲೆ ಪ್ರತಿಗಳು–ಹೀಗೆ ಆರು ಪ್ರತಿಗಳನ್ನು ಅವಲೋಕಿಸಿ ಸಂಸ್ಕರಿಸಿ ಪಾಠಾಂತರಗಳನ್ನು ಗುರುತಿಸಿ ಶಾಸ್ತ್ರೀಯವಾಗಿ ಸಂಪಾದಿಸಿದ ಸಮಗ್ರ ಪುರಾಣವಿದಾಗಿದೆ. ಇದು ಮೇಲೆ ನಂ. ೯೪ ರಲ್ಲಿ ಹೇಳಿದ ಗ್ರಂಥವಾಗಿದೆ. ಉತ್ತಮ ಆವೃತ್ತಿಯೆಂಬ ಕಾರಣದಿಂದ ಇಲ್ಲಿ ವರ್ಣಿಸಿರುವೆವು.

"ಭೀಮಕವಿ ಬಸವ ಪುರಾಣ ತೆಲುಗು ಬಸವಪುರಾಣದ ಕನ್ನಡದ ಪರಿವರ್ತನೆ. ಪಾಲ್ಕುರಿಕೆ ಸೋಮಾರಾಧ್ಯರ ಪರಮಾಶೀರ್ವಾದದಿಂದ ಭೀಮಕವಿಯು ಇದನ್ನೊರೆದಿರುವನು. ಕನ್ನಡ ಸಾಹಿತ್ಯದಲ್ಲಿ ಇದೊಂದು ಮಹಾಕೃತಿ. ಕಥಾನಾಯಕರಾದ ಬಸವಣ್ಣನವರ ವ್ಯಕ್ತಿತ್ವದ ಘನತೆಯಿಂದ, ನಡುಗನ್ನಡ ಷಟ್ಪದಿಯ ಶೈಲಿಯ ಹಿರಿಮೆಯಿಂದ, ಈ ಕಾವ್ಯ ಮಹಾಕೃತಿಯೆನಿಸಿದೆ. ಜನಸಾಮಾನ್ಯರ ದೃಷ್ಟಿಯಿಂದಂತೂ ಕನ್ನಡ ನಾಡಿನಲ್ಲಿ ಈ ಕಾವ್ಯವಿಲ್ಲದ ಊರಿಲ್ಲ. ಈ ನಾಡಿನ ಎಷ್ಟು ಹಳ್ಳಿ ಪಟ್ಟಣಗಳೋ ಅದರಷ್ಟು, ಅದೇಕೆ? ಅವುಗಳೆರಡಷ್ಟು ಪ್ರತಿಗಳು ದೊರೆಯಬಲ್ಲವು."

—ಪ್ರಸ್ತಾವನೆಯಿಂದ

ಇಷ್ಟು ಮಹತ್ವದ ಗ್ರಂಥವು ಶುದ್ಧರೂಪದ ಮುದ್ರಣದಲ್ಲಿ ಇಲ್ಲದುದರಿಂದ ಈ ಗ್ರಂಥಾಲಯ ಸಂಸ್ಕರಣದ ಆವೃತ್ತಿಯನ್ನು ಪ್ರಕಟಿಸಲಾಗಿದೆ.

**ನೋಡು :** ೧. ಬಸವ ಪುರಾಣಮು (ತೆಲುಗು)
೨. ವಸವ ಪುರಾಣಮ್ (ತಮಿಳು)
೩. ಬಸವೇಶ ವಿಜಯಃ (ಸಂಸ್ಕೃತ)
೪. ವ್ಯಾಸೋಕ್ತ ಬಸವ ಪುರಾಣ (ಸಂಸ್ಕೃತ)
೫. ಶ್ರೀ ಬಸವೇಶ್ವರ ಪುರಾಣ (ಹಿಂದಿ)
೬. ಬಸವ ಪುರಾಣ (ಮರಾಠಿ)

೯೮

**ಗ್ರಂಥ :** ಬಸವ ಪುರಾಣದ ಪುರಾತನ ಚರಿತ್ರೆ

**ಪ್ರಭೇದ :** ವಾರ್ಧಕ ಷಟ್ಪದಿ **ಸಂಧಿ :** ೯ **ಪದ್ಯ :** ೩೫೦

**ಕರ್ತೃ :** ಕುಮಾರ ಚೆನ್ನಬಸವ

**ಕಾಲ :** ೧೫೫೦

**ಆಕಾರ :** ಶ್ರೀತಾಳ ೧೮× ೨ ಇಂಚು

**ಪತ್ರ :** ೧೦೦

**ಸಾಲು :** ೫ ರಿಂದ ೮

**ಸಾರಾಂಶ :** "ಇದರೊಳಗೆ ಬಸವ ಪುರಾಣದಲ್ಲಿ ಸಂಗ್ರಹವಾಗಿ ಸೂಚಿಸಿರುವ ಪುರಾತನರ ಚರಿತ್ರವು ಉಪಕಥೆಗಳೊಡನೆ ವಿಸ್ತರಿಸಿ ಹೇಳಿದೆ." (ಕ.ಚ.) 'ಇದಕ್ಕೆ 'ಗಣಾಡಂಬರ ಚರಿತ್ರೆ' ಯೆಂಬ ಹೆಸರೂ ಇರುವಂತೆ ತೋರುತ್ತದೆ'. (DCKM ಕವಿ,ಕಾವ್ಯಗಳ ಬಗೆಗೆ ವಿವರಿಸುವ ಪದ್ಯವನ್ನು ಕೆಳಗೆ ಕೊಟ್ಟಿದೆ:

ಜಸವೆತ್ತ ಮುಕ್ತಿ ಮುನಿ ಸಿಂಹಾಸನಾಧಿಪತಿ
ಯೆಸೆವ ಸುಚರಿತ್ರಾಪ್ತ ಶಿಖಿಯ ಬಸವೇಶ ಕರ
ಬಿಸಜ ಸಂಜಾತ ಪ್ರತಾಪ ಕೀರ್ತಿವಿರಾಜಿತ **ಕುಮಾರ ಚೆನ್ನ**ಬಸವೇಶ್ವರಂ
ಶಶಿಮೌಳಿಯಂಘ್ರಿಯಂ ಶಾಸ್ತ್ರೋಕ್ತ ವಿಧಿಯೊಳ
ರ್ಚಿಸುತೆ ಶಿವಭಜಕ ಜನರಿಷ್ಟಾರ್ಥವೀವುತಂ
ಬಸವೇಶ್ವರ ಪುರಾಣದೊಳು ಗುಪ್ತವೆನಿಸುವ **ಪುರಾತನರ ಚರಿತ**ಮನೊರೆದಂ।

ಉತ್ತರದೇಶದ ಬಸವಲಿಂಗ ಕವಿಯು ತನ್ನ 'ಬಸವೇಶ್ವರ ದೇವರ ಪುರಾಣದ ಕಥಾ ಸಾಗರ'ದಲ್ಲಿ 'ಗಣಾಡಂಬರ'ದ ಉಪಯೋಗ ಮಾಡಿಕೊಂಡಿರುವದಾಗಿ ಹೇಳುತ್ತಾನೆ. ಅಪ್ರಕಟಿತ.

---

**ಆಕರ :**

೧. Descriptive catalogue of the Kannada Manuscripts. Madras, Vol. IV, MS. No. 758; p. 1080.

೨. ಕರ್ನಾಟಕ ಕವಿಚರಿತೆ, ಭಾ. ೨, ಪು. ೨೫೬.

೩. ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು, ಹಸ್ತಪ್ರತಿ ನಂ.ಕೆ ಬಿ. ೪೬

೯೯

## ಗ್ರಂಥ : ಬಸವ ಪುರಾಣ ಮಹೋತ್ಸವಾನುಮೋದನ

ಮಿತಿ : ೧೯೨೦

ಸಾರಾಂಶ : ಶ್ರೀ ಸಿಂದಿಗಿ ಸಿದ್ದಪ್ಪನವರು ಈ ಗ್ರಂಥದ ಹೆಸರನ್ನು 'ಗ್ರಂಥಾವಳಿ' ಯಲ್ಲಿ ಕೊಟ್ಟಿರುವರು.

---

ಆಕರ :

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

೧೦೦

## ಗ್ರಂಥ : ಬಸವ ಪುರಾಣಾರ್ಥ ಪ್ರಕಾಶಿಕೆ

ಸಾರಾಂಶ : ಕವಿಚರಿತೆಕಾರರು "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟದ್ದೇವೆ" ಎಂದು ಹೇಳಿದ್ದಾರೆ. ಬಸವ ಪುರಾಣದ ಅರ್ಥವಿವರವು ಇದರಲ್ಲಿರಬಹುದೆಂದು ಬಗೆದು ಇಲ್ಲಿ ಎತ್ತಿಕೊಂಡಿದ್ದೇವೆ. ಅಪ್ರಕಟಿತ.

---

ಆಕರ :

೧. ಕರ್ಣಾಟಕ ಕವಿ ಚರಿತೆ, ಭಾ. ೩, ಪು. ೪೧೮ ಮತ್ತು ೪೨೬.

೧೦೧

## ಗ್ರಂಥ : ಬಸವ ಭಕ್ತಿ

ಪ್ರಭೇದ : ಗದ್ಯ-ಮಕ್ಕಳ ಸಾಹಿತ್ಯ

ಕರ್ತೃ : ಹರ್ಡೇಕರ (ಮಂಜಪ್ಪ)

ಕಾಲ : ಜ ೧೮-೨-೧೮೮೫ ಮ. ೩-೧-೧೯೪೭

ಸಾರಾಂಶ : "ಮಹಾನುಭಾವರಾದ ಬಸವಣ್ಣನವರ ಭಕ್ತಿ ಮಾರ್ಗವು ಈ ಲೋಕಕ್ಕೆ ಹೊಸದು.... ಜನಾಂಗದಲ್ಲುಂಟಾಗುವ ವಿಷಮತೆಯನ್ನು ಕಳೆದು

ಸಮತೆಯನ್ನು, ಸುಖಶಾಂತಿಗಳಿಂದ ಬಾಳಲು ಅನುಕೂಲವಾಗುವ ದಿವ್ಯ ರೀತಿನೀತಿ-ಗಳನ್ನು ತಮ್ಮ ಈ ಭಕ್ತಿಯೋಗದಲ್ಲಿ ಅಳವಡಿಸಿದ್ದಾರೆ" ಎಂಬ ಪೀಠಿಕೆಯ ಕೆಳಗೆ ಬಸವಣ್ಣನವರ ಭಕ್ತಿಯ ಸಂಬಂಧದ ೧೦ ವಚನಗಳನ್ನಾಯ್ದು ಅವುಗಳಿಗೆ ವಿವರಣೆ-ಯನ್ನು ಕೊಟ್ಟಿದೆ. ಪ್ರಕಟವಾದ ಮಿತಿ, ಸ್ಥಳ, ಬೆಲೆ ಇತ್ಯಾದಿಗಳು ಲಭ್ಯವಾಗಿಲ್ಲ.

ಆಕರ:

೧. ರಾಷ್ಟ್ರಧರ್ಮದ್ರಷ್ಟಾರ ಹರ್ಡೇಕರ ಮಂಜಪ್ಪ, ಪು. ೧೨೮೭-೯೧

೧೦೨

**ಗ್ರಂಥ : ಬಸವ ಭೂಮಿ**

**ಪ್ರಭೇದ :** ಕಾವ್ಯ ?

**ಕರ್ತೃ :** ಕಲ್‌ಬುರ್ಗಿ

**ಸಾರಾಂಶ:** ಅಪ್ರಕಟಿತ. "ಶರಣಕವಿ, ಕಲ್‌ಬುರ್ಗಿ-ಇವರು 'ಬಸವ ಭೂಮಿ' ಎಂಬುವ ಗ್ರಂಥವನ್ನು ಬರೆದಿರುತ್ತಾರೆ" ಎಂದು 'ಬಸವತತ್ವ ರತ್ನಾಕರ'ದ ಕರ್ತೃಗಳು ಹೇಳಿ ಕೆಳಗಿನ ಪದ್ಯವನ್ನು ಉದಾಹರಿಸಿದ್ದಾರೆ:

ಬಸವ ಭೂಮಿ ನಿನ್ನ ಸೇವೆ ಹರುಷದಿಂದ ಮಾಡುವಾ ।
ಹಸುಳರೆಲ್ಲ ನಿನ್ನ ಚರಣದಲ್ಲಿ ಕೊರಳ ನೀಡುವಾ ।
ಕಳೆದು ಹೋದ ಘನತೆಯನ್ನು ಮರಳಿ ಜಗಕೆ ತೋರುವಾ ।
ಹೊಳೆವ ಬಾಲಸೂರ್ಯನಂತೆ ಧರೆಯನೆಲ್ಲ ಬೆಳಗುವಾ ।

ಆಕರ:

೧. ಬಸವತತ್ವ ರತ್ನಾಕರ, ಪು. ೬೩೮

೧೦೩

**ಗ್ರಂಥ : ಬಸವ ಮಹಾತ್ಮನ ಸತ್ಯಬೋಧೆ**

**ಪ್ರಭೇದ :** ಪ್ರಬಂಧ

**ಕರ್ತೃ :** ವಿರಕ್ತಮಠ ( ಅನ್ನದಾನೀಶ್ವರ )

**ಆಕಾರ:** ೧೮×೧೨ ಸೆ. ಮಿ.

**ಪುಟ:** ೪೦

**ಸ್ಥಳ:** ಕಲಬುರ್ಗಿ

**ಪ್ರಕಾಶನ:** ತರುಣ ಸಂಘ

**ಆವೃತ್ತಿ:** ಚತುರ್ಥ

**ಸಾರಾಂಶ:** 'ಮಾನವ ಜೀವನಕ್ಕೆ ಮೂಲ ಅಧ್ಯಾತ್ಮ. ದಿನಾಲು ಏಕ-ದೇವೋಪಾಸನೆ ಮಾಡಬೇಕು, ಪ್ರಾರ್ಥನೆಯಿಂದ ದೇವನೊಡನೆ ಸಂಭಾಷಣೆ ಮಾಡ-ಬೇಕು. ಶಿವಗೀತ ತತ್ವವ ಹಾಡಬೇಕು. ಶಿವನಾಗಿ-ಶಿವಶಕ್ತಿ ಸಂಪನ್ನನಾಗಬೇಕು. ಶಿವಶಕ್ತಿಯಿಂದ ಕಾಯಕಮಾಡಿ ಭಕ್ತಿಬಾಂಧವ್ಯವನ್ನು ಜಗದಲ್ಲಿ ಸ್ಥಾಪಿಸಲು ದುಡಿ-ಯಬೇಕು. ಇದಕ್ಕೆ ದಿನಾಲು ಸಾಧನೆಬೇಕು'--ಎಂಬಿತ್ಯಾದಿ ಉಪದೇಶಪರ ಮಾತು-ಗಳನ್ನು ಬಸವಣ್ಣನವರ ವಚನಗಳನ್ನಾಧರಿಸಿ ಈ ಗ್ರಂಥದಲ್ಲಿ ವಿವರಿಸಿರುವದಾಗಿ ಲೇಖಕರು ಬರೆದು ತಿಳಿಸಿದರು. ಗ್ರಂಥ ನೋಡಲು ಸಿಕ್ಕಿಲ್ಲ.

೧೦೪

**ಗ್ರಂಥ: ಬಸವ ಮಹಾನುಭಾವನ ಶುದ್ಧಿ ಮತ್ತು ಸಂಘಟನೆ**

**ಪ್ರಭೇದ:** ವಿಮರ್ಶಾತ್ಮಕ ಪ್ರಬಂಧ.

**ಕರ್ತೃ:** ಹರ್ಡೇಕರ (ಮಂಜಪ್ಪ)

**ಕಾಲ:** ಜ. ೧೮-೨-೧೮೮೫ ಮ. ೩-೧-೧೯೪೭

**ಸ್ಥಳ:** ವಿಜಾಪುರ

**ಪ್ರಕಾಶನ:** ವೀರಶೈವ ವಿದ್ಯಾಲಯ

**ಆವೃತ್ತಿ:** ಪ್ರಥಮ

**ಮಿತಿ:** ೧೯೩೭.

**ಮಾಲೆ:** ವೀರಶೈವ ವಿದ್ಯಾಲಯ ಗ್ರಂಥಮಾಲೆ, ೨೪

"ಈ ಹೊತ್ತಿಗೆ ಮಂಜಪ್ಪನವರ ಅಧ್ಯಯನ ಪರಿಪಕ್ವಗೊಂಡು ಅವರ ವಾದ ಸರಣಿ ಹೆಚ್ಚು ವಿಚಾರಾತ್ಮಕವೂ ತುಲನಾತ್ಮಕವೂ ಆಗಿತ್ತು. ಅವರ 'ಶುದ್ಧಿ ಮತ್ತು ಸಂಘಟನೆ' ಅವರು ೧೯೨೪ ರಲ್ಲಿ ಪ್ರಕಟಿಸಿದ 'ಶ್ರೀ ಬಸವ ಚರಿತ್ರೆ'ಗೆ ಪೂರಕ ಗ್ರಂಥ-ವಾಗಿತ್ತು. ಈ ಗ್ರಂಥದಲ್ಲಿ ಬಸವೇಶ್ವರರು ಮಾಡಿದ ಸಾಮಾಜಿಕ ಕಾರ್ಯಗಳನ್ನು

ಹೊಸರೀತಿಯಲ್ಲಿ ವಿವರಿಸಿದ್ದಾರೆ. ಅವರೇ ಮುನ್ನುಡಿಯಲ್ಲಿ ಹೇಳಿರುವಂತೆ 'ಈ ಪುಸ್ತಕವು ಕೇವಲ ಐತಿಹಾಸಿಕ ಮತ್ತು ಸಂಶೋಧನಾತ್ಮಕ–ಪದ್ಧತಿಯಿಂದಲೇ ಬರೆಯಲ್ಪಟ್ಟಿದೆ. ಆದ ಕಾರಣ ಅಂತಹ ದೃಷ್ಟಿಯುಳ್ಳ ವಾಚಕರಿಗೇನೇ ಈ ಪುಸ್ತಕ ಬರೆಯಲ್ಪಟ್ಟಿದೆ. ವೇದಾಗಮಗಳೆಲ್ಲ ದೇವರಿಂದ ಬಂದ ಗ್ರಂಥಗಳೆಂತಲೂ ಬಸವಾದಿ ಪ್ರಮಥರೆಲ್ಲ ಪವಾಡ ಪುರುಷರೇ ವಿನಾ ನಮ್ಮಂತೆ ಸೃಷ್ಟಿಯ ನಿಯಮವನ್ನನುಸರಿಸಿ ನಡೆದವರಲ್ಲವೆಂತಲೂ ಅವರ ಉಕ್ತಿಗಳೆಲ್ಲ ಅಂತಹ ಅವತಾರಿ ಪುರುಷರ ಆಚರಣೆಗೆ ಸಲ್ಲತಕ್ಕವುಗಳೇ ವಿನಾ ನಮ್ಮ ನಡವಳಿಕೆಯಲ್ಲಿ ಬರತಕ್ಕವುಗಳಲ್ಲವೆಂತಲೂ ತಿಳಿದ ಭಾವಿಕರಿಗೆ ಈ ಪುಸ್ತಕದಲ್ಲಿಯ ವಿಚಾರ ಸರಣಿಯೇ ಸರಿದೋರುವುದಿಲ್ಲ. ಈ ಪುಸ್ತಕದಲ್ಲಿ 'ಪ್ರಾಚೀನ ಭಾರತೀಯ ಜನಾಂಗ', 'ಬುದ್ಧನಿಂದ ಬಸವನ ವರೆಗೆ', 'ಬಸವಣ್ಣನವರ ಸುಧಾರಣೆ', 'ಬಸವಣ್ಣನವರ ನಂತರದ ಸ್ಥಿತಿ', 'ಮುಂದಿನ ಕಾರ್ಯ', 'ಉಪಸಂಹಾರ'– ಹೀಗೆ ಆರು ಪ್ರಕರಣಗಳಿವೆ. ಐತಿಹಾಸಿಕ ಹಿನ್ನೆಲೆಯಲ್ಲಿ ಸಮಾಜ ಸುಧಾರಕ ಬಸವಣ್ಣನವರ ಬೆಲೆಕಟ್ಟುವ ಶ್ರೇಷ್ಠವಾದ ವಿಮರ್ಶಾತ್ಮಕ ಗ್ರಂಥವಿದು. ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಬಸವಣ್ಣನವರ ಮಹತ್ವವನ್ನು ತಿಳಿಸುವ ಈ ಕೃತಿ ವಿದ್ವತ್ಪೂರ್ಣವಾಗಿದ್ದು, ಸಂಶೋಧಕರಿಗೆ ಉಪಯುಕ್ತವಾಗುವದರಲ್ಲಿ ಅನುಮಾನವಿಲ್ಲ."

—ಪ್ರೊ. ಗ. ಸ. ಹಾಲಪ್ಪನವರ 'ಪೀಠಿಕೆ'ಯಿಂದ

---

ಆಕರ :

೧. ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥ ಭಂಡಾರ, ಶ್ರೀ ಕುಂದಣಗಾರರ ಸಂಗ್ರಹ, ಕ್ರಮಾಂಕ, K6467.

೧. ರಾಷ್ಟ್ರಧರ್ಮದೃಷ್ಟಾರ ಹರ್ಡೆಕರ ಮಂಜಪ್ಪ, ಪು. ೬೬ ೩೩೫, ಮತ್ತು ೪೪೮

೧೦೫

## ಗ್ರಂಥ : ಬಸವ ಮಹಿಮಾ ತ್ರಿವಿಧಿ

**ಪ್ರಭೇದ :** ತ್ರಿಪದಿ **ಪದ್ಯ:** ೧೦೦

**ಕರ್ತೃ :** ಘನಮಠಾರ್ಯ

**ಕಾಲ :** ೧೮೨೮

**ಸಾರಾಂಶ :** ಇದು ಬಸವೇಶ್ವರನ ಮಹಿಮೆಯನ್ನೂ ಪವಾಡಗಳನ್ನೂ ಸ್ತುತಿಸುವ ಗ್ರಂಥ. ಅಪ್ರಕಟಿತ. ಅದರಲ್ಲಿಯ ಕೆಲವು ಪದ್ಯಗಳನ್ನು ಇಲ್ಲಿ ಉದ್ಧರಿಸುವೆವು:

ಶಿವನೇ ಬಸವಂ ಬಸವನೇ ಶಿವನೆಂದು ಶೃತಿ ।
ಸಿವಹವೆಡೆವಿಡದೆ ಪೊಗಳುತಿಹುದಾಗಿ ನಾ ।
ಸವಿರತಂ ಬಿಡದೆ ಸುತಿಸುವೆಸು ॥
ಶರಣಾಗತ ತ್ರಾಣ ಬಿರುದಾಂಕನೆಂದು ಶಿವ ।
ಶರಣರೊಳ್ ಕೀರ್ತಿವೆತ್ತ ಕಾರಣದಿ ।
ಬಸವರಸ ನಾ ನಿಮ್ಮಂಘ್ರಿಯ ಭಜಿಸೆ ॥
ನಿಮ್ಮ ಹೊಗಳಲ್ಕೆ ಹರಿ ಬ್ರಹ್ಮರಳವಲ್ಲವೆಸ ।
ಲು ಮರ್ತ್ಯರೊಳಗೆ ಕಿರಿಯರೊಳ್ ಕಿರಿಯ ನಾ ।
ನಿಮ್ಮ ಪೊಗಳಲ್ಕೇತರವಸಯ್ಯಾ ॥
ಶ್ರೀದಾಪ್ತನಾಜ್ಞೆಯಿಂ ಮಾದಾಂಬೆಸುತನೆನಿಸು ।
ತ್ತೈದೆ ಬಸವಾಹ್ವಯದಿ ಜಗದೊಳಗೆ ತೋರಿ ।
ದಾದಿ ಪವಾಡಗಳನುಸುರ್ವೆ ॥

---

ಆಕರ :

೧. ಬಸವ ತತ್ವರತ್ನಾಕರ, ಪು. ೫೫೩

೧೦೬

**ಗ್ರಂಥ : ಬಸವ ರಗಳೆ.**

**ಕರ್ತೃ :** ಪಾಲಕುರ್ಕಿ ಸೋಮನಾಥ

**ಕಾಲ :** ಸು. ೧೧೯೫

**ಸಾರಾಂಶ :** ಸೋಮನಾಥನ ಹೆಸರಿನಲ್ಲಿ ಕಂಡುಬರುವ ರಗಳೆಗಳಲ್ಲಿ ಇದೂ ಒಂದು. "ಈ ರಗಳೆಯ ಪ್ರತಿ ಪಾದವನ್ನೂ-ಮಾತ್ರಾಗಣವಾಗಿ ಎಣಿಸಿದರೆ ಕನ್ನಡದ ಲಲಿತರಗಳೆಯನ್ನೂ ತೆಲಗು ಛಂದಸ್ಸಿನ ಪ್ರಕಾರ ತುರಗವಲ್ಲನ ರಗಳೆಯನ್ನೂ ಹೋಲುತ್ತದೆ. ಉದಾಹರಣೆ—

ಶ್ರೀ ವೃಷಾಧಿನಾಯಕ ಪ್ರಸಿದ್ಧಭಾವ । ಶರಣು ಬಸವ ।
ತಾವಕಾಂಘ್ರಿಸೇವಕದಾವದಾವ । ಶರಣು ಬಸವ ।
ನಂದಿತ ದ್ವಿತೀಯ ಶಂಭು ನಾಮ ಧೇಯ । ಶರಣು ಬಸವ ।
ವಂದಿತ ತ್ರಿಲೋಕ ವಿವಿಧ ವರನಿಕಾಯ । ಶರಣು ಬಸವ ॥

ಈ ಗದ್ಯಾರಂಭದಲ್ಲಿ—

ಶ್ರೀ ವೃರಾಸುದೇವರಾಜ ಸಿದ್ಧ ಸಾಧ್ಯ ಯಕ್ಷರ ।
ಕ್ಷೋವಿಹಂಗರಾಟ್ಪತಂಗ ತಂಗ ಸೋಮಧೂಮಕರ ಮರು ।
ಜ್ಜೀವಿತೇಶ ವಿಧೃತ-ಪಾಶಸೇವಿತೋದ್ಯದಂಘ್ರಿರಾ ।
ಜೀವ ನಿಮ್ಮನಾಂ ಪೊಗಳ್ವೆಂ ಶ್ರೀ ವೃಷಾಧಿನಾಯಕಾ ॥ ಎಂದೂ

ಗದ್ಯಾಂತದಲ್ಲಿ :—

ಶರಣಸ್ತವ ಕಲ್ಪಕುಜಾಂ-ಕುರಪದ ಶಾಖಾಭಿಜಾತ
ನವಕುಸುಮಾಷ್ಟೋತ್ತರ ಶತನಾಮಂಗಳ ಬಸವರ
ಸಂಗರ್ಪಿಸಿದ ಪಾಲ್ಕುರಿಕಿ ಸೋಮಾಂಕಂ ॥ ಎಂದೂ

—ಬರೆದಿರುವದರಿಂದ ಇದೂ ಸಹ ಕನ್ನಡದ್ದೇ ಆಗಿದೆ."

—ಶ್ರೀ ಬಂಡಾರು ತಮ್ಮಯ್ಯನವರು

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೧೭; ಸಂಚಿಕೆ ೭; ಪು. ೪೪೨. ಅಕ್ಟೋಬರ ೧೯೫೪

೧೦೭

**ಗ್ರಂಥ : ಬಸವ ರಗಳೆ**

**ಪ್ರಭೇದ :** ರಗಳೆ ?

**ಕರ್ತೃ :** ಹಿರೇಮಠ ( ಕರಿಬಸವಾರ್ಯ ನೂರೊಂದಯ್ಯ )

**ಕಾಲ :** ಜ. ೧೭೪೫ ಮ. ೧೮೪೦

**ಸಾರಾಂಶ:** ಕವಿಗಳು ಕಲಬುರ್ಗಿ ಜಿಲ್ಹೆಯ ಚಿಂಚೋಳಿ ತಾಲೂಕಿನ ಐನಿಲ ಗ್ರಾಮವಾಸಿಗಳಾಗಿದ್ದರೆಂದು ಅವರ ಚರಿತ್ರೆಯನ್ನು ಬರೆದ ಚಿಂಚೋಳಿಯ ಶ್ರೀ ಬಸವಪ್ಪ ಪಾಟೀಲ ಹುಡೇದ ಹಳ್ಳಿಕರ ಇವರು ಹೇಳಿರುವರು. ಪ್ರಸ್ತುತ ಗ್ರಂಥವು ಕವಿಗಳ ಮನೆತನದ ವಂಶಿಕರಾದ ಚಿಂಚೋಳಿ ಗುರುಲಿಂಗಯ್ಯನವರಲ್ಲಿ ಜತನವಾಗಿರುವದೆಂದು ತಿಳಿದಿದೆ. ಅಪ್ರಕಟಿತ.

---

ಆಕರ :

೧. ಶಿವಾನುಭವ, ಸಂಪುಟ ೬; ಸಂಚಿಕೆ ೪; ಪು. ೨೩೩-೨೩೯. ಅಕ್ಟೋಬರ ೧೯೩೧.

## ೧೦೮

**ಗ್ರಂಥ:** ಬಸವರಾಜ ದೇವರ ರಗಳೆ

**ಪ್ರಭೇದ:** ರಗಳೆ **ಸ್ಥಲ:** ೧೩

**ಕರ್ತೃ:** ಹರಿಹರ

**ಕಾಲ:** ೧೨೧೬

**ಸಂಪಾದಕ:** ವೆಂಕಣ್ಣಯ್ಯ ( ಟಿ. ಎಸ್. )

**ಆಕಾರ:** ೧೮×೧೨ ಸೆ. ಮಿ.

**ಪುಟ:** XXXXV+೧೦೫=೧೫೦

**ಸಾಲು:** ೨೪

**ಅಕ್ಷರ:** ೧೮

**ಸ್ಥಳ:** ಮೈಸೂರು

**ಪ್ರಕಾಶಕ:** ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

**ಆವೃತ್ತಿ:** ಪಂಚಮ

**ಮಿತಿ:** ೧೯೬೫

**ಬೆಲೆ:** ೨=೦೦ ರೂ.

**ಮಾಲೆ:** ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ೧೩

**ಸಾರಾಂಶ:** ಬಸವಣ್ಣನವರ ಜೀವನ ಚರಿತ್ರೆಯು ಇದರಲ್ಲಿ ನಿರೂಪಿತ-ವಾಗಿದೆ. ಭೀಮ, ಸಿಂಗಿರಾಜ, ಚನ್ನಪ್ಪ–ಇತ್ಯಾದಿ ಕವಿಗಳು ಬರೆದ ಬಸವಣ್ಣ-ನವರ ಮೇಲಿನ ಕಾವ್ಯಗಳಿಗೂ ಇದಕ್ಕೂ ಕೆಲವು ವಿಷಯಗಳಲ್ಲಿ ವ್ಯತ್ಯಾಸ ಕಂಡು-ಬರುತ್ತದೆ.

ವ್ಯತ್ಯಾಸಗಳಿಂದೊಡಗೂಡಿದ ಕಥಾ ಸಾರಾಂಶವನ್ನು ಇಲ್ಲಿ ಕೊಡುವೆವು: ಶಿವನು ಒಡ್ಡೋಲಗದ ಗಣಗಳಿಗೆ ಹೂ ಹಂಚಲು ನಿರತನಾದ **ವೃಷಭಮುಖನೆಂಬ ಗಣಪನು** ಅವಸರದಲ್ಲಿ ಕುಮಾರಸ್ವಾಮಿಯನ್ನು ಮರೆತನು. ಈ ತಪ್ಪಿಗಾಗಿ ಶಿವನಾಜ್ಞೆಯಂತೆ ಮಾದಿರಾಜ ಮಾದಲಾಂಬಿಕೆಯರಿಗೆ ಪುತ್ರನಾಗಿ ಬಸವಣ್ಣ ಬಾಗೆವಾಡಿ-ಯಲ್ಲಿ ಜನಿಸಿದನು. **ಬಾಲ್ಯದಲ್ಲಿ ತಂದೆತಾಯಿಗಳನ್ನು ಕಳೆದುಕೊಂಡು,** ಪ್ರಾಯದಲ್ಲಿ ಜನ್ನಿವಾರವನ್ನು ಹರಿದು ಹಾಕಿ ಕಪ್ಪಡಿ ಸಂಗಮಕ್ಕೆ ಬಂದರು. ಅಲ್ಲಿಯ ಶಿವಾಲಯದಲ್ಲಿ ಈಶಾನ್ಯ ಗುರುಗಳ ದರ್ಶನವಾಯಿತು; ನಂದಿಯ ಮುಖದಿಂದ

ಈ ಗದ್ಯಾರಂಭದಲ್ಲಿ—

ಶ್ರೀ ವೃರಾಸುದೇವರಾಜ ಸಿದ್ಧ ಸಾಧ್ಯ ಯಕ್ಷರ ।
ಕ್ಷೋವಿಹಂಗರಾಟ್ಪತಂಗ ತಂಗ ಸೋಮಧೂಮಕರ ಮರು ।
ಜ್ಜೀವಿತೇಶ ವಿಧೃತ-ಪಾಶಸೇವಿತೋದ್ಯದಂಘ್ರಿರಾ ।
ಜೀವ ನಿಮ್ಮನಾಂ ಪೊಗಳ್ವೆಂ ಶ್ರೀ ವೃಷಾಧಿನಾಯಕಾ ॥ ಎಂದೂ

ಗದ್ಯಾಂತದಲ್ಲಿ :—

ಶರಣಸ್ತವ ಕಲ್ಪಕುಜಾಂ-ಕುರಪದ ಶಾಖಾಭಿಜಾತ
ನವಕುಸುಮಾಷ್ಟೋತ್ತರ ಶತನಾಮಂಗಳ ಬಸವರ
ಸಂಗರ್ಪಿಸಿದ ಪಾಲ್ಕುರಿಕಿ ಸೋಮಾಂಕಂ ॥ ಎಂದೂ

—ಬರೆದಿರುವವರಿಂದ ಇದೂ ಸಹ ಕನ್ನಡದ್ದೇ ಆಗಿದೆ."

—ಶ್ರೀ ಬಂಡಾರು ತಮ್ಮಯ್ಯನವರು

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೧೭; ಸಂಚಿಕೆ ೭; ಪು. ೪೪೨. ಅಕ್ಟೋಬರ ೧೯೫೪

೧೦೭

**ಗ್ರಂಥ :** **ಬಸವ ರಗಳೆ**

**ಪ್ರಭೇದ :** ರಗಳೆ ?

**ಕರ್ತೃ :** ಹಿರೇಮಠ ( ಕರಿಬಸವಾರ್ಯ ನೂರೊಂದಯ್ಯ )

**ಕಾಲ :** ಜ. ೧೭೪೫ ಮ. ೧೮೪೦

**ಸಾರಾಂಶ :** ಕವಿಗಳು ಕಲಬುರ್ಗಿ ಜಿಲ್ಹೆಯ ಚಿಂಚೋಳಿ ತಾಲೂಕಿನ ಐನಿಲ ಗ್ರಾಮವಾಸಿಗಳಾಗಿದ್ದರೆಂದು ಅವರ ಚರಿತ್ರೆಯನ್ನು ಬರೆದ ಚಿಂಚೋಳಿಯ ಶ್ರೀ ಬಸವಪ್ಪ ಪಾಟೀಲ ಹುಡೇದ ಹಳ್ಳಿಕರ ಇವರು ಹೇಳಿರುವರು. ಪ್ರಸ್ತುತ ಗ್ರಂಥವು ಕವಿಗಳ ಮನೆತನದ ವಂಶಿಕರಾದ ಚಿಂಚೋಳಿ ಗುರುಲಿಂಗಯ್ಯನವರಲ್ಲಿ ಜತನವಾಗಿರುವದೆಂದು ತಿಳಿದಿದೆ. ಅಪ್ರಕಟಿತ.

---

ಆಕರ :

೧. ಶಿವಾನುಭವ, ಸಂಪುಟ ೬; ಸಂಚಿಕೆ ೪; ಪು. ೨೩೩-೨೩೯. ಅಕ್ಟೋಬರ ೧೯೩೧.

೧೦೮

**ಗ್ರಂಥ :** ಬಸವರಾಜ ದೇವರ ರಗಳೆ

**ಪ್ರಭೇದ :** ರಗಳೆ **ಸ್ಥಲ :** ೧೩

**ಕರ್ತೃ :** ಹರಿಹರ

**ಕಾಲ :** ೧೨೧೬

**ಸಂಪಾದಕ :** ವೆಂಕಣ್ಣಯ್ಯ ( ಟಿ. ಎಸ್. )

**ಆಕಾರ :** ೧೮×೧೨ ಸೆ. ಮಿ.

**ಪುಟ :** XXXXV+೧೦೫=೧೫೦

**ಸಾಲು :** ೨೪

**ಅಕ್ಷರ :** ೧೮

**ಸ್ಥಳ :** ಮೈಸೂರು

**ಪ್ರಕಾಶಕ :** ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

**ಆವೃತ್ತಿ :** ಪಂಚಮ

**ಮಿತಿ :** ೧೯೬೫

**ಬೆಲೆ :** ೨=೦೦ ರೂ.

**ಮಾಲೆ :** ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ೧೩

**ಸಾರಾಂಶ :** ಬಸವಣ್ಣನವರ ಜೀವನ ಚರಿತ್ರೆಯು ಇದರಲ್ಲಿ ನಿರೂಪಿತ-ವಾಗಿದೆ. ಭೀಮ, ಸಿಂಗಿರಾಜ, ಚನ್ನಪ್ಪ–ಇತ್ಯಾದಿ ಕವಿಗಳು ಬರೆದ ಬಸವಣ್ಣ-ನವರ ಮೇಲಿನ ಕಾವ್ಯಗಳಿಗೂ ಇದಕ್ಕೂ ಕೆಲವು ವಿಷಯಗಳಲ್ಲಿ ವ್ಯತ್ಯಾಸ ಕಂಡು-ಬರುತ್ತದೆ.

ವ್ಯತ್ಯಾಸಗಳಿಂದೊಡಗೂಡಿದ ಕಥಾ ಸಾರಾಂಶವನ್ನು ಇಲ್ಲಿ ಕೊಡುವೆವು: ಶಿವನು ಒಡ್ಡೋಲಗದ ಗಣಗಳಿಗೆ ಹೂ ಹಂಚಲು ನಿರತನಾದ **ವೃಷಭಮುಖನೆಂಬ ಗಣಪನು** ಅವಸರದಲ್ಲಿ ಕುಮಾರಸ್ವಾಮಿಯನ್ನು ಮರೆತನು. ಈ ತಪ್ಪಿಗಾಗಿ ಶಿವನಾಜ್ಞೆಯಂತೆ ಮಾದಿರಾಜ ಮಾದಲಾಂಬಿಕೆಯರಿಗೆ ಪುತ್ರನಾಗಿ ಬಸವಣ್ಣ ಬಾಗೆವಾಡಿ-ಯಲ್ಲಿ ಜನಿಸಿದನು. **ಬಾಲ್ಯದಲ್ಲಿ ತಂದೆತಾಯಿಗಳನ್ನು ಕಳೆದುಕೊಂಡು,** ಪ್ರಾಯದಲ್ಲಿ ಜನ್ನಿವಾರವನ್ನು ಹರಿದು ಹಾಕಿ ಕಪ್ಪಡಿ ಸಂಗಮಕ್ಕೆ ಬಂದರು. ಅಲ್ಲಿಯ **ಶಿವಾಲಯದಲ್ಲಿ** ಈಶಾನ್ಯ ಗುರುಗಳ ದರ್ಶನವಾಯಿತು; ನಂದಿಯ ಮುಖದಿಂದ

ಲಿಂಗಧಾರಣವಾಯಿತು. ಶಿವನು ಸ್ವಪ್ನದಲ್ಲಿ ಕಾಣಿಸಿಕೊಂಡು ಮಂಗಳವಾಡಕ್ಕೆ ಹೋಗುವಂತೆ ಅಪ್ಪಣೆಯಿತ್ತನು.

ಮಂಗಳವಾಡದಲ್ಲಿ ಬಿಜ್ಜಳರಾಯನ ಕರಣಶಾಲೆಯಲ್ಲಿ ಬಸವಣ್ಣನವರ ಗಣಿತದಲ್ಲಿಯ ಪರಿಜ್ಞಾನ ಪ್ರಕಟವಾಯಿತು, **ಅರ್ಥಮಂತ್ರಿ ಸಿದ್ಧದಂಡಾಧಿಪನು** ಬಸವಣ್ಣನನ್ನು ಮೆಚ್ಚಿಕೊಂಡು ಬಿಜ್ಜಳನಿಗೆ ಪರಿಚಯಮಾಡಿಕೊಟ್ಟು, ವರುಷಕ್ಕೆ ೧೦೧ ಹೊನ್ನು ಗೊತ್ತುಮಾಡಿ ತನ್ನ ಭಂಡಾರದಲ್ಲಿ ನಿಯಮಿಸಿಕೊಂಡನು. ಮುಂದೆ **ಸಿದ್ಧದಂಡಾಧೀಶನು** ಮಕ್ಕಳಿಲ್ಲದೆ ಮೃತ ಪಡಲು ಆ ಸ್ಥಾನಕ್ಕೆ ಬಸವಣ್ಣನವರನ್ನು ನಿಯಮಿಸಲಾಯಿತು.

ಆಮೇಲೆ ಗಂಗಾದೇವಿ ಮತ್ತು ಮಾಯಿದೇವಿಯರ ಸಂಗಡ ಮದುವೆಯಾಯಿತು. ಬಸವಣ್ಣನವರ ಭಕ್ತಿಯ ಪ್ರಭಾವ ದಿಗ್ದೆಶೆಗಳಲ್ಲಿ ಹಬ್ಬಿತು. ದೇಶವಿದೇಶಗಳಿಂದ ಶರಣರು ಮಂಗಳವಾಡಕ್ಕೆಬಂದರು. ಬಸವಣ್ಣನವರ ಲಿಂಗ ಜಂಗಮ ಒಂದೇ ಎಂದು ಭಾವಿಸಿದರು. ಜಂಗಮಪ್ರಾಣಿಯಾದರು. ಲಿಂಗವಿದ್ದವರನ್ನೆಲ್ಲ ಒಂದೇ ಎಂದು ಬಗೆದರು. ಹೀಗಾಗಿ ಬಸವಣ್ಣನವರು ಕೀರ್ತಿಲತೆ ಕುಡಿಬಿಟ್ಟಿತು. ವಿರೋಧಿಗಳು ಬಿಜ್ಜಳರಾಯನಿಗೆ ಬಸವಣ್ಣನವರ ಬಗೆಗೆ ಚಾಡಿ ಹೇಳಿದರು. ಪವಾಡಪುರುಷರಾದ ಬಸವಣ್ಣನವರು ಚಾಡಿಕೋರರನ್ನು ಭಂಗಿಸಿ ಬಯಲಿಗೆಳೆದರು. ರಾಜನು ಸಂಪ್ರೀತನಾದನು.

ಬಸವಣ್ಣನವರ ಭಕ್ತಿಗೆ ಸಂಪ್ರೀತನಾದ ಸಂಗಮೇಶ್ವರನು ಜಂಗಮಾಕಾರದಲ್ಲಿ ಬಂದು ''ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ" ಎಂದು ಕರೆಯಲು ಅವರು ಹೋಗಲಿಲ್ಲ. ಮುಂದೆ ಬಿಜ್ಜಳನ ವಧೆಯಾದನಂತರ ಶಿವನೊಳಗೆ ಬೆರೆದು ಬಯಲಾದರು.

ಪೀಠಿಕೆಯಲ್ಲಿ 'ವಚನಕಾರರು- ಬಸವಣ್ಣ' 'ಬಸವಣ್ಣನವರನ್ನು ಕುರಿತು ವೀರಶೈವ ಪುರಾಣಗಳು', 'ಬಸವರಾಜದೇವರ ರಗಳೆಯ ಕರ್ತೃ ಹರಿಹರ' 'ಬಸವರಾಜದೇವರ ರಗಳೆಯ ಕಥಾ ಸಾರಾಂಶ' 'ಈ ರಗಳೆಯ ಕಥೆಗೂ ಇತರ ಕಥೆಗಳಿಗೂ ಇರುವ ವ್ಯತ್ಯಾಸ,' 'ವಿಮರ್ಶೆ'' ಪಾಠಶೋಧನೆ'— ಈ ತಲೆಕಟ್ಟುಗಳಿಗನುಸರಿಸಿ ವಿದ್ವತ್ಪೂರ್ಣವಾದ ವಿವೇಚನೆಯಿದೆ. ಗ್ರಂಥಾಂತ್ಯದಲ್ಲಿ ಕಠಿಣಪದಗಳಿಗೆ ಅರ್ಥವನ್ನು ಕೊಟ್ಟಿದೆ.

## ೧೦೯

**ಗ್ರಂಥ :** ಬಸವರಾಜನ ಪವಾಡ

**ಪ್ರಭೇದ :** ಗದ್ಯ

**ಕರ್ತೃ :** ಮುರುಳಸಿದ್ಧ

ಕಾಲ : ೧೭೦೦

ಆಕಾರ : ಕಾಗದ ೧೪·೧×೮·೯ ಇಂಚು

ಪುಟ : ೧ ರಿಂದ ೬

ಸಾಲು : ೨೦

ಅಕ್ಷರ : ೪೨

ಸಾರಾಂಶ : ಗ್ರಂಥದ ಬಗೆಗೆ ಕವಿಚರಿತೆಕಾರರು ಹೇಳಿದ ವಿಷಯವನ್ನಿಲ್ಲಿ ಸಂಗ್ರಹಿಸುತ್ತೇವೆ:

ಇದರಲ್ಲಿ ಬಸವನು ಕಾಯ ವಚನ ಮನಸ್ಸುಗಳಿಂದ ನಡೆಸಿದ ೩೬೦ ಪವಾಡಗಳು ವರ್ಣಿತವಾಗಿವೆ. ಪೂರ್ವ ಗ್ರಂಥಗಳಿಂದ ಈ ಅಂಶಗಳನ್ನು ಸಂಗ್ರಹಿಸಿ ಬರೆದಂತೆ ಕವಿ ಈ ಪದ್ಯದಲ್ಲಿ ಹೇಳುತ್ತಾನೆ:

ಬಸವ ಪುರಾಣದೊಳ್ ವಸುಮತೀಶ್ವರ ಮಂಡನ ಸಿಂಗಿರಾಜನಿ ।
ರ್ಮಿಸಿದ ಪುರಾಣದೊಳ್ ಸಕಳಭಕ್ತ ಮಹೇಶ್ವರರಿಂದ ಪೇಙ್ದಪೆಂ ।
ಪೆಸೆವ ಕಥಾಳಿಯಲ್ಲಿ ವಚನೌಘದೊಳಿರ್ದ ಮಹತ್ವಮಾಲೆಯಂ ।
ಒಸೆದು ಸಮಸ್ತಭಕ್ತರಱಿವಂತೆ ವಿಳಾಸದಿ ಪೇಳ್ವೆನಾನಿದಂ ॥

ಆರಂಭದಲ್ಲಿ ಈ ವಾಕ್ಯವಿದೆ:

ಶ್ರೀಮದನುಪಮ ಕಲ್ಯಾಣಪುರವರಾಧೀಶ ಮಹಾಮಹಿಮ ಬಸವರಾಜ ದೇವರು ಶಿವನ ಆಜ್ಞೆಯಿಂದ ನಂದಿಕೇಶ್ವರರೆ ಭೂಲೋಕದಲ್ಲಿ ಮಾದರಸ ಮಾದ-ಲಾಂಬೆಯರ ಗರ್ಭದಲ್ಲಿ ಬಸವನಾಮದಲ್ಲವತರಿಸಿ ಕೆಳಗೆ ಉದಾಹರಿಸುವಂತೆ ೩೬೦ ಪವಾಡಗಳ ನಡೆಸಿ ಕಪ್ಪಟಿ ಸಂಗಮನಾಥ ಲಿಂಗದಲ್ಲಿ ಐಕ್ಯರಾದರು.

ಗ್ರಂಥದ ಸ್ವಲ್ಪ ಭಾಗ:

೧. ಗಾನಲೋಲನಾದ ಸಂಗಮನನ್ನು ಜಂಗಮಾಕಾರದಿಂದ ಕಂಡು ಆತನಿಂದ ಷಟ್ಸ್ಥಲ ಶಾಸ್ತ್ರವ ತಿಳಿದು ಅಭ್ಯಾಸಿಸಿದ ಪ್ರಸ್ತಾವ ( ವಾಕ್ಸಂಬಂಧ ).

೨. ಲಿಂಗಧಾರಿಯಾದ ಕಾರಣ ಮುಂಜಿಯ ಮಾಡುವೆನೆಂಬ ಬಂಧುಗಳ ತಿರಸ್ಕರಿಸಿ ಅಕ್ಕನಾಗಮ್ಮನವರಿಂದ ಕೂಡಿ ಸಂಗಮಕ್ಕೆ ಬಂದುದು ( ವಾಕ್ಸಂಬಂಧ )

೩. ಹರುಷದಿಂದಲ್ಲಮಪ್ರಭು ಬರುವರೆಂದು ತಾನೆ ತಿಳಿದು ಶೂನ್ಯಸಿಂಹಾ-ಸನದ ನಿರ್ಮಾಣ ಮಾಡಿದುದು ( ಕಾಯ ಸಂಬಂಧ ).

೪. ಈಶನ ಜಂಗಮ ಬೇಡಿದುದಕ್ಕೆ ೧೦ ಖಂಡುಗ ಜೋಳವ ಮುತ್ತು ಮಾಡಿ ಸಮರ್ಪಣ ಮಾಡಿ ಮೆಱೆದಿರ್ದುದು ( ಮನಸ್ಸಂಬಂಧ ).

ಕ.ಹ.ವ. ಸೂಚಿಯಲ್ಲಿ 'ಬಸವೇಶ್ವರನ ಪವಾಡಗಳು' ಈ ತಲೆಕಟ್ಟಿನ ಕೆಳಗೆ **೩೬ ಪವಾಡ**ಗಳೆಂದು ಹೇಳಿದೆ. ಅಳತೆ, ಸಾಲು, ಅಕ್ಷರ ಇತ್ಯಾದಿ ಸಂಗತಿಗಳ ಬಗೆಗೆ ಈ ಪ್ರತಿಯನ್ನು ಪ್ರಸ್ತುತ ಪ್ರಸಂಗದಲ್ಲಿ ತೆಗೆದುಕೊಂಡಿದೆ. ಕರ್ನಾಟಕ ಕವಿ ಚರಿತೆ ಭಾ.೩, ಪು. ೪೨೬ರಲ್ಲಿ ಹೇಳಿದ 'ಬಸವೇಶ್ವರನ ಪವಾಡ' ಎಂಬ ಗ್ರಂಥ ಇದೇ ಆಗಿರಬಹುದೇ?

---

ಆಕರ :

೧. ಕರ್ನಾಟಕ ಕವಿಚರಿತೆ, ಭಾ. ೨; ಪು. ೫೩೦, ಭಾ. ೩, ಪು. ೪೨೬
೨. ಬಸವತತ್ವರತ್ನಾಕರ, ಪು. ೫೮೫
೩. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚೀ ಭಾ. ೩, ಪು. ೪೦

## ೧೧೦

**ಗ್ರಂಥ: ಬಸವರಾಜ ರಗಳೆ**

**ಪ್ರಭೇದ:** ರಗಳೆ

**ಸಾಲು:** ೫೭

**ಸಾರಾಂಶ:** 'ನಿತ್ಯಮುದ್ಗುರು ಶಾಂತಾ' ಎಂಬ ಅಂಕಿತದಲ್ಲಿ ಇದು ರಚಿತವಾಗಿರುವದಾಗಿ ತಿಳಿದಿದೆ. ಅಪ್ರಕಟಿತ.

---

ಆಕರ:

Descriptive catalogue of the Kannada Manuscripts in the Osmania University Library, No. 61.

## ೧೧೧

**ಗ್ರಂಥ: ಬಸವರಾಜ ವಿಜಯು**

**ಪ್ರಭೇದ:** ಗದ್ಯ

**ಕರ್ತೃ:** ಕರಿಬಸವಶಾಸ್ತ್ರಿ ( ನಂಜನಗೂಡು ರುದ್ರಶಾಸ್ತ್ರಿ )

**ಕಾಲ:** ಜ. ೧೮೭೨ ಮ. ೯-೫-೧೯೩೩ ?

**ಆಕಾರ:** ೨೦×೧೩ಸೆ. ಮಿ.

**ಪುಟ:** ೬+೩೪೮=೩೫೪

ಸಾಲು : ೨೭

ಅಕ್ಷರ : ೨೬

ಸ್ಥಳ : ಮೈಸೂರು

ಪ್ರಕಾಶಕ : ಕರ್ತೃ

ಆವೃತ್ತಿ : ಚತುರ್ಥ

ಮಿತಿ : ೧೯೨೪

ಬೆಲೆ : ೧-೮-೦ ರೂ.

ಸಾರಾಂಶ : ಸೋಮಾರಾಧ್ಯನ ತೆಲುಗು ಬಸವ ಪುರಾಣ, ಭೀಮಕವಿಯ ಕನ್ನಡ ಬಸವ ಪುರಾಣ, ಶಂಕರ ಕವಿಯ ಸಂಸ್ಕೃತ ಬಸವೇಶ ವಿಜಯ ಮತ್ತು ಷಡಕ್ಷರ ದೇವನ ವೃಷಭೇಂದ್ರ ವಿಜಯ—ಇವುಗಳನ್ನು ಅವಲೋಕಿಸಿ ಈ ಗದ್ಯಗ್ರಂಥ ಬರೆದಿರುವದಾಗಿ ಲೇಖಕರು ಹೇಳಿದ್ದಾರೆ.

" ಈ ಮೇಲೆ ಕಂಡ ಗ್ರಂಥಗಳೆಲ್ಲವೂ ಪ್ರೌಢಗಳಾದುದರಿಂದ ಕೇವಲ ಸಂಸ್ಕೃತ ಕರ್ಣಾಟಕಾಂಧ್ರ ಭಾಷಾವ್ಯುತ್ಪನ್ನರಾದ ಜನರಿಗೆ ಮಾತ್ರ ಓದಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಿದ್ದಿತೇ ಹೊರತು ಸಾಮಾನ್ಯವಾಗಿ ಅಕ್ಷರಜ್ಞರಾದ ಕನ್ನಡಿಗರಿಗೆ ಸುಲಭ-ಸಾಧ್ಯವಾಗಿರಲಿಲ್ಲ. ಈ ಬಸವರಾಜನ ಚರಿತ್ರವನ್ನೂ ಶಿವಶರಣರ ಚರಿತ್ರವನ್ನೂ ಎಷ್ಟು ವೇಳೆ ಓದಿದರೂ ಕೇಳಿದರೂ ತೃಪ್ತಿಗೊಳ್ಳದೆ ಅನೇಕ ಸುಹೃದಯರಿಗೆ ಸುಲಭ-ಸಾಧ್ಯವಾದ ಗ್ರಂಥವೊಂದಿಲ್ಲದಿದ್ದುದು ದೊಡ್ಡ ಕೊರತೆಯಾಗಿದ್ದಿತು. ಇದನ್ನು ಪರಿ-ಹರಿಸುವದು ಅತ್ಯವಶ್ಯಕರವಾದುದೆಂದು ತಿಳಿದು, ಮೇಲೆ ಕಂಡ ಗ್ರಂಥಗಳಲ್ಲಿ ಪ್ರತಿ-ಪಾದಿಸಲ್ಪಟ್ಟಿದ್ದ ಚರಿತ್ರವನ್ನೇ ಆ ಶಿವಶರಣರ ಕೃಪಾಬಲದಿಂದ ಬಿಡುಗನ್ನಡ ನುಡಿಯ ರೂಪವಾಗಿ ಬರೆದು ಈ " ಬಸವರಾಜ ವಿಜಯ " ವೆಂಬ ಕೃತಿಯನ್ನೆಸ-ಗಿರುತ್ತೇನೆ. ಈ ನನ್ನ ರಚನೆಯು ಕಬ್ಬಿನಲ್ಲಿದ್ದ ಅಮೃತಸಾರವನ್ನು ಹೊರಪಡಿಸಿ, ರಸಾಸ್ವಾದನ ಚಿತ್ತರ ಹಸ್ತಕ್ಕೆ ಅನುಕೂಲಿಸಿಕೊಟ್ಟಂತೆಯೇ ಹೊರತು ಇದರಲ್ಲಿ ನನ್ನ ಸ್ವಕಪೋಲಕಲ್ಪಿತ ಕೃತಿಯೇನೂ ಇರುವದಿಲ್ಲ. "

—ಲೇಖಕರ 'ಪೀಠಿಕೆ'ಯಿಂದ

ಇದರಲ್ಲಿ ಮುಖ್ಯವಾಗಿ ೮೦-೮೫ ಶಿವಶರಣರ ಮುಖ್ಯ ಕಥೆಗಳು ಇತರ ಉಪ-ಕಥೆಗಳೊಡನೆ ವಿವರಿಸಲ್ಪಟ್ಟಿವೆ. ಬಸವಣ್ಣನವರು ಕೇಂದ್ರವ್ಯಕ್ತಿಯಾಗಿದ್ದಾರೆ.

ಗ್ರಂಥಕರ್ತರ ಭಾವಚಿತ್ರವಿದೆ.

**ನೋಡು :** ೧. ಕನ್ನಡ ಬಸವೇಶ ವಿಜಯವು (ಕನ್ನಡ)
೨. ಸಟೀಕ ವೃಷಭೇಂದ್ರ ವಿಜಯ (ಕನ್ನಡ)
೩. ಸಟೀಕ ಬಸವೇಶ ವಿಜಯಃ (ಸಂಸ್ಕೃತ-ಕನ್ನಡ)
೪. ಬಸವೇಶ ವಿಜಯಃ (ಸಂಸ್ಕೃತ-ಕನ್ನಡ)

---

ಆಕರ :
೧. ಕರ್ನಾಟಕ ಕಾಲೇಜ ಕೇಂದ್ರ ಗ್ರಂಥಭಂಡಾರ, ನಂ. VIII-೪೩೬
೨. ಗ್ರಂಥಕರ್ತರ ಚರಿತ್ರ ಕೋಶ, ಪು. ೧೪

೧೧೨

**ಗ್ರಂಥ :** ಬಸವರಾಜ ವಿಜಯಂ

**ಪ್ರಭೇದ :** ಚಂಪೂ **ಆಶ್ವಾಸ:** ೪೨ **ಪದ :** ೩೫೦೩

**ಕರ್ತೃ :** ಷಡಕ್ಷರದೇವ

**ಕಾಲ :** ೧೬೬೫

**ಸಂಪಾದಕ :** ಹಿರೇಮಠ (ಆರ್. ಸಿ.)

**ಆಕಾರ :** ೨೧×೧೩ ಸೆ. ಮಿ.

**ಪುಟ :** ....+೬೩೮+೨೪

**ಸ್ಥಳ :** ಧಾರವಾಡ

**ಪ್ರಕಾಶಕ :** ಕರ್ನಾಟಕ ವಿಶ್ವವಿದ್ಯಾಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೭

**ಸಾರಾಂಶ :** "ಬಸವರಾಜ ವಿಜಯವು ಕನ್ನಡದ ಉತ್ತಮೋತ್ತಮವಾದ ಕೃತಿಗಳಲ್ಲಿ ಒಂದು. ಈ ಕಾವ್ಯವನ್ನು ರಚಿಸುವಾಗ ಕವಿಯ ಮನಸ್ಸು ಒಳ್ಳೆಯ ಪರಿಪಕ್ವಾವಸ್ಥೆಗೆ ಬಂದಿದೆ; ಕಾವ್ಯಸಿದ್ಧಿಯನ್ನು ಪಡೆದಿದೆ. ಬಸವಣ್ಣನವರ ವ್ಯಕ್ತಿತ್ವವನ್ನು ಚಿತ್ರಿಸುವಲ್ಲಿ, ಆತನ ಜೀವನದ ಸುತ್ತು ಸಮಕಾಲೀನ ಶರಣರ ಜೀವನ ಚರಿತ್ರೆಗಳನ್ನು ಹೆಣೆಯುವಲ್ಲಿ ಕವಿ ಅದ್ಭುತವಾದ ಪ್ರತಿಭೆಯನ್ನು ತೋರಿಸಿದ್ದಾನೆ. ರಾಜಶೇಖರ ವಿಳಾಸದಲ್ಲಿ ಕಂಡುಬರುವ ವರ್ಣನಾ ವೈಪುಲ್ಯ ಈ ಕಾವ್ಯದಲ್ಲಿಲ್ಲ.

ಕವಿಯ ದೃಷ್ಟಿ ನೇರವಾಗಿ ತಾನು ಚಿತ್ರಿಸುವ ಪಾತ್ರಗಳ ಕಡೆಗಿದೆ. ಈ ಕಾವ್ಯದಲ್ಲಿ ಕಂಡುಬರುವ ಷಡಕ್ಷರ ದೇವನ ಕಥನ ಕಲೆ ಅತ್ಯಂತ ಪ್ರಶಂಸನೀಯವಾಗಿದೆ. ಹನ್ನೆರಡನೆಯ ಶತಮಾನದ ಕನ್ನಡ ನಾಡಿನ ಧಾರ್ಮಿಕ, ಸಾಮಾಜಿಕ ಕ್ರಾಂತಿಯು 'ಕರಿಯು ಕನ್ನಡಿಯಲ್ಲಿ ಅಡಗುವಂತೆ', ಈ ಕಾವ್ಯದಲ್ಲಿ ಅಂತರ್ಗತವಾಗಿದೆ. ಬಸವಣ್ಣನವರ ಜೀವನ ಚರಿತ್ರೆಯನ್ನು ಹೇಳುವ ಅನೇಕ ಗ್ರಂಥಗಳು ಕನ್ನಡ,ಸಂಸ್ಕೃತ, ತೆಲುಗು, ತಮಿಳು ಭಾಷೆಗಳಿದ್ದರೂ ಷಡಕ್ಷರದೇವನ ಬಸವರಾಜ ವಿಜಯಕ್ಕೆ ಒಂದು ವೈಶಿಷ್ಟ್ಯವಿದೆ. ಕವಿಯೇ ಈ ವಿಷಯವನ್ನು ಬಹು ಸೊಗಸಾಗಿ ತಿಳಿಸಿದ್ದಾನೆ. ಪಾಲ್ಕುರಿಕಿ ಸೋಮನಾಥ, ಭೀಮಕವಿ, ಕಂಚಿಯ ಶಂಕರಾರಾಧ್ಯ ಈ ಮೂವರು ಮಹಾನುಭಾವರು ಮೂರು ಕಾವ್ಯಗಳನ್ನು ರಚಿಸಿ ಬಸವಾಂಘ್ರಿತ್ರಯಕ್ಕರ್ಪಿಸಿರುವರು. ಈ ಕವಿ ತನ್ನ ಕಾವ್ಯವನ್ನು ಬಸವಣ್ಣನ ನಾಲ್ಕನೆಯ ಪಾದಕ್ಕರ್ಪಿಸಿರುವೆನೆಂದು ಭಕ್ತಿ ಕಂಪಿತನಾಗಿ ನುಡಿದಿದ್ದಾನೆ.

"ಕಾವ್ಯ ಮತ್ತು ಧರ್ಮಗಳು ಸುಸ್ಥಿರವಾಗಿ ನಿಲ್ಲುವಂತೆ ಮಹಾಕೃತಿ ಬಸವರಾಜ ವಿಜಯ. ಅದು ಮಹಾಕವಿಯ ಕೀರ್ತಿಗೆ ಎತ್ತಿಹಿಡಿದ ವಿಜಯ ಪತಾಕೆ."

— ಸಂಪಾದಕರ 'ಪ್ರಸ್ತಾವನೆ'ಯಿಂದ

೧೧೩

**ಗ್ರಂಥ :** ಬಸವಲಿಂಗ ನಾಮಾವಳಿ

**ಪ್ರಭೇದ :** ರಗಳೆ

**ಕರ್ತೃ :** ?

**ಕಾಲ :** ೧೬೫೦

**ಸಂಪಾದಕ :** ಕೊಪ್ಪಳ (ವೀರಭದ್ರಪ್ಪ). ಜ. ೫-೯-೧೯೦೩

**ಆಕಾರ :** ೧೧೫ × ೯ ಸೆ. ಮಿ.

**ಪುಟ :** ೫ ರಿಂದ ೧೧

**ಸಾಲು :** ೧೫

**ಸ್ಥಳ :** ಧಾರವಾಡ

**ಪ್ರಕಾಶಕ :** ನವಕಲ್ಯಾಣ ಮಠ

**ಆವೃತ್ತಿ :** ಪ್ರಥಮ ದ್ವಿತೀಯ

**ಮಿತಿ :** ೧೯೫೧ ೧೯೫೩

**ಸಾರಾಂಶ :** ಬಸವಣ್ಣನವರ ಮಹಿಮೆಯನ್ನು ಇದರಲ್ಲಿ ಸ್ತುತಿಸಲಾಗಿದೆ. ಇದರ ಕೆಲ ಪದ್ಯಗಳನ್ನಿಲ್ಲಿ ಉದ್ಧರಿಸುತ್ತೇವೆ:

ಶ್ರೀ ಮಹಾ ವೃಷಾಧಿಪ ಪ್ರಸಿದ್ಧನಾಮ ಬಸವಲಿಂಗ
ಧಾಮ ನಿಧಿ ಶಿಖೇಂದು ಕೋಟಿ ಧಾಮ ಸೀಮ ಬಸವಲಿಂಗ
ಸತ್ವ ರಜಸ್ತಮೋ ಗುಣ ಪ್ರಚಾರ ದೂರ ಬಸವಲಿಂಗ
ತತ್ವಮಸಿ ಪದೈಕ್ಯ ವಚನ ಧರ್ಮಯುಕ್ತ ಬಸವಲಿಂಗ

ಇದೇ ಧಾಟಿಯ ಮತ್ತು ಇದೇ ತಲೆಬರಹದ ಗಂಥ್ರದಿಂದ 'ಬಸವತತ್ವ ರತ್ನಾಕರ' ದಲ್ಲಿ ಉದಾಹರಿಸಲಾಗಿದೆ. ಕವಿಯ ಹೆಸರು ಹೇಳಿಲ್ಲ. ಕಾಲ ೧೬೫೦ ಎಂದು ಹೇಳಿದೆ. ೧೦೮ ನುಡಿಗಳಿವೆಯೆಂದು ಸೂಚಿಸಲಾಗಿದೆ.

**ನೋಡು :** 1. ಬಸವಲಿಂಗ ನಾಮಾವಳಿ

---

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ.೩, ಪು. ೧೮-೧೯, ೨೭ ಮತ್ತು ೩೫, ಹಸ್ತಪ್ರತಿ, ನಂ.ಕೆ ಬಿ. ೨೮೯/೨
೨. ಬಸವ ತತ್ವ ರತ್ನಾಕರ, ಪು. ೫೮೧
೩. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

## ೧೧೪

**ಗ್ರಂಥ :** ಬಸವಲಿಂಗ ಮಹಿಮಾರ್ಣವ ಮಹಾಪುರಾಣಂ

**ಪ್ರಭೇದ :** ಚಂಪೂ **ಆಶ್ವಾಸ :** ೧೯ **ಪದ :** ೧೬೭೯

**ಕರ್ತೃ :** ಶಿಖಾಪುರವಾಸಿ ರುದ್ರಬಸವ

**ಆಕಾರ :** ತಾಡವೋಲೆ. ೧೧×೨ ಇಂಚು

**ಪತ್ರ :** ೧೫೩

**ಸಾಲು :** ೧೦

**ಅಕ್ಷರ :** ೪೫

**ಆದಿ :** ಶ್ರೀ ಗುರು ಬಸವಲಿಂಗಾಯನಮಃ।। ಬಸವಲಿಂಗ **ಮಹಿಮಾರ್ಣವ ಮಹಾಪುರಾಣ** ಬರೆವುದಕ್ಕೆ ಶುಭಮಸ್ತು....

ಶ್ರೀ ಕಲ್ಯಾಣೈಕಧಾಮಂ ಗುರುಬುಧ ವಿನುತಂ ಸನ್ಮಹಾಶಕ್ತಿ ದೇವಾ ।
ನೇಕಾಧಾರೋಚ್ಚ ಧರ್ಮಂ ನಿಜವರಸು.... ಪ್ರೋತ್ತಮಂ ಸ್ವ ।
ಚ್ಛಾಕಾರಾಮ್ನಾಯ ಕಾಂಡೋಜ್ವಲನ ಭವನನಂತಾತುಲೋದಾರಭೂಷಂ ।
ಲೋಕೇಶಾಷ್ಟಾರ್ಥದಂ ಪಾಲಿಸುಗೆ ಸುಜನಮಂ ನಂದಿಕೇಶಂ ಮಹೇಶಂ ॥

ಅಂತ್ಯ

॥ಗದ್ಯ॥ ಇದು ವಿನಮದಖಿಳ ಭಕ್ತಗಣ ಭಕ್ತಿಘನ ರಸೋದ್ಭೂತ ಚರವರ ಸಾರ್ವಭೌಮ ಗುರು ಸಿದ್ಧರಾಮ ಪದ ಪಯೋಜ ಪರಾಗ ಭಸಿತ ಲಸಿತ ಫಾಲ ಸುಯಶೋವಿಶಾಲ ಮಾನಿತವರ ಕವಿತಾ ವಿಭಾಸಿತ **ಶಿಖಾಪುರವಾಸಿ ರುದ್ರ ಬಸವಾಖ್ಯ ವಿರಚಿತ ಶ್ರೀಮದ್ಬಸವಲಿಂಗ ಮಹಿಮಾರ್ಣವ** ಮಹಾ ಪುರಾಣ ದೋಳ್ಗುರು ಬಸವಲಿಂಗಂ ನಿಜಭೂತಿಯಂ ನಿಜಗಣಂಗಳ್ಗೆ ತೋರಿ ಸಮಾಧಿಸ್ಥ ನಾದ ಕಥನಂ ನವದಶಾಶ್ವಾಸ ಸಂಪೂರ್ಣ ಮಂಗಲಮಸ್ತು ॥

ಅಂತು ಆಶ್ವಾಸ ೧೯ಕ್ಕಂ ಪದನು ೧೬೭೫ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ
ಶ್ರೀ ಗುರು ಬಸವಲಿಂಗಾಯನಮಃ ॥

---

ಆಕರ :

೧. ಬಾಗಲಕೋಟೆಯ ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿಯವರ ಶಾರದಾಭವನ ಗ್ರಂಥ ಭಂಡಾರದಲ್ಲಿದೆ.

೧೧೫

**ಗ್ರಂಥ: ಬಸವ ವಚನ ವೃತ್ತ ಶತಕ**

**ಪ್ರಭೇದ :** ವಿವಿಧ ವೃತ್ತಗಳು **ಸಂಖ್ಯೆ :** ೧೦೮

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ರೂಪಾಂತರಿಸಿದವರು :** ಕೇಶವ ಭಟ್ಟ (ಟಿ.) ಜ. ೨-೨-೧೯೨೫

**ಸಾರಾಂಶ :** ಬಸವಣ್ಣನವರ ೧೦೮ ವಚನಗಳನ್ನು ವೃತ್ತ ರೂಪದಲ್ಲಿ ರೂಪಾಂತರಿಸಲಾಗಿದೆ. ಅಪ್ರಕಟಿತ. ಮತ್ತೇಭ ವಿಕ್ರೀಡಿತ ವೃತ್ತದಲ್ಲಿ ರೂಪಾಂತರಿಸಿದ ಒಂದು ವಚನವನ್ನಿಲ್ಲಿ ಉದ್ಧರಿಸುತ್ತೇವೆ :

೧೦೨

ಕಳವಂ ಮಾಡದಿರೆಂದಿಗಂ ಕೊಲದಿರ್ ಮಿಥ್ಯೋಕ್ತಿ ನೀನಾಡದಿರ್ ।
ಮುಳಿಸಂ ಬೀರದಿರನ್ಯರೊಳ್ ಸಹನೆಯಿಂದಿರ್ ತನ್ನ ಕೊಂಡಾಡದಿರ್ ।
ಪಳಿಯಲ್ವೇಡಿತರರ್ಗೆ ಸೀನಿದುವೆ ಅಂತರ್ಬಾಹ್ಯ ಸಂಶುದ್ಧಿ ಮೇಣ್ ।
ತಿಳಿ ನೀಂ ಕೂಡಲಸಂಗದೇವನ ನೊಲಿಸ್ಪಾಪಾಂಗಿದೆಂದೆಂಬುದಂ ॥

ಇದರ ಮೂಲ ವಚನವಿಂತಿದೆ:

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ;
ಮುನಿಯ ಬೇಡ, ಅನ್ಯರಿಗೆ ಅಸಹ್ಯಬಡಬೇಡ,
ತನ್ನ ಬಣ್ಣಿಸ ಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವ ಪರಿ ! ॥ ೨೩ ॥

೧೧೬

**ಗ್ರಂಥ ಬಸವ ವಚನಾಮೃತ**

**ಪ್ರಭೇದ:** ವಚನ

**ಕರ್ತೃ:** ಬಸವಣ್ಣ

**ಕಾಲ:** ಸು. ೧೧೬೦

**ಸಂಪಾದಕ:** ಮಲ್ಲಪ್ಪ (ಟಿ. ಎನ್.), ಪುರಾಣಿಕ (ಸಿದ್ಧಯ್ಯ) ಮತ್ತು ಜೀರಿಗೆ (ಕಟ್ಟಿ ಬಸವಪ್ಪ).

**ಆಕಾರ:** ೧೩×೧೧ ಸೆ.ಮಿ.

**ಸಾಲು:** ೧೩

**ಅಕ್ಷರ:** ೧೨

**ಸ್ಥಳ:** ಬೆಂಗಳೂರು

**ಪ್ರಕಾಶಕ:** ಅನ್ನದಾನಯ್ಯ ಪುರಾಣಿಕ, ಪ್ರಧಾನ ಕಾರ್ಯದರ್ಶಿ, ಬಸವ ಸಮಿತಿ.

**ಆವೃತ್ತಿ:** ಪ್ರಥಮ

**ಮಿತಿ:** ೧೯೬೪

**ಬೆಲೆ:** ೦ = ೨೫ ಪೈಸೆ.

**ಸಾರಾಂಶ:** ಬಸವಣ್ಣನವರ ನೀತಿ ಬೋಧಕ ೧೦೮ ವಚನಗಳ ಸಂಗ್ರಹ-ವಿದು. ಸಾಮಾನ್ಯ ಓದುಗರಿಗೆ ಅರ್ಥವಾಗುವಂತಹ ವಚನಗಳಿವಾಗಿವೆ. "ಬಸವ ವಚನಾಮೃತ" ದಲ್ಲಿ ೧೦೮ ವಚನಗಳು ಮಾತ್ರ ಸಮಾವೇಶಗೊಂಡಿದ್ದರೂ ಬಸವಣ್ಣನವರು ದೇವರು, ಜಗತ್ತು, ಜೀವಿಗಳ ಬಗ್ಗೆ, ಸರ್ವ ಸಮಾನತೆಯ ಬಗ್ಗೆ, ಕಾಯಕದ ಬಗ್ಗೆ, ಅಂತರಂಗ ಬಹಿರಂಗ ಶುದ್ಧಿಗಳ ಸಾಧನೆಯ ಬಗ್ಗೆ, ದೇವರ-ನ್ನೊಲಿಸುವ ದಾರಿಯ ಬಗ್ಗೆ, ತಮ್ಮ ಬಗ್ಗೆ, ವ್ಯಕ್ತಪಡಿಸಿರುವ ಎಲ್ಲ ಮಹೋನ್ನತ ವಿಚಾರಗಳೂ ಇದರಲ್ಲಿ ಅಡಕವಾಗಿವೆಯೆಂದು ಹೇಳಬಹುದು."

—ಶ್ರೀ ಬಿ. ಡಿ. ಜತ್ತಿಯವರ 'ಮುಮ್ಮಾತಿ'ಸಿಂದ

೧೧೭

**ಗ್ರಂಥ:** ಬಸವ ವಚನಾಮೃತ

**ಪ್ರಭೇದ:** ವಚನ

**ಕರ್ತೃ:** ಬಸವಣ್ಣ

**ಕಾಲ:** ಸು. ೧೧೬೭

**ಸಂಪಾದಕ:** ಬಸವರಾಜ (ಎಲ್). ಜ. ೫–೧೦–೧೯೧೯

**ಆಕಾರ:** ೨೧×೧೩

**ಪುಟ:** vii+೧೧೨=೧೧೯

**ಸ್ಥಳ:** ಬೆಂಗಳೂರು

**ಪ್ರಕಾಶಕ:** ಶ್ರೀ ಬಿ. ಡಿ. ಜತ್ತಿ, ಬಸವ ಸಮಿತಿ

**ಆವೃತ್ತಿ:** ದ್ವಿತೀಯ

**ಮಿತಿ:** ೧೯೬೬

**ಬೆಲೆ:** ೦೦–೫೦ ಪೈಸೆ

**ಸಾರಾಂಶ:** ಬಸವಣ್ಣನವರ ನೀತಿಬೋಧಕ ೧೦೮ ವಚನಗಳಿಗೆ "ಪಾಠಾಂತರಗಳನ್ನು ಕೊಟ್ಟು ವಿವರಣಾತ್ಮಕ ವ್ಯಾಖ್ಯಾನವನ್ನು ಬರೆದು, ಅಭ್ಯಾಸಿಗಳಿಗೆ ಅನುಕೂಲವಾಗುವಂತೆ ಅರ್ಥಕೋಶವನ್ನು ಜೋಡಿಸಿರುವದು ತುಂಬಾ ಉಪಯುಕ್ತವಾಗಿದೆ". ಕೊನೆಯಲ್ಲಿ ಹೊಸದಾಗಿ ಸಿಕ್ಕಿರುವ ಬಸವಣ್ಣನವರ ೩೬ ವಚನಗಳನ್ನು ಸೇರಿಸಲಾಗಿದೆ. ಬಸವಣ್ಣನವರ ಸಾಹಿತ್ಯಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ನೈತಿಕನ್ನು ಕ್ರಾಂತಿಗಳ ಮುನ್ನುಡಿಯಲ್ಲಿ ನಿರೂಪಿಸಲಾಗಿದೆ.

## ೧೧೮

### ಗ್ರಂಥ ಃ ಬಸವ ವೃತ್ತಾಂತ

**ಸಾರಾಂಶ :** ಕವಿಚರಿತೆಕಾರರು " ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದವುಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟದ್ದೇವೆ " ಎಂದು ಹೇಳಿದ್ದಾರೆ.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೬.

೨. ಶ್ರೀ ಬಸವೇಶ್ವರನ ಚರಿತ್ರೆ ಪು. ೯೬.

## ೧೧೯

**ಗ್ರಂಥ :** ಬಸವ ಶತಕ

**ಪ್ರಭೇದ :** ಷಟ್ಪದಿ ?

**ಕರ್ತೃ :** ಸಿದ್ಧನಂಜೇಶ

**ಕಾಲ :** ೧೬೫೦

**ಸಾರಾಂಶ :** 'ಗುರುರಾಜ ಚಾರಿತ್ರ' ದ

ಭೂವಿನುತ ಕವಿ ರಾಘವಾಂಕ ಚಾರಿತ್ರಮಂ ।
ಪಾವನಾತ್ಮಕ ತೋಂಟದಾ ಸಿದ್ಧ ದೇಶಿಕನ ।
ಭಾವ ರತ್ನಾಭರಣಮಂ ಬಸವ ಶತಕಗಳ ವಸ್ತುಕದಿ ವರ್ಣಕದೊಳು ।
ಭಾವಜ್ಞ ಸತ್ಕವಿಗಳಹುದೆನಲು ಪೇಳ್ದು ಬಟಿ ।
ಕೀ ವಿಮಲ ಗುರುರಾಜ ಚಾರಿತ್ರವನ್ನೊರೆದ ।
ನಾ ವೀರ ಮಾಹೇಶ್ವರರ ಬಗೆಗೆ ಬರ್ಪಂತೆ ನಂಜೇಶನೇಂ ಧನ್ಯನೋ ॥

ಎಂಬ ಪದ್ಯದಿಂದ ಸಿದ್ಧನಂಜೇಶನು ಬಸವ ಶತಕವೆಂಬ ಗ್ರಂಥವನ್ನು ಬರೆದಂತೆ ತಿಳಿದು ಬರುತ್ತದೆ. ಕೃತಿ ಅನುಪಲಬ್ಧ.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೨, ಪು. ೩೭೯-೩೮೦.

೧೨೦

**ಗ್ರಂಥ :** ಬಸವ ಶತಕ

**ಪ್ರಭೇದ :** ಪದಗಳು **ಸಂಖ್ಯೆ :** ೧೧೦.

**ಕರ್ತೃ :** ಯೋಗಾನಂದ

**ಕಾಲ :** ೧೭೫೦

**ಆಕಾರ :** ತಾಳೆಗರಿ. ೬·೪×೪·೧ ಇಂಚು

**ಪತ್ರ :** ೧೨ರಿಂದ ೨೪

**ಸಾಲು :** ೧೧

**ಅಕ್ಷರ :** ೨೬

**ಸಾರಾಂಶ :** ಕವಿಚರಿತೆಕಾರರು ಗ್ರಂಥದ ವಿಷಯಕ್ಕೆ ಹೀಗೆ ಬರೆಯುತ್ತಾರೆ: "ಇದರಲ್ಲಿ ೧೧೦ ಪದಗಳಿವೆ. ಪ್ರತಿ ಪದವೂ "ಪರಮ ಗುರುವೆ ಸಲಹು ಬಸವ ಪ್ರಭುವೇ" ಎಂದು ಮುಗಿಯುತ್ತದೆ. ಗ್ರಂಥವು ಗುರುಶಿಷ್ಯ ಸಂವಾದರೂಪವಾಗಿ ವೇದಾಂತವನ್ನು ಬೋಧಿಸುತ್ತದೆ."

ಕ. ಹ. ವ. ಸೂಚಿಯಲ್ಲಿಯ ಬಸವೇಶ್ವರನು ಭೂಮಿಗೆ ಶಿವನಾಜ್ಞೆ ಹೊತ್ತು ಅವತರಿಸಿದ ವಿಷಯವನ್ನರುಹುವ ಆದಿಯ ಎರಡು ಪದ್ಯಗಳನ್ನಿಲ್ಲಿ ಉದ್ಧರಿಸುವೆವು :

ಶ್ರೀ ಶಿವಾಧವ ಶಶಿಶೇಖರ ಯಂನಯ ।
ಭಾವರೂಪವಾದ ಬಸವ ಜಗದೀ ।
ಭಕ್ತಿ ಮುಕ್ತಿಯಿತ್ತು ಬಾರೆನಲ್ ಬಂದರೆ ।
ಪರಮ ಗುರುವೆ ಸಲಹು ಬಸವ ಪ್ರಭುವೇ ॥೧॥

ಹೀಗೆ ಶಂಭು ಪೇಳೆ ಯೆಂನ ಜ್ಞಾನವು ನಿಂಮ ।
ಚರಣ ಯುಗಳದಲ್ಲಿ ಸತತವಿರಲಿ ।
ಯಿಳೆಗೆ ಪೋಗಿ ಬರುವೆಯೆಂದಾಗ ।
ಬಂದ ಶ್ರೀ ಪರಮಗುರುವೆ ಸಲಹು ಬಸವ ಪ್ರಭುವೇ ॥೨॥

೧೧೮

## ಗ್ರಂಥ : ಬಸವ ವೃತ್ತಾಂತ

**ಸಾರಾಂಶ :** ಕವಿಚರಿತೆಕಾರರು " ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟದ್ದೇವೆ " ಎಂದು ಹೇಳಿದ್ದಾರೆ.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೬.

೨. ಶ್ರೀ ಬಸವೇಶ್ವರನ ಚರಿತ್ರೆ ಪು. ೯೬.

೧೧೯

## ಗ್ರಂಥ : ಬಸವ ಶತಕ

**ಪ್ರಭೇದ :** ಷಟ್ಪದಿ ?

**ಕರ್ತೃ :** ಸಿದ್ಧನಂಜೇಶ

**ಕಾಲ :** ೧೬೫೦

**ಸಾರಾಂಶ :** 'ಗುರುರಾಜ ಚಾರಿತ್ರ' ದ

ಭೂವಿನುತ ಕವಿ ರಾಘವಾಂಕ ಚಾರಿತ್ರಮಂ ।
ಪಾವನಾತ್ಮಕ ತೋಂಟದಾ ಸಿದ್ಧ ದೇಶಿಕನ ।
ಭಾವ ರತ್ನಾಭರಣಮಂ ಬಸವ ಶತಕಗಳ ವಸ್ತುಕದಿ ವರ್ಣಕದೊಳು ।
ಭಾವಜ್ಞ ಸತ್ಕವಿಗಳಹುದೆನಲು ಪೇಳ್ದು ಬಳಿ ।
ಕೀ ವಿಮಲ ಗುರುರಾಜ ಚಾರಿತ್ರವನ್ನೊರೆದ ।
ನಾ ವೀರ ಮಾಹೇಶ್ವರರ ಬಗೆಗೆ ಬರ್ಪಂತೆ ನಂಜೇಶನೇಂ ಧನ್ಯನೋ ॥

ಎಂಬ ಪದ್ಯದಿಂದ ಸಿದ್ಧನಂಜೇಶನು ಬಸವ ಶತಕವೆಂಬ ಗ್ರಂಥವನ್ನು ಬರೆದಂತೆ ತಿಳಿದು ಬರುತ್ತದೆ. ಕೃತಿ ಅನುಪಲಬ್ಧ.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೨, ಪು. ೩೭೯-೩೮೦.

೧೨೦

**ಗ್ರಂಥ :** ಬಸವ ಶತಕ

**ಪ್ರಭೇದ :** ಪದಗಳು **ಸಂಖ್ಯೆ :** ೧೧೦.

**ಕರ್ತೃ :** ಯೋಗಾನಂದ

**ಕಾಲ :** ೧೭೫೦

**ಆಕಾರ :** ತಾಳೆಗರಿ. ೬·೪×೪·೧ ಇಂಚು

**ಪತ್ರ :** ೧೨೦ರಿಂದ ೨೪

**ಸಾಲು :** ೧೧

**ಅಕ್ಷರ :** ೨೬

**ಸಾರಾಂಶ :** ಕವಿಚರಿತೆಕಾರರು ಗ್ರಂಥದ ವಿಷಯಕ್ಕೆ ಹೀಗೆ ಬರೆಯುತ್ತಾರೆ: "ಇದರಲ್ಲಿ ೧೧೦ ಪದಗಳಿವೆ. ಪ್ರತಿ ಪದವೂ "ಪರಮ ಗುರುವೆ ಸಲಹು ಬಸವ ಪ್ರಭುವೇ" ಎಂದು ಮುಗಿಯುತ್ತದೆ. ಗ್ರಂಥವು ಗುರುಶಿಷ್ಯ ಸಂವಾದರೂಪವಾಗಿ ವೇದಾಂತವನ್ನು ಬೋಧಿಸುತ್ತದೆ."

ಕ. ಹ. ವ. ಸೂಚಿಯಲ್ಲಿಯ ಬಸವೇಶ್ವರನು ಭೂಮಿಗೆ ಶಿವನಾಜ್ಞೆ ಹೊತ್ತು ಅವತರಿಸಿದ ವಿಷಯವನ್ನರುಹುವ ಆದಿಯ ಎರಡು ಪದ್ಯಗಳನ್ನಿಲ್ಲಿ ಉದ್ಧರಿಸುವೆವು :

ಶ್ರೀ ಶಿವಾಧವ ಶಶಿಶೇಖರ ಯಂಸಯು ।
ಭಾವರೂಪವಾದ ಬಸವ ಜಗದೀ ।
ಭಕ್ತಿ ಮುಕ್ತಿಯಿತ್ತು ಬಾರೆನಲ್ ಬಂದರೆ ।
ಪರಮ ಗುರುವೆ ಸಲಹು ಬಸವ ಪ್ರಭುವೇ ॥೧॥

ಹೀಗೆ ಶಂಭು ಪೇಳೆ ಯೆಂನ ಜ್ಞಾನವು ನಿಂಮ ।
ಚರಣ ಯುಗಳದಲ್ಲಿ ಸತತವಿರಲಿ ।
ಯಿಳೆಗೆ ಪೋಗಿ ಬರುವೆಯೆಂದಾಗ ।
ಬಂದ ಶ್ರೀ ಪರಮಗುರುವೆ ಸಲಹು ಬಸವ ಪ್ರಭುವೇ ॥೨॥

ಇದರಲ್ಲಿ ಕೊನೆಯ ಕಂದ ಪದ್ಯವಿಂತಿದೆ :

ಶತದಶಕ ಗೀತ ಪದ್ಯಗ ।
ಳ್ಹಿತದಿಂ ಶಶಿಚಕ್ರವಾಕ ಯನಿಸುವ ವೃತ್ತದ ।
ಅತಿಶಯ ಪ್ರಸೂನ ಸ್ತಬಕದ ।
ಕ್ಷಿತಿಯೋಳ್ ಬಸವೇಶನಂಘ್ರಿಗೀಗರ್ಪಿಸಿದೆ ॥

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೧೦೬-೧೦೭

೨. ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೨೮
ಹಸ್ತಪ್ರತಿ, ನಂ. ಕೆ ಬಿ. ೩೨೧।೨

## ೧೨೧

**ಗ್ರಂಥ:** ಬಸವ ಶತಕ

**ಪ್ರಭೇದ :** ವೃತ್ತ

**ಕರ್ತೃ :** ಗಣೇಕಲ್ (ಸಂಗಪ್ಪ)

**ಕಾಲ :** ೧೮೦೦

**ಸಾರಾಂಶ :** ಬಸವಣ್ಣನವರ ಗುಣವಿಶೇಷಗಳನ್ನು ವರ್ಣಿಸುವ ಗ್ರಂಥ ವಿದು. ಅಪ್ರಕಟಿತ. ಗ್ರಂಥದಲ್ಲಿಯ ಒಂದು ಪದ್ಯವನ್ನು ಇಲ್ಲಿ ಕೊಡುತ್ತೇವೆ:

ಭವಿಗಳು ಭಕ್ತರಾಗಿ ಗುರು ಲಿಂಗ ಚರಾರ್ಚನೆಯಲ್ಲಿ ನಿಷ್ಠೆಯಿಂ ।
ತವೆ ಬಲಿವಾತ್ಮಸಿದ್ಧಿಗೆ ಕೃತಾಂತ ಸುಮೂಸ್ತ್ರ ಜಯಕ್ಕೆ ಕಾರಣಂ ।
ಭವದಾವತಾರವೆತ್ತಿ ಬಸವಾನೆರೆಯಾಲಿಸಿ ನಿಮ್ಮವನೆಂಬೆ ಪಾಲಿಸೈ ।
ಶಿವಮತ ಸಿಂಧು ಶೀತಕಿರಣಾಗತ ವಜ್ರಪಂಜರಾ ॥

ಶ್ರೀಮದನಂತಪೂರ್ಣ ಗುಣರತ್ನ ಸಮಾಹಿತ ಮಾರಭಿನ್ನತೋ ।
ದ್ದಾಮ ಪಯೋಧಿಯಂ ಬಿಡದೆ ಪೆರ್ಚಿಸಲೀ ನವಭಕ್ತಿಚಂದ್ರಿಕಾ ।
ಶ್ರೀಮಯ ಲೋಕನಾಥ ಬಸವಾ ಬಸವಾ ಪೊರೆಯೆನ್ನ ಶೈವ ಚೂ ।
ಡಾಮಣಿ ನಿತ್ಯಶುದ್ಧ ಕರುಣಾ ಶರಣಾಗತ ವಜ್ರಪಂಜರಾ ॥

ಮಂಗಳಮೂರ್ತಿ ನಿನ್ನ ಪದಸೇವೆಯೊಳಚ್ಯುತಭಕ್ತಿಯಿಂದ ನ ।
ಲ್ಲಂಗಿ ಕುಲಾಢ್ಯ **ಸಂಗವಿಭು** ವರ್ಣಿತಮೀ ಶತಕ ಪ್ರಬಂಧಮೊಂ ।
ದಿಂಗಿತಮಾಗಿ ತತ್ಕೃತ ಸಮರ್ಪಣ ಭಾವವನೊಪ್ಪಿ ಸತ್ಕೃಪಾ ।
ಪಾಂಗದಲೀಕ್ಷಿಸಯ್ಯ ಶರಣಾ ಶರಣಾಗತ ವಜ್ರಪಂಜರಾ ॥

---

**ಆಕರ :**

೧. ಬಸವತತ್ವ ರತ್ನಾಕರ, **ಪು.** ೫೯೭

೧೨೨

**ಗ್ರಂಥ :** **ಬಸವ ಶಿಖಾಮಣಿ ಕಾವ್ಯ**

**ಪ್ರಭೇದ :** ಸಾಂಗತ್ಯ **ಸಂಧಿ :** ೭ **ಪದ್ಯ :** ೧೧೧೧

**ಕರ್ತೃ :** ಕಾಡ

**ಕಾಲ :** ಸು. ೧೭೦೦

**ಆಕಾರ :** ಕಾಗದ. ೧೭×೨೧ ಸೆ.ಮಿ.

**ಪತ್ರ:** ೯೩, (ಪು. ೧೮೬)

**ಸಾಲು :** ೧೩

**ಅಕ್ಷರ :** ೨೬

**ಸಾರಾಂಶ :** ಕವಿಚರಿತೆಕಾರರು 'ಹಾರುವ ಹೇೞಿದನೀ ಕತಿಯು' ಎಂಬ ಪದ್ಯದ ಆಧಾರದ ಮೇಲೆ ಕರ್ತೃ 'ಹಾರುವ' ಎಂದು ಹೇಳಿದ್ದಾರೆ. 'ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕಸೂಚೀ'ಯಲ್ಲಿ ಕವಿಯ ಹೆಸರು 'ರತ್ನಕವಿಕಂಠ' ಎಂದು ಬರೆದಿದೆ. ಕನ್ನಡ ಸಂಶೋಧನ ಸಂಸ್ಥೆಯ ಇನ್ನೊಂದು ಪ್ರತಿಯಲ್ಲಿ 'ಶಿವಕವಿ ಕಾಡ' ನೆಂದು ಹೇಳಿದೆ.

**ಬಸವ ಶಿಖಾಮಣಿ ಕಾವ್ಯ**ವ ಪೇಳಿದ ।
ರಸಿಕನವನು ಆರೆನಲೂ ॥
ಶಶಿಧರಭಕ್ತರಾತ್ಮಜ **ಶಿವಕವಿಕಾಡ** ।
ಉಸಿರಿದ ಕೇಳಿ ಸಜ್ಜನರೂ ॥ ೯೮ ॥ ಸಂಧಿ ೭ ।

ಒಂದನೆಯ ಸಂಧಿಯ ೧೮ನೆಯ ಪದ್ಯದಲ್ಲಿ 'ಪರವರಸೆಟ್ಟಿ ಮಲ್ಲಣ್ಣ**ನಾತ್ಮಜ ಕಾಡ** । ವರದನೀಕೃತಿಯ ಮುದದೀ' ಎಂದಿದೆ.

**ಕಥೆ :** ಶಿವನು ಒಡ್ಡೋಲಗಂಗೊಟ್ಟಿರಲು ನಾರದನು ಬಂದು ಭೂಲೋಕದಲ್ಲಿ ಶಿವಸಮಯವು ನಶಿಸುತ್ತಿರುವದನ್ನು ಹೇಳಿದನು. ಆಗ ಶಿವನು ವೃಷಭನಿಗೆ ಭೂಲೋಕದಲ್ಲಿ ೭೭೦ ಗಣಗಳೊಂದಿಗೆ ಜನ್ಮಿಸಿ ಶಿವಮತವನುದ್ಧರಿಸಲು ಅಪ್ಪಣೆಯಿತ್ತನು. ಇಂಗಳೇಶ್ವರ ಬಾಗೇವಾಡಿಯ ಮಾದಿರಾಜ - ಮಾದಲಾಂಬಿಕೆಯರಿಗೆ ಮಗನಾಗಿ ಜನ್ಮಿಸಿದನು. ಬಾಲ್ಯದಲ್ಲಿ ಕಾಲುಜಾರಿ ಬಾವಿಯೊಳು ಬಿದ್ದ ಹುಡುಗನನ್ನು ಬದುಕಿಸಿದನು. ತಂದೆಯು ಮುಂಜಿಯ ಮಾಡಬೇಕೆಂದಾಗ ಅದನ್ನು ತಿರಸ್ಕರಿಸಿ ಸಂಗಮೇಶ್ವರಕ್ಕೆ ಹೋದನು. ಅಲ್ಲಿಂದ ಕಲ್ಯಾಣಕ್ಕೆ ಹೋದನು. ಬಿಜ್ಜಳನ ಸಭೆಯಲ್ಲಿ ಲಿಪಿಯನ್ನೋದಿ ಸುವರ್ಣಸಂಗ್ರಹ ತೆಗೆದು ತೋರಿಸಿದನು. ಸಿದ್ಧದಂಡನಾಯಕನು ತನ್ನ ಪುತ್ರಿ ನೀಲಲೋಚನೆಯನ್ನು ವಿಜೃಂಭಣೆಯಿಂದ ಮದುವೆ ಮಾಡಿಕೊಟ್ಟನು. ಬಿಜ್ಜಳನಲ್ಲಿರುವಾಗ ಅನೇಕ ಪವಾಡಗಳನ್ನು ಮಾಡಿದನು. ಜಂಗಮ ರೂಪದಲ್ಲಿ ಬಂದ ಶಿವನಲ್ಲಿ ಐಕ್ಯವಾದನೆಂದು ಕೊನೆಯಲ್ಲಿ ಹೇಳಿದೆ. ಕವಿಯು ಬಸವಣ್ಣನವರ ಮೂಲ ವಚನಗಳನ್ನು ಸಾಂಗತ್ಯರೂಪಗೊಳಿಸಿದ್ದಾನೆ. ಭೀಮ, ಸೋಮ, ಹರಿಹರ, ರಾಘವಾಂಕ, ಕೆರೆಯ ಪದ್ಮರಸ—ಇತ್ಯಾದಿ ಕವಿಗಳಿಂದ ಈ ಕವಿ ಪ್ರಭಾವಿತನಾಗಿದ್ದಾನೆ. ಕವಿಚರಿತೆಕಾರರು ಇದರಲ್ಲಿ ೧೨ ಸಂಧಿಗಳು ೧೨೫೦ ಪದ್ಯಗಳಿವೆಯೆಂದು ಹೇಳಿದ್ದಾರೆ.

---

**ಆಕರ :**

೧. ಕರ್ನಾಟಕ ಸಂಶೋಧನ ಸಂಸ್ಥೆಯ ಹಸ್ತಪ್ರತಿ, ನಂ. ೧೩೪೬ ಮತ್ತು ೧೩(೨)

೨. ಕರ್ನಾಟಕ ಕವಿಚರಿತೆ, ಭಾ. ೩, ಪು. ೨೫೦-೨೫೧.

೩. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೨೯, ಹಸ್ತಪ್ರತಿ ನಂ. ಕೆ ಬಿ. ೪೫೨.

೧೨೩

**ಗ್ರಂಥ : ಬಸವ ಸಂದೇಶ**

**ಕರ್ತೃ :** ಹರ್ಡೇಕರ (ಮಂಜಪ್ಪ)

**ಕಾಲ :** ಜ. ೧೮-೨-೧೮೮೫ ಮ. ೩-೧-೧೯೪೭

**ಮಿತಿ :** ೧೯೩೩ ಬಸವ ಜಯಂತಿ

**ಸಾರಾಂಶ :** " ಶ್ರೀ ಬಸವ ಜಯಂತಿಯು ಕರ್ನಾಟಕದಲ್ಲಿ ಒಂದು ಹೊಸ ಜಾಗ್ರತಿಯ ಮಹೋತ್ಸವವಾಗಿಯೇ ಪರಿಣಮಿಸಿರುವದರಿಂದ ಆ ಕಾಲದಲ್ಲಿ ಬಸವ ತತ್ವಪ್ರಸಾರಕ್ಕೆ ಒಂದು ಹೊಸ ರೀತಿಯುಂಟಾಗಲೆಂದು ಜಯಂತಿಯ ಕಾಲಕ್ಕೆ ಚಿಕ್ಕ ಚಿಕ್ಕ ಪುಸ್ತಕಗಳನ್ನು ಉಚಿತವಾಗಿ ಹಂಚುವ ಪದ್ಧತಿಯನ್ನು ಕ್ರಿ. ಶ. ೧೯೩೩ರಲ್ಲಿ ಪ್ರಾರಂಭಿಸಿದೆನು. **'ಬಸವ ಸಂದೇಶ'** ಎಂಬ ಬಸವಣ್ಣನವರ ವಚನಗಳಲ್ಲಿ ಆಯ್ದುಕೊಂಡ ೧೦೧ ವಚನಗಳ ಚಿಕ್ಕ ಪುಸ್ತಕವನ್ನು ಮುದ್ರಿಸಿ ಬಸವ ಜಯಂತಿಯ ದಿನವೇ ಎಲ್ಲ ಕಡೆಗೂ ಈ ಪುಸ್ತಕವು ಹಂಚಲ್ಪಡುವಂತೆ ಪ್ರಕಟಿಸಿದೆನು. ಆ ದಿನ ಐವತ್ತು ಸಾವಿರ ಪ್ರತಿಗಳು ಹಂಚಲ್ಪಟ್ಟವು. ಸಾವಿರಕ್ಕೆ ಎಂಟು ರೂ. ಬೆಲೆಯನ್ನಿಟ್ಟದ್ದಿತು. ಇದು ಕರ್ನಾಟಕದಲ್ಲಿಯೇ ಒಂದು ಅಭೂತಪೂರ್ವ ಪ್ರಸಂಗವೆನ್ನಬಹುದು.

ಒಂದು ದಿನ ಇಷ್ಟು ಪ್ರತಿಗಳು ಹೀಗೆ ಹಂಚಲ್ಪಟ್ಟ ಒಂದಾದರೂ ಪ್ರಸಂಗವು ಆ ಮುಂಚೆ ಎಂದೂ ಸಂಭವಿಸಿರಲಿಲ್ಲ. ಇದರಿಂದ ಬಸವಣ್ಣನವರ ವಚನಪಾಠವು ಚಿಕ್ಕಚಿಕ್ಕ ವಿದ್ಯಾರ್ಥಿಗಳಲ್ಲಿಯೂ ಎಷ್ಟೋ ಪ್ರಸಾರವಾಯಿತು."

—ಶ್ರೀ ಮಂಜಪ್ಪನವರ 'ಆತ್ಮಚರಿತ್ರೆ'ಯಿಂದ

---

ಆಕರ :

೧. ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ, ಪು. ೬೭

೧೨೪

**ಗ್ರಂಥ : ಬಸವ ಸಂಪಾದನೆ**

**ಪ್ರಭೇದ :** ಸಾಂಗತ್ಯ **ಸಂಧಿ :** ೪೯ **ಪದ ಸಂಖ್ಯೆ :** ೪೬೧೩

**ಆಕಾರ :** ತಾಳೆಗರಿ. ೪೫×೫ ಸೆ.ಮಿ.

**ಪತ್ರ :** ೧೭೯

**ಸಾಲು :** ೮

**ಅಕ್ಷರ :** ೯೦

**ಸಾರಾಂಶ :** ಬಸವಣ್ಣನವರ ಚರಿತ್ರೆಯು ಇದರಲ್ಲಿ ವರ್ಣಿತವಾಗಿದೆ. ಬಸವಣ್ಣನವರೇ ಈ ಕಥೆಯನ್ನು ತಮ್ಮ ಮಡದಿ ನೀಲಲೋಚನೆಗೆ ಹೇಳಿದಂತೆಯೂ ಅದನ್ನೇ ಕವಿಯು ತನ್ನ ಅಂಗನೆಗೆ ತನ್ನ ಗುರುಸಿದ್ಧೇಶನ ಕೃಪೆಯಿಂದ ವಿವರಿಸಿರುವುದಾಗಿಯೂ ಹೇಳಲ್ಪಟ್ಟದೆ.

ಬಸವಣ್ಣನವರ ಜೀವನ ಚರಿತ್ರೆಗೆ ಸಂಬಂಧಿಸಿದ ಅತ್ಯಂತ ಮಹತ್ವದ ಅಪ್ರಕಟಿತ ಪ್ರಾಚೀನ ಕಾವ್ಯಗಳಲ್ಲಿ ಇದೊಂದಾಗಿದೆ. ಇದು ಸಾಂಗತ್ಯದಲ್ಲಿ ಬರೆದುದೊಂದು ವಿಶೇಷ ಸಂಗತಿಯಾಗಿದೆ. 'ಭಕ್ತಿರಸ ಸೋನೆ' ಮತ್ತು ಪ್ರಸ್ತುತ 'ಬಸವ ಸಂಪಾದನೆ' ಈ ಎರಡು ಬೃಹತ್ ಸಾಂಗತ್ಯ ಕಾವ್ಯಗಳು ಪ್ರಕಟವಾದರೆ ಬಸವಣ್ಣನವರ ಅತ್ಯುನ್ನತವಾದ ಘನತೆಗೆ ಇನ್ನೂ ಹೆಚ್ಚು ಬೆಳಕು ಬೀಳಬಹುದೆಂಬುವರಲ್ಲಿ ಸಂದೇಹವಿಲ್ಲ. 'ಬಸವಪುರಾಣ', 'ಬಸವರಾಜ ದೇವರ ರಗಳೆ', 'ಸಿಂಗಿರಾಜ ಪುರಾಣ' 'ವೃಷಭೇಂದ್ರ ವಿಜಯ'ಗಳಷ್ಟೇ ಮಹತ್ವ ಈ ಕಾವ್ಯಕ್ಕೂ ಇದೆ ಎನ್ನಲಡ್ಡಿಯಿಲ್ಲ.

ಶೈಲಿ-ಸೌಂದರ್ಯಗಳ ದೃಷ್ಟಿಯಿಂದ ಗಮನಾರ್ಹವಾಗಿದೆ.

**ಆದಿಯ ಕೆಲವು ಭಾಗ :**

ಶ್ರೀ ಗುರುಸಿದ್ಧಾಯೇ ನಮಃ॥ ಶ್ರೀ ಗುರುಲಿಂಗ ಜಂಗಮದ ಪಾದವೇ ಗತಿ ॥
**ಬಸವ ಸಂಪಾದನೆಯ** ಬರೆವುದಕ್ಕೆ ಶುಭಮಸ್ತು ।

ಪರಶಿವನಮಳ ಧರ್ಮವೆ ಎಂದುರೂಪಾಸೂ ।
ಧರಿಸಿತೆನಲು ಕಣ್ಣಿಗಿಂಬಾಗಿ ।
ಪರಮಾಭಾವಿತ ಪಾರಾತರವಾದಾ **ಬಸವೇ।**
**ಶ್ವರ** ನಾ ಬಲಗೊಂಬೆಂನಾ ಕೃತಿಯೊಳೂ ॥ ೭ ॥

ಅಸಿಯಾಳೆ ಕೇಳೊಪ್ಪವಿಟ್ಟ ರತ್ನದವೋಲೂ ।
**ಬಸವಸಂಪಾದನೆ**ಯಿದನೊಲ್ದು ।
ಉಸರೂವೆ ಓದುವರಿಗೆ ಕೇಳುವರಿಗೆ ಸಂ ।
ತಸವೆಚ್ಚುವೊಲು ಭಾವುಕರಿಗೆ ॥೧೭॥

**ಅಂತ್ಯ :**

ಇಂತಪ್ಪಾ ಸಕಲ ಸೊಬಗಿನಿಂದಾ ಬಸವಣ್ಣ ತನ್ನಾ ।
ಕಾಂತೆಯಾ ಕೂಡಾ ಪೇಳಿದ ಕಥೆಯಾ ।
ದಂತಿಗಮನೆ ಗುರುಕೃಪೆಯಿಂದಾ ನೊರೆದೆನೂ ।
ಸಂತಾಪಾದಿಂದಾ ನೀ ಲಾಲಿಸಾ ॥೧೩॥ ಸಂಧಿ ೪೯॥

ಮುದದಿ ಕೇಳ್ಬಸವ ಸಂಪಾದನೆಯ ಮೊದಲಿಂದಾ ।
ಕಡೆಮುಟ್ಟಾತನಕೇಕೋಭಾವದಿ ।
ಬಿಡದೆ ಕೇಳಿದ ಭಕ್ತಜನರ್ಗೆ ಕಾಮಿತಗಳಾ
ಕೊಡುವಾ ಗುರು ಪರಶಿವ ಸಿದ್ಧೇಶಾ ॥೧೬॥ ಸಂಧಿ ೪೯॥

ಓದಿದವರಿಗೆ ಪೊಳುನುಡಿ ಭೇದವನರಿದು ಸಂ ।
ಪಾದಿಸಿದವರಿಗಿಷ್ಟಾರ್ಥವಾ ।
ಆದಿ ಪಡುವುಡಿಯಾಚರಪತಿ ಶ್ರೀ ಗುರುಸಿದ್ಧೇಶಾ
ಭೇದಾ ವಿಲ್ದೀವಾ ಸಂತಸವಿುಗೆ ॥೧೨೭॥ ಸಂಧಿ ೪೯ ॥

ಅಂತು ಸಂಧಿ ೪೯ಕ್ಕಂ ಪದನು ೪೬೧೩ಕ್ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ

---

ಆಕರ :

೧. ಸಮಗ್ರ ವಚನ ವಾಙ್ಮಯ ಪ್ರಕಟನಾಯೋಜನೆಯ ಗ್ರಂಥಭಂಡಾರದ ಹಸ್ತಪ್ರತಿ ನಂ. ೧೩೮೪

೧೨೫

**ಗ್ರಂಥ : ಬಸವ ಸ್ತುತಿ**

**ಪ್ರಭೇದ :** ಹಾಡು

**ಕರ್ತೃ :** ಚೆನ್ನಬಸವಣ್ಣ ?

**ಕಾಲ :** ಸಂ. ೧೧೬೭

**ಆಕಾರ :** ಶ್ರೀತಾಳ. ೧೩×೨ ಇಂಚು

**ಪುಟ :** ೧

**ಸಾಲು :** ೪

**ಸಾರಾಂಶ :** ಚೆನ್ನಬಸವಣ್ಣನವರು ಬರೆದ ಹಲವು ಹಾಡುಗಳಲ್ಲಿ ಈ "ಬಸವ ಸ್ತುತಿ" ಎಂಬುದೂ ಒಂದು.

**ಆದಿ :** .................. ಬಸವಾ ॥
ಬಕಾರ ಗುರು ಭವವಿನಾಶ ಬಸವಾ ।
ಸಕಾರ ಚೈತನ್ಯಾತ್ಮಕ ಬಸವಾ ।
ವಕಾರ ಚರಜಂಗಮಸ್ಯ ಬಸವಾ ॥

**ಅಂತ್ಯ :** ಶರಣು ಕೂಡಲ **ಚೆನ್ನಸಂಗನ ಬಸವ** ॥

---

ಆಕರ :

1. Descriptive Catalogue of the Kannada Manuscripts Madras—MS No. 760, p. 1083.

೧೨೬

**ಗ್ರಂಥ :** ಬಸವ ಸ್ತುತಿ

**ಪ್ರಭೇದ :** ಭೋಗ ಷಟ್ಪದಿ **ನುಡಿ :** ೩೧

**ಕಾಲ :** ಸು. ೧೬೫೦

**ಸಾರಾಂಶ :** ಬಸವಣ್ಣನವರು ಗೈದ ಪವಾಡಗಳ ವರ್ಣನೆ ಇದರಲ್ಲಿದೆ. ಅದರೊಳಗಿನ ಕೆಲ ಪದ್ಯಗಳನ್ನು ಇಲ್ಲಿ ಕೊಡುತ್ತೇವೆ:

ಧರಣಿ ಪತಿಯ ಓಲಗದೊಳು ।
ಶರಣನಾಗಮಯ್ಯ ಬರಲು ।
ಬೆರಳಿನಲ್ಲಿ ಹಾಲು ಕರೆದ ಬಸವ ಪಾಹಿಮಾಂ ॥
ವಿಷಮರೂಪು ತಾಳಿ ಬಂದ
ವಿಷಮಧಾರಿ ಜಂಗಮಕ್ಕೆ
ಲೇಸಿನಿಂದ ಬಸವನೆದ್ದು ಶರಣು ಮಾಡಿದ ॥ ೧ ॥

ಚಿತ್ರರೂಪು ಜಂಗಮರ
ಪ್ರತಿಮೆಗಳಿಗೆ ಪ್ರಾಣವಿತ್ತು
ಅರ್ತಿಯಿಂದ ಬಸವ ಮನೆಗೆ ಕರೆದು ತಂದನು ।।
.... .... .... ....

---

ಆಕರ :

೧. ಬಸವತತ್ವ ರತ್ನಾಕರ, ಪು. ೫೮೧.

೧೨೭

**ಗ್ರಂಥ :** ಬಸವ ಸ್ತುತಿ

**ಪ್ರಭೇದ:** ವಚನ

**ಆಕಾರ :** ಶ್ರೀತಾಳ. ೧೨×೨ ಇಂಚು

**ಪತ್ರ :** ೨

**ಸಾಲು :** ೧೬

**ಸಾರಾಂಶ :** ಬಸವಣ್ಣನವರನ್ನು ಸಂಬೋಧಿಸಿ ಬರೆದ ವಚನಗಳಿವರಲ್ಲಿವೆ ಯೆಂದು DCKM ದಲ್ಲಿ ಹೇಳಿದೆ. ಇತರ ಶರಣರ ವಚನಗಳೂ ಇದರಲ್ಲಿರುವಂತೆ ಕಾಣುತ್ತದೆ. ಎರಡನೆಯ ಪತ್ರದಲ್ಲಿಯ ಕೊನೆಯ ವಚನ ೧೦೭೮ನೆಯದಾಗಿದೆ.

---

ಆಕರ :

1. Descriptive Catalogue of the Kannada Manuscripts-Madras, MS. No. 750, p. 1082

೧೨೮

**ಗ್ರಂಥ : ಬಸವ ಸ್ತೋತ್ರ**

**ಪ್ರಭೇದ :** ಷಟ್ಪದಿ

**ಸಾರಾಂಶ :** ಶ್ರೀ ಸಿಂದಗಿ ಸಿದ್ಧಪ್ಪನವರು ಬಸವಣ್ಣನವರ ಚರಿತ್ರೆಯ ವಿಷಯವಾಗಿ ಹುಟ್ಟಿದ ಗ್ರಂಥಗಳ ಪಟ್ಟಿಯಲ್ಲಿ ಪ್ರಸ್ತುತ ಗ್ರಂಥದ ಹೆಸರನ್ನು ಕೊಟ್ಟಿರುವರು.

**ನೋಡು :** ೧. ಬಸವೇಶ್ವರ ಸ್ತೋತ್ರ
೨. ಬಸವೇಶ್ವರ ರಗಳೆ

---

ಆಕರ :

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

೧೨೯

**ಗ್ರಂಥ : ಬಸವ ಸ್ತೋತ್ರ ಗೀತೆ**

**ಪ್ರಭೇದ :** ಆಟ ಗೀತೆ

**ಕರ್ತೃ :** ಸಿದ್ಧರಾಮ

**ಕಾಲ :** ಸು. ೧೧೬೭

**ಸಂಪಾದಕ :** ಶ್ರೀ ಶಿವಬಸವ ಸ್ವಾಮಿಗಳು

**ಆಕಾರ :** ೧೮×೧೨ ಸೆ. ಮಿ.

**ಪುಟ :** ೧ ರಿಂದ ೨೬

**ಸಾಲು :** ೨೦

**ಅಕ್ಷರ :** ೧೯

**ಸ್ಥಳ :** ಮೈಸೂರು

**ಪ್ರಕಾಶಕ :** ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೭೪

**ಬೆಲೆ :** ೧ = ೦೦ ರೂ.

**ಮಾಲೆ :** ಶ್ರೀ ಗುರು ಮಲ್ಲೇಶ್ವರ ಗಂಥ್ರಮಾಲಾ, ೩

**ಸಾರಾಂಶ:** 'ಬಸವ ಸ್ತೋತ್ರ ಗೀತೆ, ಮಿಶ್ರ ಸ್ತೋತ್ರ ಗೀತೆ, ಅಷ್ಟಾವರ್ಣ ಸ್ತೋತ್ರ ಗೀತೆ' ಎಂಬ ಸಂಗತ ಪುಸ್ತಕದ ಪ್ರಥಮ ಭಾಗದಲ್ಲಿ ಮುದ್ರಿತವಾಗಿದೆ.

ಇವರಲ್ಲಿ ಸಿದ್ಧರಾಮನು ಬಸವಣ್ಣನವರನ್ನು ಸರ್ವತೋಮುಖವಾಗಿ ಸ್ತೋತ್ರ ಮಾಡಿದ್ದಾನೆ.

ಇದಕ್ಕೆ ಶ್ರೀ ಡಿ. ಎಲ್. ನರಸಿಂಹಾಚಾರ್‌ರ ಮುನ್ನುಡಿಯಿದೆ. ಭಿಕ್ಷದ ರಾಚಪ್ಪಸ್ವಾಮಿಗಳ ಹಾಗು ಗುರುಮಲ್ಲಸ್ವಾಮಿಗಳ ಭಾವಚಿತ್ರಗಳಿವೆ. ಹತ್ತು ತಾಳಪತ್ರಗಳ ಸಹಾಯದಿಂದ ಇದನ್ನು ಸಂಸ್ಕರಿಸಿ ಪ್ರಕಟಿಸಲಾಗಿದೆ. ಕೊನೆಗೆ ಕಠಿಣ ಶಬ್ದಾರ್ಥಗಳನ್ನು ಕೊಟ್ಟಿದೆ. ಆದ್ಯಂತದಲ್ಲಿ ಕಂದ ಪದ್ಯಗಳಿವೆ. ಉತ್ತಂಗಿಯವರು ಸಂಪಾದಿತ ಸ್ತೋತ್ರದಲ್ಲಿ ಇಲ್ಲದ ಒಂದು ಪದ್ಯ ಇದರಲ್ಲಿ ಹೆಚ್ಚಿಗಿದೆ.

---

**ಆಕರ :**

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೨, ನಂ. ೧೦೩೩ ಮತ್ತು ೧೦೩೪. ಪು. ೩೧-೩೨

೧೩೦

**ಗ್ರಂಥ :** **ಬಸವ ಸ್ತೋತ್ರದ ತ್ರಿವಿಧಿ**

**ಪ್ರಭೇದ :** ತ್ರಿವಿಧಿ-ಆಟಗೀತೆ ? **ಕಂದ :** ೧; **ತ್ರಿವಿಧಿ :** ೧೬

**ಕರ್ತೃ :** ಸಿದ್ಧರಾಮ

**ಕಾಲ :** ೧೧೬೬

**ಸಂಪಾದಕ :** ಉತ್ತಂಗಿ(ಚನ್ನಪ್ಪ)
ಜ. ೨೮-೧೦-೧೮೮೧ ಮ. ೨೮-೮-೧೯೬೨

**ಆಕಾರ :** ೨೧ × ೧೩ ಸೆ. ಮಿ.

**ಪುಟ:** ೧ ರಿಂದ ೨೬

**ಸ್ಥಳ:** ಸೊಲ್ಲಾಪುರ

**ಪ್ರಕಾಶನ:** ಸೌ. ಜಯದೇವಿತಾಯಿ ಲಿಗಾಡೆ, ಕನ್ನಡ ಕೋಟೆ

**ಆವೃತ್ತಿ:** ಪ್ರಥಮ

**ಮಿತಿ:** ೧೯೫೫

**ಬೆಲೆ:** ೩=೦೦ ರೂ.

**ಸಾರಾಂಶ:** ಇದು 'ಸಿದ್ಧರಾಮ ಸಾಹಿತ್ಯ ಸಂಗ್ರಹ' ಗ್ರಂಥದಲ್ಲಿ ವಿಭಾಗವಾಗಿ ಪ್ರಕಟವಾಗಿದೆ. ಆದಿಯಲ್ಲಿ ಕಂದಪದ್ಯವೊಂದಿದೆ:

ಬಸವೇಶನೆ ಬಸವರಾಜನೇ ।
ಬಸವಣ್ಣನೆ ಬಸವ ತಂದೆ ಬಸವಕೃಪಾನಿಧಿ ।
ಬಸವ ಪರಮೇಶ್ವರೀಶ್ವರ
ಬಸವ ಪ್ರಮಥಾದಿ ದೇವ ರಕ್ಷಿಸು ಬಸವ ॥

ಅನಂತರ ೧೨೬ ಪದ್ಯಗಳಿವೆ. ಪ್ರತಿಯೊಂದು ಪದ್ಯ 'ಯೋಗಿನಾಥ' ಎಂದು ಮುಗಿಯುತ್ತದೆ. ಈ ಗ್ರಂಥದ ಬಗೆಗೆ ಸಂಪಾದಕರು ಹೀಗೆ ಹೇಳಿದ್ದಾರೆ:

"ಕಾರ್ಮುಗಿಲಿನಲ್ಲಿ ಕೋಲ್ಮಿಂಚು, ಒಂದು ದಿಕ್ಕಿನಿಂದ ಮತ್ತೊಂದು ದಿಕ್ಕಿಗೆ, ಫಕ್ಕನೆ ಹೊಳೆದು ಹೃದ್ಗೋಚರವಾಗುವಂತೆ, ಲಿಂಗಾಂಗಿಯಾದ ಸಿದ್ಧರಾಮನ ಆತ್ಮಾನುಭಾವದ ಸುರೇಖೆಗಳು, ರಸ ನಿಮಿಷಗಳು, ಏಕ ಸೂತ್ರವಾಗಿ ತ್ರಿವಿಧಿಗಳ ಆರಂಭದ ಪುಟದಿಂದ ಕೊನೆಯ ಪುಟದ ವರೆಗೂ...., ಕಣ್ಣು ಕುಕ್ಕುವಷ್ಟರಮಟ್ಟಿಗೆ ತೀಕ್ಷ್ಣವಾದ ಜ್ಯೋತಿಯಿಂದ ಹೊಳೆಯುತ್ತವೆ."

—ವಿಮರ್ಶೆ ಮತ್ತು ಪ್ರಸ್ತಾವನೆ, ಪು. ೧೭

ಈ ಗ್ರಂಥಕ್ಕೆ 'ಬಸವೇಶ್ವರ ಸ್ತೋತ್ರದ ತ್ರಿವಿಧಿ' 'ಬಸವ ಸ್ತೋತ್ರ ಗೀತೆ' 'ಬಸವ ತ್ರಿವಿಧಿ' ಎಂಬ ಬೇರೆ ಹೆಸರುಗಳೂ ಉಂಟು.

ಇದನ್ನು 'ಬಸವ ಸ್ತೋತ್ರ ಗೀತೆ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ.

---

ಆಕರ:


೧. ಕರ್ಣಾಟಕ ಕವಿಚರಿತೆ, ಭಾ. ೧, ಪು. ೧೮೩-೮೪

೨. Descriptive Catalogue of the Kannada Manuscripts-Madras, Vol. III, p. 816-817

೩. Descriptive Catalogue of the Kannada Manuscripts in the K. R. I-Dharwar, Vol, III, No. 8, p 14-15

೧೩೧

**ಗ್ರಂಥ :** ಬಸವ ಸ್ತೋತ್ರದ ಕಂದ

**ಪ್ರಭೇದ :** ಕಂದ

**ಸಂಪಾದಕ :** ಚೆನ್ನಂಜೆ ದೇವರು

**ಕಾಲ :** ಸು. ೧೫೫೦

**ಸಾರಾಂಶ :** "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆ ಇರುವ ಗ್ರಂಥಗಳನ್ನು ನಮಗೆ ತಿಳಿದಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂಬ ಶೀರ್ಷಿಕೆಯಲ್ಲಿ ಕವಿಚರಿತೆಕಾರರು ಈ ಗ್ರಂಥವನ್ನು ಉಲ್ಲೇಖಿಸಿದ್ದಾರೆ. ಇದು ಚೆನ್ನಂಜೆ ದೇವರಿಂದ ನಿರ್ಮಿತವಾಗಿರಲಿಕ್ಕಿಲ್ಲ. ಸಂಕಲಿತವಾಗಿರಬಹುದು. 'ಬಸವ ಸ್ತೋತ್ರದ ವಚನ', 'ಬಸವ ಸೋತ್ರದ ಷಟ್ಪದಿ', ಎಂಬ ಇವರ ಇನ್ನೆರಡು ಗ್ರಂಥಗಳಿವೆ. ಅಪ್ರಕಟಿತ.

**ನೋಡು :** ೧. ಬಸವ ಕಂದ

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೬.

೧೩೨

**ಗ್ರಂಥ :** ಬಸವ ಸ್ತೋತ್ರದ ತ್ರಿವಿಧಿ : ಸಟೀಕು.

**ಪ್ರಭೇದ :** ತ್ರಿವಿಧಿ-ಟೀಕು

**ಕರ್ತೃ :** ಸಿದ್ಧರಾಮ

**ಕಾಲ :** ಸು. ೧೧೬೭

**ಆಕಾರ :** ತಾಳವೋಲೆ. ೧೭·೬×೨ ಇಂಚು

**ಪತ್ರ :** ೫೮ರಿಂದ೯೫

**ಸಾಲು :** ೧೧

**ಅಕ್ಷರ :** ೯೨

**ಸಾರಾಂಶ :** ಬಸವಣ್ಣನವರ ಹಿರಿಮೆಯನ್ನು ಹೇಳಿದ 'ಬಸವ ಸ್ತೋತ್ರ ತ್ರಿವಿಧಿ' ಗಳಿಗೆ ಅರ್ಥವಿವರಣೆಯಿದೆ. ಪ್ರತಿ ಅಸಮಗ್ರ. ಟೀಕಾಕಾರ ಗೊತ್ತಾಗಿಲ್ಲ. ಆದಿಯಲ್ಲಿಯ ಕಂದ ಪದ್ಯ ಇಂತಿದೆ.

ಟೀಕೆ॥ ಬಸವೇಶನೇ= ತ್ರಿವಿಧ ತನುಗಳಿಗೆ ಒಡೆಯನಾದಂಥಾ; ಬಸವರಾಜನೆ= ತ್ರಿವಿಧಾತ್ಮರುಗಳಿಗೊಡೆಯನಾದಂಥಾ ; ಬಸವಣ್ಣನೆ = ತ್ರಿಪುಟಿಜ್ಞಾನಕ್ಕೊಡೆಯ - ನಾದಂಥ; ಬಸವತಂದೆ = ತ್ರಿವಿಧ ತತ್ವಂಗಳಿಗೊಡೆಯನಾದಂಥ; ಬಸವ ಕೃಪಾನಿಧಿ= ಶುದ್ಧ ಸಿದ್ಧಪ್ರಸಿದ್ಧವೆಂಬ ತ್ರಿವಿಧ ಪ್ರಸಾದಕ್ಕೆ ಕಡಲವಾದಂಥ; ಬಸವ ಪರಮೇಶ್ವರೀ- ಶ್ವರ= ಅಂಗತತ್ವ ಲಿಂಗತತ್ವಂಗಳವಗ್ರಹಿಸಿಕೊಂಡ ಷಟ್ಸ್ಥಲಾಧೀಶ್ವರನಾದಂಥಾ; ಬಸವ ಪ್ರಮಥಾದಿದೇವ=ಚಿತ್ಕರಣಂಗಳಿಗೊಡೆಯನಾದಂಥಾ; ಬಸವಾ=ನಾದಬಿಂದು ಕಲಾಸ್ವರೂಪನಾದ ಎಲೆ ಬಸವೇಶ್ವರನೆ; ಮಾಂ=ಎನ್ನ; ರಕ್ಷಿಸು=ಪಾಲಿಸು.

ತ್ರಿವಿಧಿಯ ಅಂತ್ಯಕ್ಕೆ ಬರುವ 'ಯೋಗಿನಾಥ' ಶಬ್ದಕ್ಕೆ 'ಚೆನ್ನಬಸವೇಶ್ವರ' ನೆಂದು ಅರ್ಥಮಾಡಲಾಗಿದೆ.

---

**ಆಕರ :**

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೩೩

೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

## ೧೩೩

## ಗ್ರಂಥ : ಬಸವ ಸ್ತೋತ್ರದ ವಚನ

**ಪ್ರಭೇದ :** ವಚನ

**ಕರ್ತೃ :** ಚೆನ್ನಂಜೆ ದೇವರು

**ಕಾಲ :** ಸು. ೧೫೫೦

**ಸಾರಾಂಶ :** ಈ ಗ್ರಂಥದಲ್ಲಿ ವಿವಿಧ ಶರಣರ ಬಸವ ಸ್ತೋತ್ರದ ವಚನ ಗಳನ್ನು ಸಂಗ್ರಹಿಸಲಾಗಿದೆ.

**ನೋಡು :** ೧. ಚೆನ್ನಂಜೆದೇವರಿಂದ ಸಂಪಾದಿತವಾದ ಬಸವ ಸ್ತೋತ್ರದ ವಚನ ಮತ್ತು ಬಸವ ಸ್ತುತಿ–ಬಸವ ಪ್ರಶಸ್ತಿ

೨. ಬಸವ ಸ್ತೋತ್ರದ ವಚನಗಳು (ಬೋಳ ಬಸವೇಶ್ವರ ಸಂಪಾದಿತ)

೧೩೪

**ಗ್ರಂಥ :** **ಬಸವ ಸ್ತೋತ್ರದ ವಚನಗಳು**

**ಪ್ರಭೇದ :** ವಚನ **ಸಂಖ್ಯೆ :** ೧೨೩

**ಕರ್ತೃ :** ವಿವಿಧ ಶರಣರು.

**ಕಾಲ :** ಸು. ೧೧೬೦

**ಸಂಪಾದಕ :** ಬೋಳಬಸವೇಶ್ವರ ( ಸಂಪಾದನೆಯ )

**ಆಕಾರ :** ತಾಳೆಗರಿ ೨೩×೪ ಸೆ. ಮಿ.

**ಪತ್ರ :** ೧೮೨ ರಿಂದ ೨೦೦

**ಸಾಲು :** ೧೨

**ಅಕ್ಷರ :** ೬೧

**ಸಾರಾಂಶ :** ಶರಣರನೇಕರು ಬಸವಣ್ಣನವರನ್ನು ಕುರಿತು ಸ್ತುತಿಸಿದ ೧೨೩ ವಚನಗಳ ಸಂಕಲನವಿದು. ಬೋಳಬಸವೇಶ್ವರನಂತೆ ಚೆನ್ನಂಜೆದೇವರು ಸಹ ಇಂತಹ ವಚನಗಳನ್ನು ಸಂಗ್ರಹಿಸಿರುವನು.

**ಆದಿ :** ಶ್ರೀ ಗುರುಬಸವಲಿಂಗಾಯನಮಃ ।
ಸಂಪಾದನೆಯ ಬೋಳಬಸವೇಶ್ವರ ದೇವರು ಸೇರಿಸಿದ
ಬಸವೇಶ್ವರ ದೇವರ ಸ್ತೋತ್ರದ ವಚನಂಗಳು ॥

**ಅಂತ್ಯ :**

ಆಚಾರವೆಂಬುದು ಅಗೋಚರ ನೋಡಯ್ಯ ಆರಿಗೂ ಸಾಧ್ಯವಲ್ಲ ಮರ್ತ್ಯಲೋಕದಲ್ಲಿ.
ಆ ಸದಾಚಾರದ ಬೆಳವಿಗೆಯ ಮಾಡಲೆಂದು ಬಸವಣ್ಣ ಬಂದು ಭಕ್ತಿಸ್ಥಲವ ಗುರು ಲಿಂಗ ಜಂಗಮ ದಾಸೋಹ ಪಾದೋದಕ ಪ್ರಸಾದದ ಬೆಳವಿಗೆಯ ಘನವನಹುದಲ್ಲವೆಂದು ಬಿಜ್ಜಳ ತರ್ಕಿಸಲು ಅನಂತ ಮುಖದಿಂದ ಒಡಂಬಡಿಸಿ ಅಹುದೆನಿಸಿದ ಬಸವಣ್ಣನು.
ಬಂದ ಮಣಿಹ ಪೂರೈಸಿತ್ತೆಂದು ಲಿಂಗದೊಳಗೆ ಬಗಿದು ಹೊಕ್ಕಡೆ ಹಿಂದೆ ಲೋಕವಱಿದು ಬದುಕಬೇಕೆಂದು ಸೆಱಗ ಕೊಟ್ಟ ಬಸವಣ್ಣನು.

ನಾನು ಹಿಂದುಳಿದಹಳೆಂದು ಮುಂದಣಗತಿಯ ತೋಱಿ ಬಸವಣ್ಣಪ್ರೀಯ ಚೆನ್ನಸಂಗಯ್ಯನಲ್ಲಿ ತನ್ನ ಪ್ರಸನ್ನದೊಳಗೆ ಇಂಬಿಟ್ಟುಕೊಂಡನು ಎನ್ನ ಹೆತ್ತ ತಂದೆ ಸಂಗನ ಬಸವಣ್ಣನು. ||೧೩||

ಕಂದ|| ಅರ್ಚಿಸಲು ಬೇಡ ಲಿಂಗವ |
ನಿಚ್ಚಂ ಪೂಜಿಸಲು ಬೇಡ ಜಪ ತಪ ಬೇಡಂ |
ಸಚ್ಚಿದಾನಂದ ಬಸವನ |
ನೊಚ್ಚತನೆನೆ ನಿತ್ಯಪದವು ನಿನಗಿದು ಸತ್ಯಂ ||೧||

ಈ ಸಂಪಾದನೆಯ ಬೋಳಬಸವೇಶ್ವರದೇವರು ಸೇರಿಸಿದ ಬಸವ ಸ್ತೋತ್ರದ ವಚನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ

---

ಆಕರ :

೧. ಸಮಗ್ರ ವಚನ ವಾಙ್ಮಯ ಪ್ರಕಟನಾಯೋಜನೆಯ ಗ್ರಂಥ ಭಂಡಾರದ ಹಸ್ತಪ್ರತಿ ನಂ. ೧೧೫, ಪತ್ರ ೧೮೨ ರಿಂದ ೨೦೦; ನಂ. ೪೯, ಪತ್ರ ೭೨A ದಿಂದ ೭೬Aದವರೆಗೆ

೧೩೫

**ಗ್ರಂಥ : ಬಸವ ಸ್ತೋತ್ರದ ಷಟ್ಪದಿ**

**ಪ್ರಭೇದ :** ವಿವಿಧ ಷಟ್ಪದಿ **ಪದ್ಯ:** ೧೦೯

**ಕರ್ತೃ :** ಚೆನ್ನಂಜೆ ದೇವರು

**ಕಾಲ :** ಸು. ೧೫೫೦

**ಆಕಾರ :** ಶ್ರೀತಾಳ. ೮×೧ ಇಂಚು

**ಪತ್ರ :** ೨೪

**ಸಾಲು :** ೧೧

**ಸಾರಾಂಶ :** ಪ್ರಾಚೀನ ಷಟ್ಪದಿ ಕಾವ್ಯಗಳಿಂದ ಈ ಷಟ್ಪದಿಗಳನ್ನಾಯ್ದು ಇಲ್ಲಿ ಸಂಕಲಿಸಲಾಗಿದೆ. 'ಬಸವ ಸ್ತೋತ್ರದ ವಚನ' 'ಬಸವ ಸ್ತೋತ್ರದ ಕಂದ' ಎಂಬಿವು ಈತನ ಇನ್ನೆರಡು ಕೃತಿಗಳು. ಆದಿಯ ಪದ್ಯ 'ಬಸವ ಶರಣೆನೆ ಪಾಪ

ವಳಿವುದು' ಎಂಬುದು ಭೀಮ ಕವಿಯ ಬಸವ ಪುರಾಣಕ್ಕೆ (ಪೀಠಿಕಾ ಸಂಧಿ, ೨೫) ಸಂಬಂಧಿಸಿದೆ.

---

ಆಕರ :

1. Descriptive Catalogue of the Kannada Manuscripts—Madras, No. 503, p. 822-24
೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೩೫
೩. ಬಸವೇಶ್ವರ ಸ್ತೋತ್ರಪದ್ಯಗಳು, ಪು. ೬-೭

೧೩೬

## ಗ್ರಂಥ : ಬಸವ ಸ್ತೋತ್ರ ಮಂಜರಿ

**ಕರ್ತೃ :** ಷಡಕ್ಷರಿ ಗುಂಜೀಹಳ್ಳಿ ಚಿಕ್ಕಮಠ

**ಸಾರಾಂಶ :** "ಕವಿ ಷಡಕ್ಷರಿ ಗುಂಜಿಹಳ್ಳಿ ಚಿಕ್ಕಮಠೀಯರು, ರಾಯಚೂರ ಜಿಲ್ಲೆಯವರು.... ಇವರು ಅಮರೇಶ್ವರ ಶತಕ, **'ಬಸವ ಸ್ತೋತ್ರ ಮಂಜರಿ'** ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ" ಎಂದು ಬಸತತ್ವ ರತ್ನಾಕರದಲ್ಲಿ ಹೇಳಿದೆ. ಆದರಲ್ಲಿಯ ಎರಡು ಕಂದ ಪದ್ಯಗಳನ್ನು ಇಲ್ಲಿ ಎತ್ತಿ ಕೊಡುತ್ತೇವೆ :

ಬಸವಂ ಭಕ್ತಿ ವಿಶೇಷಂ ।
ಬಸವಂ ಭಾಸುರ ಶಿವಾಭಿಮಾನಿಯು ಬಗೆಯಲ್ ।
ಬಸವಂ ಭೀತಿ ಧ್ವಂಸಂ ।
ಬಸವಂ ಭುವಿಗವತರಿಸಿದ ಶಂಕರನಲ್ತೆ ।

ಬಸವಂ ಭೂಸುತಗಾತ್ರಂ ।
ಬಸವಂ ನಿಗಮಾದ್ಯಭೇದ್ಯನಘೂನ ಚರಿತ್ರ ।
ಬಸವಂ ಬವಾಬ್ಧಿ ಚೈತ್ರಂ ।
ಬಸವಂ ತಾನಿರ್ಕೆ ಮದ್ಹೃದಂಭೋರುಹದೋಳ್ ॥

---

ಆಕರ :

೧. ಬಸವತತ್ವರತ್ನಾಕರ, ಪು. ೬೩೨

೧೩೭

**ಗ್ರಂಥ :  ಬಸವಾದಿಗಳ ಕಥೆ**

**ಆಕಾರ :** ತಾಳೆಗರಿ. ೩೫×೫ ಸೆ. ಮಿ.

**ಪತ್ರ :** ೨೦೦ಕ್ಕೂ ಮಿಕ್ಕಿರಬಹುದು.

**ಸಾಲು :** ೧೦

**ಅಕ್ಷರ :** ೬೦

**ಸಾರಾಂಶ :** ಈ ಗ್ರಂಥದ ತಾಳೆ ಗರಿಗಳು ಅಸ್ತವ್ಯಸ್ತ ರೂಪದಲ್ಲಿದ್ದು ಖಿಲವಾಗಿರುವದರಿಂದ ಓದಲು ಬಾರದಂತಾಗಿವೆ. ಶ್ರಮವಹಿಸಿ ಓದಿದಾಗ ಬಸವಣ್ಣನ ಚರಿತ್ರೆಯೆಂದು ತಿಳಿಯಿತು.

---

ಆಕರ :

೧. ಸಮಗ್ರ ವಚನವಾಙ್ಮಯ ಸಂಶೋಧನಾ ಯೋಜನೆಯ ಗ್ರಂಥ ಭಂಡಾರದ ಹಸ್ತಪ್ರತಿ, ನಂ. ೫೭೦

೧೩೮

**ಗ್ರಂಥ :  ಬಸವಾದಿ ನಿಜತತ್ವ ದರ್ಪಣ**

**ಪ್ರಭೇದ :** ವಿಮರ್ಶಾತ್ಮಕ ಪ್ರಶ್ನೆಗಳು **ಸಂಖ್ಯೆ : ೨೦೦**

**ಕರ್ತೃ :** ಕುಬಸದ (ಶಾಂತಪ್ಪ ವೀರಭದ್ರಪ್ಪ)

**ಕಾಲ :** ಜ. ೧೯೦೦ ?

**ಆಕಾರ :** ೧೭·೫×೧೨·೫ ಸೆ. ಮಿ.

**ಪುಟ :** ೫೭

**ಸಾಲು :** ೨೩

**ಅಕ್ಷರ :** ೨೨

**ಸ್ಥಳ :** ಹಂಮಿಗಿ (ಬಳ್ಳಾರಿ ?)

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

೧೨೨

ಮಿತಿ : ೪-೫-೧೯೨೦

ಬೆಲೆ : ೦-೪-೦ ಆಣೆ

**ಸಾರಾಂಶ :** ಬಸವಣ್ಣ, ಚೆನ್ನಬಸವಣ್ಣ, ಅಕ್ಕನಾಗಮ್ಮ, ಪ್ರಭುದೇವ, ಸಿದ್ಧರಾಮಪ್ಪ ಪಾವಟೆ– ಇವರುಗಳ ಜೀವನ ಚರಿತೆ, ಇವರ ಧಾರ್ಮಿಕ ವಿಧಿ ವಿಧಾನ ಇವುಗಳ ಬಗೆಗೆ ಸಂಶಯ ಪೂರಿತ ೨೦೦ ಪ್ರಶ್ನೆಗಳನ್ನಿದು ಒಳಗೊಂಡಿದೆ. ಪ್ರಾರಂಭದ ೧೦೦ ಪ್ರಶ್ನೆಗಳು ಬಸವಣ್ಣನವರನ್ನು ಕುರಿತಾಗಿವೆ. ಈ ನೂರು ಪ್ರಶ್ನೆಗಳಿಗೆ ಉತ್ತರ-ರೂಪವಾಗಿ ಶ್ರೀ ಪಾವಟೆಯವರು '**ತಮೋಹರಣ ಅರ್ಥಾತ್ ಬಸವ ಭಾನು**' ಎಂಬ ಗ್ರಂಥವಲ್ಲಿ, 'ಶ್ರೀ ಬಸವರಾಜ ಶಾಸ್ತ್ರಿ ಮಾಗಳ' ಅವರು 'ಬಸವಾದಿ ಪ್ರಮಥ ತತ್ವ ನಿರ್ಣಯ' ಎಂಬ ಗ್ರಂಥದಲ್ಲಿ ಉತ್ತರಿಸಿದ್ದಾರೆ.

---

**ಆಕರ :**

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

೧೩೯

## ಗ್ರಂಥ : ಬಸವಾದಿ ಪ್ರಮಥರ ಚರಿತೆ

**ಪ್ರಭೇದ :** ಷಟ್ಪದಿ

**ಸಾರಾಂಶ :** 'ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆಯಿರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ' ಎಂಬ ಶೀರ್ಷಿಕೆಯ ಕೆಳಗೆ ಕವಿಚರಿತೆಕಾರರು ಇದನ್ನು ಹೆಸರಿಸಿದ್ದಾರೆ.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೨, ಪು. ೪೧೮ ಮತ್ತು ೪೨೬
೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೬೯
೩. Alphabetical Index of Kanarese Manuscripts—Madras, S. No. 746, p. 38.

೧೪೦

## ಗ್ರಂಥ : ಬಸವಾದಿ ಪ್ರಮಥರ ತತ್ವನಿರ್ಣಯ

**ಪ್ರಭೇದ :** ಪ್ರಶ್ನೋತ್ತರ– ವಿಮರ್ಶೆ

ಕರ್ತೃ : ಮಾಗಳ (ಬಸವರಾಜಶಾಸ್ತ್ರಿ)

ಕಾಲ : ಜ. ೧೯೦೦ ?

ಆಕಾರ : ೨೦×೧೪ ಸೆ. ಮಿ.

ಪತ್ರ : ೭+೧೨೨=೧೨೯

ಸಾಲು : ೩೨

ಅಕ್ಷರ : ೨೮

ಸ್ಥಳ : ತುರ್ವಿಹಾಳು (ಬಾಗಿಲುಕೋಟೆ, ತಾ. ?)

ಪ್ರಕಾಶಕ : ಮೂರ್ತಿನಾಥ ಶರ್ಮಾ

ಆವೃತ್ತಿ : ಪ್ರಥಮ

ಮಿತಿ : ೧೪–೭–೧೯೫೩

ಬೆಲೆ : ೧–೦–೦ ರೂ.

ಸಾರಾಂಶ : ಒಟ್ಟು ೧೮೭ ಪ್ರಶ್ನೆಗಳಿಗೆ ಉತ್ತರವಿದೆ.

"ಈ ಗ್ರಂಥದಲ್ಲಿ ಪರಾಯತ್ತ ವಿಚಾರ ಸಂಪನ್ನ ಚಿತ್ತರಾದ ಶಾಂತಪ್ಪ ವೀರಭದ್ರಪ್ಪ ಕುಬಸದ ಎಂಬಿ ಮಹಾಶಯರು ಶ್ರೀ ಬಸವಾದಿ ಪುರಾತನ ಪ್ರಮಥರ ವಿಷಯದಲ್ಲಿ ಮಾಡಿರುವ ಪ್ರತಿಯೊಂದು ಪ್ರಶ್ನೆಗಳಿಗೆ ಪ್ರತ್ಯೇಕವಾಗಿ ವೇದಾಗಮೋಪನಿಷತ್ಪುರಾಣಾದಿ ಪ್ರಮಾಣಾದಿಗಳಿಂದ ಉತ್ತರಗಳನ್ನು ಕೊಟ್ಟು ಶ್ರೀ ಬಸವಾದಿ ಪುರಾತನ ಪ್ರಮಥರ ತತ್ವಗಳು ನಿರ್ದುಷ್ಟಗಳಾಗಿರುವವೆಂಬುವದು ಸಪ್ರಮಾಣವಾಗಿ ನಿರ್ಣಯಿಸಲ್ಪಟ್ಟಿರುತ್ತದೆ."

—ಲೇಖಕರ ಪ್ರಸ್ತಾವನೆ, ಪು. ೭

೧೪೧

ಗ್ರಂಥ : ಬಸವಾವತಾರವು

ಪ್ರಭೇದ : ಕುಸುಮ ಷಟ್ಪದಿ ಪದ್ಯ ಸಂಖ್ಯೆ : ೧೦೧

ಸ್ಥಳ : ಮೈಸೂರು

ಮಿತಿ : ೧೯೧೦ ?

**ಸಾರಾಂಶ :** ಬಸವ ಸ್ತುತಿಯಾಗಿದೆ. ಆದಿಯ ಒಂದು ಪದ್ಯವಿಂತಿದೆ :

ಬಸವ ಪ್ರಮಥರ ಕಂದ ।
ವಸುಧೆಯಲಿ ತಾ ಬಂದ ।
ಹೆಸರಾದ ಜಗದಲ್ಲಿ ಬಸವಲಿಂಗ ॥
ಅಸಮ ಮಹಿಮನೆ ನಿನ್ನ ।
ಹೆಸರೆನಗೆ ಸವಿಯೂಟ ।
ನಸುನಗುತೆ ನೀ ತಂದೆ ರಕ್ಷಿಸೆಂದೆ ॥೧॥

ಗ್ರಂಥದ ಮುಖಪುಟ ಮತ್ತು ಕೊನೆಯ ಪುಟಗಳು ಹರಿದು ಹೋಗಿವೆಯೆಂದು ತಿಳಿದಿದೆ.

---

ಆಕರ :

೧. ಶ್ರೀ ಎಸ್. ಶಿವಣ್ಣ, ಸಂಶೋಧಕ ವಿದ್ಯಾರ್ಥಿ ಕನ್ನಡ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಇವರಲ್ಲಿದ್ದ ಪ್ರತಿ.

## ೧೪೨

**ಗ್ರಂಥ : ಬಸವಾಷ್ಟಕ**

**ಪ್ರಭೇದ :** ರಗಳೆ

**ಸಾರಾಂಶ :** ಇದರ ಪ್ರತಿಯೊಂದು ಸಾಲು 'ಬಸವಲಿಂಗ' ವೆಂದು ಅಂತ್ಯ-ವಾಗುವದೆಂದು ತಿಳಿದಿದೆ. ಆದರೆ ನನ್ನ ಅವಲೋಕನಕ್ಕೆ ಸಿಕ್ಕಿಲ್ಲ. ಬಹುಶಃ 'ಬಸವ-ಲಿಂಗ ನಾಮಾವಳಿ' ಯಾಗಿರಬಹುದೇನೋ ?

---

ಆಕರ :

೧. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದಲ್ಲಿಯ ಕಾಗದದ ಹಸ್ತಪ್ರತಿ, ನಂ. ಕೆ ಬಿ. ೩೫೧/೩

## ೧೪೩

**ಗ್ರಂಥ : ಬಸವೇಶ್ವರ ಜನನಂ**

**ಪ್ರಭೇದ :** ಚರಿತ್ರೆ

**ಟೀಕಾಕಾರ :** ಕರಿಬಸವ ಶಾಸ್ತ್ರೀ (ರುದ್ರಶಾಸ್ತ್ರೀ ನಂಜನಗೂಡು)

**ಕಾಲ :** ಜ. ೧೮೭೨ ಮ. ೯-೫-೧೯೩೪ ?

**ಸಾರಾಂಶ :** ಸಂಸ್ಕೃತ ಬಸವೇಶ್ವರ ಪುರಾಣದ ೩, ೪, ೫, ೬, ೭– ಈ ಅಧ್ಯಾಯಗಳ ಕನ್ನಡ ವಿವರಣೆಯಾಗಿದೆಯೆಂದು ತಿಳಿದಿದೆ.

ಈ ಗ್ರಂಥದ ಪ್ರತಿಯು ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯ ಅಚ್ಚಾದ ಕನ್ನಡ ಗ್ರಂಥ ಭಂಡಾರದಲ್ಲಿದೆ.

---

ಆಕರ :

೧. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಭಾ. ೧, ಪು. ೧೫

೨. Catalogue of printed Kannada works in the Oriental Research Institute Mysore, Book No.K. 1767. p. 76

೧೪೪

**ಗ್ರಂಥ :** **ಬಸವೇಶ್ವರ ದೇವರ ಪುರಾಣದ ಕಥಾಸಾಗರ**

**ಪ್ರಭೇದ :** ಗದ್ಯ-ಕಥೆ **ಕಥೆ ಸಂಖ್ಯೆ :** ೪೬೪

**ಕರ್ತೃ :** ಉತ್ತರದೇಶದ ಬಸವಲಿಂಗ

**ಕಾಲ :** ಸು. ೧೬೦೦

**ಆಕಾರ :** ಕಾಗದ. ೩೦×೧೪ ಸೆ. ಮಿ.

**ಪುಟ :** ೪೧೬

**ಸಾಲು :** ೨

**ಅಕ್ಷರ :** ೩೦

**ಸಾರಾಂಶ :** ಬಸವ ಪುರಾಣದಲ್ಲಿ ಸೂಚ್ಯವಾಗಿರುವ ಕಥೆಗಳನ್ನು ಇದರಲ್ಲಿ ವಿಸ್ತರಿಸಿ ಹೇಳಿದೆ. 'ಅಷ್ಟಾದಶ ಪುರಾಣಗಳು, ಭಾರತ, ರಾಮಾಯಣ, ವೀರಶೈವಾಮೃತ ಪುರಾಣ, ಆರಾಧ್ಯ ಚಾರಿತ್ರ, ಗಣಾಡಂಬರ, ಸಿಂಗಿರಾಜನ ಕೃತಿ, ಶಿವತತ್ವ ಚಿಂತಾಮಣಿ, ಹರೀಶ್ವರ ದೇವರ ರಗಳೆ, ಸಿದ್ಧರಾಮೇಶ್ವರ ಚಾರಿತ್ರ, ಶೂನ್ಯ ಸಂಪಾದನೆ ಮುಂತಾದ ಗ್ರಂಥಗಳನ್ನು ನೋಡಿ ಈ ಕಥೆಗಳನ್ನು ಬರೆದಂತೆ ಹೇಳುತ್ತಾನೆ.' ಅಪ್ರಕಟಿತ.

ಗ್ರಂಥದ ವಿಷಯವಾಗಿ–

"ಬಸವೇಶ್ವರ ದೇವರ ಪುರಾಣದ ಕಥೆಗಳನ್ನು ಭಕ್ತ ಮಾಹೇಶ್ವರರು ಸುಲಭ-ದಲ್ಲಿ ತಿಳಿವಂತೆ ಕಲ್ಪಿತ ಕಥೆಗಳಲ್ಲದೆ ಸಕಲ ಶಿವಪುರಾಣ ಸಮ್ಮತವಾಗಿ ಕಥಾಸಾಗರ ವೆಂಬ ಪೆಸರಿಟ್ಟು ಬಸವಾದಿ ಪ್ರಮಥರ ಕರುಣದಿಂ ಮಾಡಿದೆವು" ಎಂದು ಕವಿ ಹೇಳಿದ್ದಾನೆ.

ಕೆಲವು ಮಾತೃಕೆಗಳಲ್ಲಿ ಇದಕ್ಕೆ 'ಬಸವೇಶ್ವರ ಪುರಾಣದ ಕಥಾಸಾಗರ'ವೆಂದು ಹೆಸರಿದೆ.

---

ಆಕರ :

೧. ಕನ್ನಡ ಸಂಶೋಧನ ಸಂಸ್ಥೆ ಹಸ್ತಪ್ರತಿ, ಸಂ. ೫೪೫
೨. Descriptive Catalogue of Manuscripts K.R.I-Dharwar, vol. vi p. 129.
೩. ಕರ್ನಾಟಕ ಕವಿಚರಿತೆ, ಭಾ. ೨, ಪು. ೩೨೧-೩೨೨
೪. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೪೦

೧೪೫

**ಗ್ರಂಥ :** ಬಸವೇಶ್ವರ ದೇವರ ವಚನ ಸಾರಾರ್ಥ

**ಪ್ರಭೇದ :** ವಚನ–ಟೀಕು

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಟೀಕಾಕಾರ :** ಪರ್ವತ ಶಿವಯೋಗಿ ಸು. ೧೬೫೦

**ಆಕಾರ :** ತಾಳೆಗರಿ. ೧೭·೬×೨ ಇಂಚು

**ಪತ್ರ :** ೧–೧೮

**ಸಾಲು :** ೧೨

**ಅಕ್ಷರ :** ೯೨

**ಸಾರಾಂಶ :** ಇದರಲ್ಲಿ ಬಸವಣ್ಣನವರ ಷಟ್ಸ್ಥಲ ವಚನಗಳಿಗೆ ಅರ್ಥವಿವರಣೆಯನ್ನು ಕೊಡಲಾಗಿದೆ. ೧೯೯ನೆಯ ವಚನದ ಅಂತ್ಯದಲ್ಲಿ 'ಶ್ರೀಮತ್ಷಟಸ್ಥ-ಲಾದ್ವೈತ ವಿದ್ಯಾಪ್ರಮೋದಿತ ಶ್ರೀ ವೀರ ಮಾಹೇಶ್ವರ ಬಾಲೇಂದು ಪುರದ ಹರೀಶ್ವರ

ಶಾಂತವೀರೇಶ್ವರ ಚಿದ್ಗರ್ಭ ಸಂಭವ **ಪರ್ವತ ಶಿವಯೋಗೀಶ್ವರ** ವಿರಚಿತಮಪ್ಪ **ಬಸವೇಶ್ವರ ದೇವರ ವಚನ ಸಾರಾರ್ಥ** ಭಕ್ತಿಸ್ಥಲ ೧೫ ಹದಿನಯ್ದರೊಳ್ ಸಂಪೂರ್ಣಂ' ಎಂದು ಹೇಳಲ್ಪಟ್ಟಿದೆ. ಅಪ್ರಕಟಿತ.

ಕ. ಹ. ವ. ಸೂಚಿಯಲ್ಲಿಯ ಈ ಗ್ರಂಥದ ಅಲ್ಪಭಾಗವನ್ನು ಇಲ್ಲಿ ಎತ್ತಿ ಕೊಡುತ್ತೇವೆ:

'ಪ್ರಥಮದಲ್ಲಿ ಪಿ....ಂಚ್ಚಿನಂತಿದ್ದಿತು' | ಸಸಿಯೊಳಗಣ ರಸದ ರುಚಿಯಂತಿದ್ದಿತ್ತು | ಕೂಡಲ ಸಂಗಮದೇವ ಕನ್ನೆಯ ಸ್ನೆಹದಂತಿದ್ದಿತ್ತು | ||ಟೀಕೆ|| ಉದಕದಲ್ಲಿ ವಡಬಾಗ್ನಿಯಿರ್ದು ಆ ಉದಕವನ ಶೋಷಣಂಗೆಯ್ಯದೆ....ಕ್ಷಯ ರಸಸೀತಳೀಕೃತಮಪ್ಪ ಪಿಂಡದ ಮಧ್ಯದಲ್ಲಿ ಚಿದಗ್ನಿ ಸ್ವರೂಪವಾದ ವಸ್ತುವಿರ್ದುರ ಹಸ್ತವಾಗಿರ್ಪುದೆಂಬುದೀಗ | **ವುದಕದೊಳಗೆ ಬೈಚಿಟ್ಟ ಬಯುಕೆಯ ಕಿಚ್ಚಿನಂತಿದ್ದಿತೆಂಬ ಶಬ್ದ ಕರ್ತ....**

**ನೋಡು:** ೧. ಷಟ್ಸ್ಥಲದ ವಚನಗಳು (ಟೀಕೆ)
೨. ಬಸವನ ಷಟ್ಸ್ಥಲದ ಬೆಡಗಿನ ವಚನದ ಟೀಕೆ
೩. ಶ್ರೀ ಬಸವಣ್ಣನವರ ಷಟ್‌ಸ್ಥಳದ ವಚನಗಳು

---

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೪೪–೪೫
೨. ಕರ್ಣಾಟಕ ಕವಿಚರಿತೆ, ಭಾ. ೨, ಪು. ೩೯೭–೩೯೮

## ೧೪೩

**ಗ್ರಂಥ:** ಬಸವೇಶ್ವರನ ಕಾವ್ಯ

**ಪ್ರಭೇದ:** ಸಾಂಗತ್ಯ **ಸಂಧಿ:** ೧೯ **ಪದ್ಯ:** ೩೦೮೬

**ಕರ್ತೃ:** ಬಸವಲಿಂಗ

**ಕಾಲ:** ಸು. ೧೭೦೦

**ಆಕಾರ:** ಕಾಗದ. ೧·೨×೬·೫ ಇಂಚು

**ಪುಟ:** ೧–೮೦೮

**ಸಾಲು:** ೧೬

**ಅಕ್ಷರ:** ೧೨

**ಸಾರಾಂಶ :** ಬಸವಣ್ಣನವರ ಚರಿತ್ರೆಯನ್ನು ವರ್ಣಿಸುವ ಅಪ್ರಕಟಿತ ಕಾವ್ಯವಿದು. ಕವಿ ಕೃತಿಗಳನ್ನು ಕುರಿತಾದ ಪದ್ಯಗಳನ್ನಿಲ್ಲಿ ಉದ್ಧರಿಸುತ್ತೇವೆ:

ಕಂ ॥ ಶ್ರೀಶಿವನ ಚಿತ್ಪ್ರಭಾಂಗನೆ
ಶ್ರೀ ಶಿವನೊಳ ಹೊರಗೆ ತೊಳಪ ವಿಮಲ ಜ್ಯೋತಿ
ಶ್ರೀ ಶಿವನ ಧರ್ಮವಾಹನ
ಶ್ರೀ ಶಿವನ ಪರಾವತಾರ ಜಯ ಜಯ ಬಸವಾ ॥

ಕೃತಿ ಬಸವೇಶನುನ್ನತ ಚಾರಿತ್ರಮೀ
ಕೃತಿಗೆ ಕರ್ತನು ಬಸವೇಶಾ
ಶಿತ ನೀಲಕಂಠರೀ ಕೃತಿಯ ಲಾಲಿಪರೀ
ಕೃತಿಯು ಬಸವಲಿಂಗನುಸಿರ್ದಾ ॥ ಸಾಂಗತ್ಯ ॥

**ಅಂತ್ಯ :**

ಇದು ವೀರಶೈವ ಚಿನ್ನಿಧಿ ಬಸವೇಶನ
ಪದ ಪದ್ಮ ಭೃಂಗ ಸದ್ವಿಮಳಾ
ಹೃದಯ ಬಸವಲಿಂಗ ಮುದದೆ ಪೇಳಿದ ಕಾವ್ಯ
ವಿದು ಪತ್ತೊಂಭತ್ತನೆಯ ಸಂಧಿ ॥

ಕವಿಯ ಹೆಸರು 'ಗರುಣಿಯ ಬಸವಲಿಂಗನೆಂದೂ, ೧೩೬೯ರಲ್ಲಿ ಜೀವಿಸಿದ ನೆಂದೂ ಶ್ರೀ ವಿ. ಶಿವಾನಂದರು ಅಭಿಪ್ರಾಯ ಪಡುತ್ತಾರೆ.

---

**ಆಕರ :**

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೨, ಪು. ೩೭-೩೮, ಹಸ್ತಪ್ರತಿ, ನಂ. ಕೆ ಬಿ. ೪೫೮
೨. ವಿ. ಶಿವಾನಂದ : ಸೀಮಾಪುರುಷ ಷಡಕ್ಷರದೇವ, ಪು. ೭೮

## ೧೪೭

**ಗ್ರಂಥ :** ಬಸವೇಶ್ವರನ ತಾರಾವಳಿ

**ಪ್ರಭೇದ :** ವಾರ್ಧಕ ಷಟ್ಪದಿ **ಪದ್ಯ :** ೨೨

**ಕರ್ತೃ :** ?

**ಕಾಲ :** ಸು. ೧೬೦೦

**ಸಾರಾಂಶ** : ಕವಿಚರಿತೆಕಾರರು ಗ್ರಂಥದ ಬಗೆಗೆ ಹೇಳಿದುದನ್ನಿಲ್ಲಿ ಎತ್ತಿಕೊಡುತ್ತೇವೆ. "ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿಯಲ್ಲಿರುವಂತೆ ಪ್ರತಿಪದ್ಯವೂ 'ಚರಣಾಂಬುಜಕ್ಕೆ ಶರಣು' ಎಂದು ಮುಗಿಯುತ್ತದೆ."

ರವಿಯುದಯವಂ ಬಯಸಿ ಒಱಲುವಂಬುಜದಂತೆ ।
ಶಿವಪದದ ಮಾರ್ಗದಲಿ ಯೆಡೆವಿಡದೆ ಸಂಚರಿಪ ।
ರವರ ದರುಶನವೇದಿಗೆನಗೆ ದೊರಕುವುದೆಂದು ಮನದೊಳಗೆ ತೊಟಿಳಿ ಬಟಿಲಿ ॥
ದಿವರಾತ್ರಿ ಹಲುಬಿ ಹಂಬಲಿಸುವವನಾವ ।
ನವನ ಪದಕಮಲಕೆಱಗುವ ಮಧುಕರನ ಮಾಡು ।
ಶಿವನಿಮ್ಮ ಬೇಡುತಿಹೆನೆಂಬ ಬಸವೇಶ್ವರನ ಚರಣಾಂಬುಜಕ್ಕೆ ಶರಣು॥

ಇದು ಬಸವಣ್ಣನವರ ಜೀವನದ ಪರಿಯನ್ನು ಮಾರ್ಮಿಕವಾಗಿ ತಿಳಿಯಪಡಿಸುವದೆಂದು ತೋರುತ್ತದೆ.

'ಕವಿಗಳು ಗೊತ್ತಿಲ್ಲದ ಕೆಲವು ಗ್ರಂಥಗಳ' ಪಟ್ಟಿಯಲ್ಲಿ ಇದನ್ನು ಕವಿಚರಿತೆಕಾರರು ಕೊಟ್ಟಿರುವರು.

---

ಆಕರ :

೧. ಕರ್ನಾಟಕ ಕವಿಚರಿತೆ, ಭಾ. ೩, ಪು. ೨೮೬

೨. ವಿ. ಶಿವಾನಂದ: ಸೀಮಾಪುರುಷ ಷಡಕ್ಷರದೇವ, ಪು. ೭೮

## ೧೪೮

**ಗ್ರಂಥ :** ಬಸವೇಶ್ವರನ ನೂರೆಂಟು ನಾಮ

**ಪ್ರಭೇದ:** ಹಾಡು ? ಷಟ್ಪದಿ ?

**ಆಕಾರ :** ತಾಳವೋಲೆ, ೧೫·೩×೧ ಇಂಚು

**ಪತ್ರ :** ೩೫ರಿಂದ೩೭

**ಸಾಲು :** ೪

**ಅಕ್ಷರ :** ೫೦

ಆದಿ : ಬಸವೇಶ್ವರನ ನೂರೆಂಟು ನಾಮ
ಃ ಪಿಸಬಲ್ಲವರಾರು ಸಂತತ ಬಸವ ನಾಮುಮಂ
ಃ ಪುಳತರ ವಿಮಳ ಭಕ್ತಿ ಜ್ಞಾನ ಮೋಕ್ಷಮಂ
ತನ ಶತಕೋಟಿ ಪ್ರಕಾಶ ಬಸವೇಶ ನೀವೊಲಿದು ಸಹಜವೆಂದು
ನಂಬಿ ॥ ಪಲ್ಲ ॥

ಅಂತ್ಯ : ಆದಿಗಣನಾಥ ನಿರ್ಮಲ ಜ್ಯೋತಿ ಜ್ಞಾ ।
ನೋದಯ ಪವಿತ್ರ ಗೋತ್ರಂ ವಿಚಿತ್ರಂ ಬಸವಂ ।
ನಾದಿ ಜಂಗಮ ಹೃದಯ ತೋಷನೆಂದೆಂಬ ನೂರೆಂಟು
ನಾಮುವನಾವಗಂ ।
ವೋದಿ ಬರದಡೆ ಕೇಳಿಕೊಂಡಾಡಿ ಜಪಿಸಿದಡೆ ।
ಸಾಧ್ಯಮಪ್ಪುದು ಪರಮ ಸುಖ ಭೋಗ ರುದ್ರಪದ ।
ವಾದಿಯಾಗಿಹ ಸಂಪದವ ಪಡೆದೂ ಗುರು
ನಿರಂಜನ ಲಿಂಗದೊಡವೆರವನೂ ॥

---

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೩೮

೧೪೯

**ಗ್ರಂಥ : ಬಸವೇಶ್ವರನ ಪರಿವರ್ಧಿನಿ**

**ಪ್ರಭೇದ :** ಪರಿವರ್ಧಿನಿ ಷಟ್ಪದಿ ?

**ಕರ್ತೃ :** ಹಿರೇಮಠ (ಕರಿಬಸವಾರ್ಯ ನೂರೊಂದಯ್ಯ)

**ಕಾಲ :** ಜ. ೧೭೪೫ ಮ. ೧೮೪೦

**ಸಾರಾಂಶ :** ಕವಿಗಳು ಕಲಬುರ್ಗಿ ಜಿಲ್ಹಾ ಚಿಂಚೋಳಿ ತಾಲೂಕಿನ ಐನಿಲ ಗ್ರಾಮದವರು ಚಿಂಚೋಳಿಯ ಹಂಪೀ ಮಠದಲ್ಲಿ ಅವರ ಸಮಾಧಿ ಇದೆ. ಅಲ್ಲಿ ಸದ್ಯದ ಮಠಾಧಿಪತಿಗಳಲ್ಲಿ ಪ್ರಸ್ತುತ ಗ್ರಂಥದ ಹಸ್ತಪ್ರತಿಯಿರುವುದಾಗಿ ಚಿಂಚೋಳಿ ಬಸವಪ್ಪ ಪಾಟೀಲ ಹುಡೇದ ಹಳ್ಳೀಕರ ಎಂಬವರು 'ಶಿವಾನುಭವ' ದಲ್ಲಿ ಬರೆದಿರುವರು. ಅಪ್ರಕಟಿತ.

---

ಆಕರ :

೧. ಶಿವಾನುಭವ, ಸಂಪುಟ ೬; ಸಂಚಿಕೆ ೪; ಪು. ೨೩೩-೨೩೯. ಅಕ್ಟೋಬರ ೧೯೩೧

### ೧೫೦

**ಗ್ರಂಥ : ಬಸವೇಶ್ವರನ ಪವಾಡಗಳು**

ಪ್ರಭೇದ : ಗದ್ಯ–ಪವಾಡ

ಕರ್ತೃ : ಮರುಳಸಿದ್ಧ

ಕಾಲ : ಸು. ೧೭೦೦

ಆಕಾರ : ಕಾಗದ. ೧೪.೧ × ೮.೯ ಇಂಚು

ಪತ್ರ : ೧–೬

ಸಾಲು : ೨೦

ಅಕ್ಷರ : ೪೨

ಸಾರಾಂಶ : ಇದರ ಆದ್ಯಂತಗಳನ್ನು ಕೆಳಗೆ ಕೊಡುತ್ತೇವೆ :

ಆದಿ: ಶ್ರೀಮದನುಪಮ ಕಲ್ಯಾಣಪುರವರಾಧೀಶ ಮಹಾಮಹಿಮ ಬಸವರಾಜ ದೇವರು ಯಿವರು ಶಿವನಾಜ್ಞೆಯಿಂದ ನಂದಿಕೇಶ್ವರ.... ಲೋಕದಲ್ಲಿ ಮಾದರಸ ಮಾದಲಾಂಬೆಯರ ಗರ್ಭದಲ್ಲಿ ಬಸವನಾಮದಲವತರಿಸಿ ಕೆಳಗೆ ಉದಹರಿಸಿದ ಪ್ರಕಾರ ೩೬ ಪವಾಡಗಳ ನಡಿಸಿ ಕಪ್ಪಡಿ ಸಂಗಮನಾಥಲಿಂಗದಲ್ಲಿ ಐಕ್ಯರಾದರು...

ಅಂತ್ಯ : "ದೇಶಮಧ್ಯದಲ್ಲಿ ಆಕಳ....ಳ ಕಳ್ಳರು ಕದ್ದುಕೊಂಡು ಹೋಗಲು ಕೊಡುವಾತ ಸಂಗ ಕೊಂಬುವಾತ ಸಂಗನೆಂದು ವಚನ ಹಾಡಿ ಅವರನ ಭಕ್ತರ ಮಾಡಿದ್ದರು. ಸಂಬಂಧ ವಬ್ಬ ಕಳ್ಳನು ರಾತ್ರಿ ಮನಿಗೆ ಬಿದ್ದು ತಾನು ನೀಲಲೋಚನೆ ಮಲಗಿರ್ದಾಗ ವಸ್ತ್ರವ ಸುಲಿದುಕೊಳಲು ಸಂಗಮರೂಪನೆಂದಾಡಿ ಆ ಕಳ್ಳನ್ನ ಜಂಗಮನ್ನ ಮಾಡಿದ್ದುದಯ........ಸಲ ಬಸವರಾಜನು ಮತ್ತೊಂದು ದಿನ ರಾತ್ರಿಯಲ್ಲಿ ಕಳ್ಳ ಬಂದು ದ್ರವ್ಯವ ಸುಲಿಯುವಾಗ ಯಚ್ಚತ್ತು ಸಂಗನೆಂದು ಮೊಟ್ಟೆಕಟ್ಟಿ ಹೊರಿಸಿ ಜಂಗಮನ್ನ ಮಾಡಿದ್ದು ವಚನ ಸಂಬಂಧ."

---

ಆಕರ :

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೪೦, ನಂ. ಕೆ. ಎ. ೧೮೭/೨

### ೧೫೧

**ಗ್ರಂಥ : ಬಸವೇಶ್ವರನ ಪವಾಡದ ಸ್ತೋತ್ರ**

ಪ್ರಭೇದ : ತ್ರಿಪದಿ ಪದ್ಯ : ೨೦

**ಕರ್ತೃ :** ಚನ್ನವೀರೇಶ ?

**ಆಕಾರ:** ಕಾಗದ. ४×४ ಇಂಚು

**ಪುಟ :** ೧೮ರಿಂದ ೨೨

**ಸಾಲು :** ೧೧

**ಅಕ್ಷರ :** ೧೪

**ಸಾರಾಂಶ :** ಬಸವಣ್ಣನವರು ಸತ್ತ ಆಕಳನ್ನು ಎತ್ತಿ ಹಾಲುಕರೆದುದು, ಶರಣ ನಾಗಮಯ್ಯನ ಬೆರಳಿನಲ್ಲಿ ಹಾಲಕರೆದುದು, ಕಳ್ಳನು ಜೂಜಿನಲ್ಲಿ ಮಾಣಿಕವ ಸೋತು ಕಳವು ಮಾಡಬಂದಾಗ ತೊಗರಿಯ ಕಾಳನ್ನೇ ಮಾಣಿಕ ಮಾಡಿದುದು, ಹುಲ್ಲು ಜಂಗಮನಿಗೆ ಜನ್ಮವಿತ್ತುದು— ಇವೇ ಮೊದಲಾದ ಪವಾಡಗಳು ಇದರಲ್ಲಿ ವರ್ಣಿಸಲ್ಪಟ್ಟಿವೆ.

ಕೆಳಗೆ ಕೆಲವು ಪದ್ಯಗಳನ್ನಾಯ್ದು ಕೊಡುತ್ತೇವೆ :

**ಆದಿ :** ಆದಿಯುಗದಲಿಂದಲತ್ತ ।
ಆದಿಮೂಲಮೂರ್ತಿ ನೀನೆ ।
ಮೇಧಿನಿಯ ಧರಿಸಿದಂತ ಬಸವ ಪಾಹಿಮಾಂ ॥ ೧ ॥
ಬಸವ ಶಿವನೆ ಶಿವನೆ ಬಸವ ।
ವೃಷಭನಾದಿ ಋಷಿಯು ನೀನೆ ।
ವಸುಧಿ ಜನರ ಸಲಹಿದಂತ ಬಸವ ಪಾಹಿಮಾಂ ॥ ೨ ॥

**ಅಂತ್ಯ :** ಮಂಗಳವಾಡದಲ್ಲಿ ಮೆರೆವ ।
ತುಂಗಮಲ್ಲಿ ಶೆಟ್ಟಿ ಮನಿಯ
ಜಂಗಮಯ್ಯ ಬೇಡಲಿತ್ತ ಬಸವ ಪಾಹಿಮಾಂ ॥೧೯॥
ಧರಿಯೊಳ್ಳೈಯನುಲಿ ವಾಸ ।
ಗುರುವೆ **ಚನ್ನವೀರೇಶ** ವಿಷ್ಟಲಿಂಗ ।
ಕರ್ಪುರೇಶ ಬಸವ ಪಾಹಿಮಾಂ ॥೨೦॥

ಈ ಪವಾಡ ಸ್ತೋತ್ರವನ್ನು ' ಬಸವಾಷ್ಟಕ ಇತ್ಯಾದಿ ' ಎಂಬ ತಲೆಕಟ್ಟಿನಲ್ಲಿ ತಪ್ಪಾಗಿ ಕ.ಹ.ವ. ಸೂಚಿಯಲ್ಲಿ ಸೇರಿಸಿದೆ. ಆದರಲ್ಲಿ ಕೊನೆಯ ಪದ್ಯ ಇಂತಿದೆ:

ಧರಣಿ ಐನೆಲೆ ವಾಸ ।
ಗುರುವು **ಚಂನವೀರ** ದೇವ ।
ಕರಪುರಿ ಯಿಷ್ಟಲಿಂಗ ಬಸವ ಪಾಹಿಮಾಂ ॥

---

**ಆಕರ :**

೧. ಕನ್ನಡ ಸಂಶೋಧನ ಸಂಸ್ಥೆ ಹಸ್ತಪ್ರತಿ, ನಂ. ೬೧೭
೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೩೬. ಕೆ ಬಿ. ೩೫೧/೩

೧೫೨

**ಗ್ರಂಥ : ಬಸವೇಶ್ವರನ ಪಂಚಸ್ತೋತ್ರ**

**ಪ್ರಭೇದ :** ೬ ವಿಧ ಷಟ್ಪದಿ- ಟೀಕೆ **ಪದ್ಯ :** ೯೮

**ಕರ್ತೃ :** ?

**ಕಾಲ :** ಸು. ೧೫೫೦

**ಆಕಾರ :** ಕಾಗದ. ೨೨ × ೧೪ ಸೆ. ಮಿ.

**ಪುಟ :** ೧೩೯

**ಸಾಲು :** ೧೬

**ಅಕ್ಷರ :** ೨೦

**ಸಾರಾಂಶ :** ಪ್ರತಿ ಪದ್ಯಕ್ಕೂ ಶಬ್ದಶಃ ಅರ್ಥವನ್ನು ಕೊಟ್ಟಿದೆ. ಟೀಕೆ-ಯಿಂದ ಇದರಲ್ಲಿಯ ಕೆಲವೇ ಪದ್ಯಗಳು ಮಾತ್ರ ಬಸವಣ್ಣನವರನ್ನು ಕೀರ್ತಿಸುವಂತಿ-ವೆ. ಕ. ಸಂ. ಸಂಸ್ಥೆಯ ೨೧೧೦ ನೆಯ ಹಸ್ತಪ್ರತಿಯಲ್ಲಿ "**ಬಸವೇಶ್ವರನ ಚಿದಾಂಗ ಸ್ವರೂಪವಾದ** । ವೃಷಭೇಶ್ವರ ಸ್ವಾಮಿಗಳ ಐದು ಪ್ರಕಾರವಾದ । ಸ್ತೋತ್ರ ಸ್ತುತಿಯು" ಎಂದಿರುವದರಿಂದ ಬಸವಣ್ಣನವರ ಆಂತರಿಂಕ ಜೀವನವನ್ನು ಐದು ಬಗೆಯಲ್ಲಿ ವರ್ಣಿಸಿರಬಹುದು.

**ಆದಿಯುಪದ್ಯ :** ಜಯ ಜಯ ಜರಾಮರಣ ಜನ್ಮವರ್ಜಿತ ಹರಣ ।
ಜಯ ಜಯ ಪರಾತ್ಪರವೆ ಜಯತು ಪಾವನ ಗುರುವೆ ॥
ಜಯತೆಂದು **ಬಸವರಾಜರ** ಪಾದಯುಗ್ಮಮಂ
ಸ್ತುತಿಪೆನನವರತ ಮುದದಿಂ ॥

ಟೀಕು ॥ **ಜರಾಮರಣ ಜನ್ಮವರ್ಜಿತಹರಣ ಜಯ ಜಯ** ॥
ಜರ = ಮುಪ್ಪು ; ಮರಣ = ಲಯ ; ಜನ್ಮ= ಉತ್ಪತ್ಯಂಗಳು ; ವರ್ಜಿತ = ಇಲ್ಲ-ದಂಥ ; ಹರಣ = ಪ್ರಾಣವನ್ನುಳ್ಳಂಥ ; ವೃಷಭೇಶ್ವರಂಗೆ ; ಜಯ ಜಯ = ಸರ್ವೋ-ತ್ಕರ್ಷವಾಗಲಿ, ಸರ್ವೋತ್ಕರ್ಷವಾಗಲಿ ; **ಮತ್ತಂತುಮಲ್ಲದೆ** : ಜರಾಮರಣಜನ್ಮ-ವರ್ಜಿತಹರಣ = ಮುಪ್ಪುವ್ಯುತ್ಪತ್ತಿಲಯಂಗಳಿಲ್ಲದ ಸದ್ಭಕ್ತರುಗಳಿಗೆ ಪ್ರಾಣವಾ ದಂಥ;ವೃಷಭೇಶ್ವರಂಗೆ ಜಯಜಯ=ಸರ್ವೋತ್ಕರ್ಷವಾಗಲಿ,ಸರ್ವೋತ್ಕರ್ಷವಾಗಲಿ; **ಮತ್ತಂತುಮಲ್ಲದೆ :** ಜರಾಮರಣಜನ್ಮವರ್ಜಿತ = ಸೃಷ್ಟಿ ಸ್ಥಿತಿ ಲಯಂಗಳಿಲ್ಲದ ಸದ್ವೀರಮಹೇಶ್ವರರುಗಳಿಗೆ ; ಹರಣ =ಪ್ರಾಣವಾದಂಥ ; ವೃಷಭೇಶ್ವರಂಗೆ ಜಯ

ಜಯ = ಸರ್ವೋತ್ಕರ್ಷವಾಗಲಿ, ಸರ್ವೋತ್ಕರ್ಷವಾಗಲಿ; ಜಯಜಯ ಪರಾತ್ಪರವೆ= ಆವುದ ಪರ ಅದಕ್ಕೆ ಪರವಾದಂಥ ವೃಷಭೇಶ್ವರಂಗೆ; ಜಯ ಜಯ= ಸರ್ವೋತ್ಕರ್ಷ ವಾಗಲಿ; ಸರ್ವೋತ್ಕರ್ಷವಾಗಲಿ; **ಜಯತು ಪಾವನ ಗುರುವೆ:** ಪಾವನಗುರುವೆ= ಪವಿತ್ರಾಚಾರ್ಯನಾದ ದೇವನೆ; ಜಯತು=ಸರ್ವೋತ್ಕರ್ಷವಾಗಲಿ; **ಜಯತೆಂದು ಬಸವರಾಜರ ಪಾದಯುಗ್ಮಮಂ ಸ್ತುತಿಸುವೆ ನನವರತ ಮುದದಿಂ** ॥ ಬಸವ ರಾಜರ = ವೃಷಭೇಶ್ವರನ; ಪಾದಯುಗ್ಮಮಂ = ಚರಣದ್ವಂದ್ವವನು; ಅನವರತ = ಅಜಸ್ರವು; ಮುದದಿಂ = ಸಂತೋಷದಿಂದೆ; ಜಯತೆಂದು = ಸರ್ವೋತ್ಕರ್ಷವಾಗಲಿ ಯೆನುತ್ತ; ಸ್ತುತಿಸೆಂ =ಸ್ತೋತ್ರವ ಮಾಡುವೆನು.

DCKM ದ ಲ೦೧ರಲ್ಲಿ ಇದಕ್ಕೆ 'ವೃಷಭೇಶ್ವರ ಸ್ತುತಿ' ಎಂದು ಹೆಸರಿಸ ಲಾಗಿದೆ.

---

ಆಕರ :

೧. ಕನ್ನಡ ಸಂಶೋಧನ ಸಂಸ್ಥೆ, ಹಸ್ತಪ್ರತಿ, ನಂ. ೬೨೧ ಮತ್ತು ೧೦೨೦
೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೩೯-೪೦
೩. Descriptive Catalogue of Kannada Manuscripts- Madras Vol. IV. No. 761 p. 1083-1085. ಇದೇ No. 801, p. 1125-1127. Vol. V. No. 842 p. 1165-1169
೪. ಕರ್ನಾಟಕ ಕವಿಚರಿತೆ, ಭಾಗ ೩, ಪು. ೨೮೦
೫. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

೧೫೩

**ಗ್ರಂಥ :** ಬಸವೇಶ್ವರನ ಭಕ್ತಿಯ ವಚನಗಳು

**ಪ್ರಭೇದ :** ವಚನ ಸಂಖ್ಯೆ: ೧೦೧

**ಕರ್ತೃ:** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಹಳಕಟ್ಟಿ (ಫಕೀರಪ್ಪ ಗುರುಬಸಪ್ಪ)
ಜ. ೨-೭-೧೮೮೦ ಮ. ೨೯-೬-೧೯೬೪

**ಪುಟ :** ೨+೫೬=೫೮

**ಸ್ಥಳ :** ವಿಜಾಪುರ

**ಪ್ರಕಾಶಕ :** ವೀರಶೈವ ಜ್ಞಾನಸಾಹಿತ್ಯ ಭಂಡಾರ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೪

**ಬೆಲೆ :** ೦೦-೭೫

**ಮಾಲೆ :** ಶಿವಾನುಭವ ಗ್ರಂಥಮಾಲಾ ?

**ಸಾರಾಂಶ :** ಸಂಪಾದಕರು "ಬಸವೇಶ್ವರನ ಭಕ್ತಿಯ ಸಂಬಂಧವಾಗಿ ಇರುವ ೧೦೧ ವಚನಗಳು **'ಬಸವೇಶ್ವರನ ಭಕ್ತಿಯ ವಚನಗಳು'** ಎಂಬ ಹೆಸರಿನಿಂದ ಗ್ರಂಥರೂಪವಾಗಿ ಈ ಮೊದಲಿಗೆಯೇ ಪ್ರಸಿದ್ಧವಾಗಿರುತ್ತವೆ" ಎಂದು 'ಪರಮಾತ್ಮನ ಸ್ವರೂಪ' ಎಂಬ ಗ್ರಂಥದ ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಪ್ರತಿಯೊಂದು ವಚನಕ್ಕೆ ಅರ್ಥವಿವರಣೆ ಮಾಡಲಾಗಿದೆ.

---

ಆಕರ :

೧. ಕಲಕತ್ತಾ ರಾಷ್ಟ್ರೀಯ ಗ್ರಂಥಭಂಡಾರದಲ್ಲಿದೆ.

## ೧೫೪

**ಗ್ರಂಥ :** **ಬಸವೇಶ್ವರ ನಾಮಾವಳಿ**

**ಪ್ರಭೇದ :** ಸ್ತೋತ್ರ

**ಸಂಪಾದಕ :** ಚೆನ್ನಮಲ್ಲಿಕಾರ್ಜುನ ಜ. ಸು. ೧೯೦೦

**ಸ್ಥಳ :** ದಾವಣಗೆರೆ ?

**ಪ್ರಕಾಶಕ :** ಪ್ರಥಮ

**ಆವೃತ್ತಿ :** ೧೯೩೧ ?

**ಮಾಲೆ :** ಸದ್ಧರ್ಮ ಗ್ರಂಥಮಾಲೆ, ೧ ?

**ಸಾರಾಂಶ :** ಗ್ರಂಥ ನಮ್ಮ ಅವಲೋಕನಕ್ಕೆ ಸಿಕ್ಕಿಲ್ಲ. ಪ್ರಕಟವಾದುದಾಗಿ ತಿಳಿದಿದೆ.

---

ಆಕರ :

೧. ಬಸವೇಶ್ವರ ಸ್ತೋತ್ರಪದ್ಯಗಳು, ಕವರ ಪುಟದಲ್ಲಿ ಹೇಳಿದೆ.

೧೫೫

**ಗ್ರಂಥ:** ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ: ಹರಳಯ್ಯ ಮಧುವಯ್ಯಗಳ ಕಥೆ

**ಪ್ರಭೇದ:** ಗದ್ಯ-ವಿಮರ್ಶೆ

**ಕರ್ತೃ:** ಉತ್ತಂಗಿ ( ಚೆನ್ನಪ್ಪ ದಾನಿಯೇಲಪ್ಪ )

**ಕಾಲ:** ಜ. ೨೮-೧೦-೧೮೮೧ ಮ. ೨೮-೮-೧೯೬೨

**ಅಳತೆ:** ೧೭.೫×೧೨ ಸೆ. ಮಿ.

**ಪುಟ:** ೧೨+೬೪=೭೬

**ಸಾಲು:** ೨೭

**ಅಕ್ಷರ:** ೨೫

**ಸ್ಥಳ:** ಧಾರವಾಡ

**ಪ್ರಕಾಶಕ:** ಕರ್ತೃ

**ಆವೃತ್ತಿ:** ಪ್ರಥಮ ದ್ವಿತೀಯ

**ಮಿತಿ:** ೧೦-೪-೧೯೩೨ ೧೯೬೨

**ಬೆಲೆ:** ೧=೨೫ ರೂ.

**ಸಾರಾಂಶ:** "ಹರಳಯ್ಯ ಮಧುವಯ್ಯಗಳ ಕಥೆಯು ವೀರಶೈವರ ಉದ್ಗ್ರಂಥಗಳಲ್ಲಿ ಅಂಶತಃ ದೊರೆಯುತ್ತಿದ್ದರೂ, ಇದು ಶರಣ ಲೀಲಾಮೃತವೆಂಬ ಗ್ರಂಥದಲ್ಲಿ ಕಥಿಸಲ್ಪಟ್ಟಿರುವಷ್ಟು ವಿಸ್ತಾರವಾಗಿ ಬೇರೆ ಯಾವ ಗ್ರಂಥದಲ್ಲಿ ಹೇಳೋಣವಾಗಿರುವದಿಲ್ಲ. ಆದರೆ ಇತ್ತೀಚೆಗೆ ನಮಗೆ ಹಸ್ತಗತವಾದ ಒಂದು ಓಲೆಯ ಗ್ರಂಥದಲ್ಲಿ ಈ ಕಥೆಯು ಶರಣ ಲೀಲಾಮೃತಕ್ಕಿಂತ ಹೆಚ್ಚು ವಿವರವಾಗಿರುವದರಿಂದಲೂ ಆದರಲ್ಲಿ ಇಲ್ಲದ ಕೆಲವು ಹೊಸ ವಿಷಯಗಳು ಇದರಲ್ಲಿ ಬಂದಿರುವದರಿಂದಲೂ, ಪದ್ಯರೂಪವಾಗಿರುವ ಈ ಗ್ರಂಥವನ್ನು ಗದ್ಯದಲ್ಲಿ ಬರೆದಿರುವೆವು.

"ಇದರಲ್ಲಿ ಬಸವೇಶ್ವರನು ಅಸಾಧ್ಯವಾದ ಧೈರ್ಯಸಾಹಸಗಳಿಂದ ಯುಕ್ತನಾಗಿ ಮಹಾತ್ಮಾ ಗಾಂಧಿಯವರಿಗಿಂತಲೂ ಸುಮಾರು ೮೦೦ ವರ್ಷಗಳ ಪೂರ್ವದಲ್ಲಿಯೇ ಅಂತ್ಯಜರನ್ನು ಬಿಗಿದಪ್ಪಿದ್ದಲ್ಲದೆ ಅವರನ್ನು ತನಗಿಂತಲೂ ಶ್ರೇಷ್ಠರೆಂದು ಭಾವಿಸಿ ತನ್ನ ಕಾಲದ ಪರಿಸ್ಥಿತಿಗೆ ವಿರುದ್ಧವಾಗಿ ಸಡ್ಡು ಹೊಡೆದು ನಿಂತಿರುವದನ್ನು ಪ್ರಾಂಜಲ ಮನಸ್ಸಿನ ಕನ್ನಡಿಗರೆಲ್ಲರೂ ಕಣ್ಣಾರೆ ನೋಡಬಹುದು...."

—ಲೇಖಕರ 'ಮುನ್ನುಡಿ'ಯಿಂದ

ಆದಿಯಲ್ಲಿ ಹರಳಯ್ಯ – ಮಧುವಯ್ಯಗಳನ್ನು ಐತಿಹಾಸಿಕ ವ್ಯಕ್ತಿಗಳೆಂದು ಸಿದ್ಧಪಡಿಸುವಲ್ಲಿ ಅನೇಕ ಆಧಾರಗಳನ್ನು ಬಳಸಿಕೊಳ್ಳಲಾಗಿದೆ. **'ಹಿನ್ನುಡಿ'**ಯಲ್ಲಿ ಪಂಚಮರ ಉದ್ಧಾರದ ವಿಷಯಕ್ಕೆ ಆಕ್ಷೇಪವೆತ್ತುವವರಿಗೆ ಸಮರ್ಪಕವಾದ ಉತ್ತರ ಕೊಡಲು ಯತ್ನಿಸಿದೆ. ಕೊನೆಗೆ ಈ ದಿಶೆಯಲ್ಲಿ **'ಭಾರತೀಯರ ಆದ್ಯ ಹಾಗು ಆಧುನಿಕ ಕರ್ತವ್ಯ'** ವನ್ನು ಬೋಧಾತ್ಮಕವಾಗಿ ಹೇಳಿದೆ.

೧೫೬

**ಗ್ರಂಥ : ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ**

**ಪ್ರಭೇದ :** ಗದ್ಯ-ವಿಮರ್ಶೆ

**ಕರ್ತೃ :** ಹಾಲಪ್ಪನವರು (ಚೆನ್ನಬಸವಪ್ಪ ಮುರಿಗೇಂದ್ರಪ್ಪ)

**ಕಾಲ :** ಸು. ೧೯೦೦

**ಆಕಾರ :** ೧೮ × ೧೨ ಸೆ. ಮಿ.

**ಪುಟ :** ೪೯

**ಸಾಲು :** ೨೭

**ಸ್ಥಳ :** ಧಾರವಾಡ

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧೯೨೮

**ಬೆಲೆ :** ೦–೪–೦ ಆಣೆ

**ಸಾರಾಂಶ :** "ಇದರಲ್ಲಿ ಬಸವೇಶ್ವರನ ಯತಾರ್ಥವಾದ ಇತಿಹಾಸ, ನೈತಿಕ, ಸಾಮಾಜಿಕ, ಧಾರ್ಮಿಕ, ವೈಚಾರಿಕ ಕ್ರಾಂತಿಗಳಲ್ಲದೆ ಅವನ ಆತ್ಮಬಲ, ಯೋಗ್ಯತೆ, ಕಾರ್ಯಶಕ್ತಿ, ವ್ಯಕ್ತಿಯ ಮಹತ್ವ, ಮೂರ್ತಿತ್ವದ ರಹಸ್ಯ ಮುಂತಾದ ವಿಷಯಗಳು ತಾರತಮ್ಯ ರೂಪವಾಗಿ ಪ್ರತಿಪಾದಿಸಲ್ಪಟ್ಟಿವೆ."

'ಕೊನೆಯಲ್ಲಿ ಶ್ರೀ ಬಸವೇಶ್ವರ ಮಹಾರಾಜಕೀ ಜಯ' ಎಂಬ ೧೩ ನುಡಿಗಳ ಷಟ್ಪದಿ ಕಾವ್ಯವಿದೆ. 'ಹಿಂದೂಸಮಾಜ ಹಿತಚಿಂತಕ' (ಉತ್ತಂಗಿ ಚೆನ್ನಪ್ಪ)ರ ಅಭಿಪ್ರಾಯಗಳನ್ನು ಕೊನೆಗೆ ವಿವರಿಸಿದೆ.

---

**ವಿಮರ್ಶೆ :**

೧. ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೧೪; ಪು. ೨೬೨

೧೫೭

**ಗ್ರಂಥ:** ಬಸವೇಶ್ವರನೂ ವೀರಶೈವರೂ

**ಪ್ರಭೇದ:** ವಿಮರ್ಶೆ - ಕಥೆ

**ಕರ್ತೃ:** ಕೇಸರಿ (ಎಮ್. ಎಸ್.)

**ಕಾಲ:** ಜ. ೧೮೯೬

**ಆಕಾರ:** ೨೧×೧೩ ಸೆ. ಮಿ.

**ಪುಟ:** ೧೩

**ಸ್ಥಳ:** ಧಾರವಾಡ

**ಪ್ರಕಾಶಕ:** ಕರ್ತೃ

**ಆವೃತ್ತಿ:** ಪ್ರಥಮ

**ಮಿತಿ:** ೧೯೩೦

**ಸಾರಾಂಶ:** ಬಸವಣ್ಣನವರ ಚರಿತ್ರೆ ಇದೆ. ಕೊನೆಯಲ್ಲಿ ಹಿಂದುಸ್ತಾನದಲ್ಲಿ ೩೫ ಲಕ್ಷ ವೀರಶೈವರಿರುವರೆಂದೂ ಅವರ ಅಂದಿನ (೧೯೩೦) ಸ್ಥಿತಿಗತಿ, ಶೂದ್ರರೆಂದು ಗಣಿಸಲ್ಪಟ್ಟುದಕ್ಕೆ ಕಾರಣ, ಕರ್ನಾಟಕ ಏಕೀಕರಣದಿಂದ ವೀರಶೈವರಿಗಾಗುವ ಲಾಭ, ಕೆಲವು ಗಣ್ಯ ವ್ಯಕ್ತಿಗಳ ಚರಿತ್ರೆ — ಮುಂತಾದ ಸಂಗತಿಗಳನ್ನು ಹೇಳಿದೆ

೧೫೮

**ಗ್ರಂಥ:** ಬಸವೇಶ್ವರ ರಗಳೆ

**ಪ್ರಭೇದ:** ಉತ್ಸಾಹ ರಗಳೆ

**ಕರ್ತೃ:** ಪಾಲ್ಕುರಿಕೆ ಸೋಮನಾಥ

**ಕಾಲ:** ಸು. ೧೧೯೫

**ಆಕಾರ:** ಕಾಗದ. ೭.೨ × ೫.೮ ಇಂಚು

**ಪತ್ರ:** ೨೦೬ ರಿಂದ ೨೦೭

**ಸಾಲು:** ೧೪

**ಅಕ್ಷರ:** ೨೨

**ಸಾರಾಂಶ :** ಬಸವಣ್ಣನವರ ಹೆಸರಿನ ಮಹಾತ್ಮೆಯನ್ನು ವರ್ಣಿಸುತ್ತದೆ. ಕ. ಹ. ಪ. ಸೂಚಿಯಲ್ಲಿ ಗ್ರಂಥದ ಆದಿಯಲ್ಲಿ ಕೊಟ್ಟ ಪದ್ಯವು ಸಿದ್ಧರಾಮಯ್ಯನ 'ಬಸವಸ್ತೋತ್ರ ತ್ರಿವಿಧಿ'ಯಲ್ಲಿಯ ಆದಿ ಪದ್ಯವಾಗಿದೆ. ಇಲ್ಲಿ ಅದು ಬಹುಶಃ ತಪ್ಪಾಗಿ ಬಂದಿರಬಹುದು.

ಅನಂತರದ ಕಂದಪದ್ಯಗಳನ್ನಿಲ್ಲಿ ಕೊಡುತ್ತೇವೆ :

**ಆದಿ :** ಶರಣಸ್ತವ ಕಲ್ಪಕುಜಾಂ ।
ಕುರಪದ ಸಭಾವಿಜಾತನವ ಕುಸುಮಷ್ಟೋ ।
ತ್ತರ ಶತನಾಮಂಗಳ ಬಸ ।
ವರಸಂಗರ್ಪಿಸಿದ ಪಾಲ್ಕುರಿಕಿಯ ಸೋಮಾಂಕಂ ॥

**ಅಂತ್ಯ :** ಶರಣಸ್ತವ ಮೆನಲೊಪ್ಪುವ
ಶರಣ ಗಣೋತ್ಸಾಹದ ರಗಳೆಯುಂ ಪಠಿಸಲು ವಿ ।
ಸ್ತರಿಸಲು ತಾಂ ಬರೆದೋದಲು
ವರಸದ್ಭಕ್ತಿರತಿಯುಂ ಬಸವ ನೀವಂ ಕಾಯ್ವಂ ॥

ಇದಕ್ಕೆ 'ಸಮುಗ್ರ ಶರಣಸ್ತವ' ಮತ್ತು 'ಅಷ್ಟೋತ್ತರ ಶತನಾಮ' ಎಂಬ ಬೇರೆ ಹೆಸರುಗಳಿದ್ದಂತಿದೆ.

**ನೋಡು :** ೧. ಅಷ್ಟೋತ್ತರ ಶತ ಬಸವನಾಮಾವಳಿ

---

ಆಕರ :

ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೨, ಪು. ೪೨

೧೫೯

**ಗ್ರಂಥ : ಬಸವೇಶ್ವರ ರಗಳೆ**

**ಪ್ರಭೇದ :** ಕಂದ **ಸಂಖ್ಯೆ:** ೪೬

**ಕಾಲ :** ಸು. ೧೬೦೦

**ಸಾರಾಂಶ :** ಕವಿ ಚರಿತ್ರೆಕಾರರು "ರಗಳೆ ಎಂಬ ಹೆಸರಿದ್ದರೂ ಇದರಲ್ಲಿ ೪೬ ಕಂದಗಳಿವೆ" ಎಂದಿದ್ದಾರೆ. ಕೆಳಗಿನ ಕಂದಪದ್ಯವೊಂದನ್ನು ಉದಾಹರಿಸಿರು-ವರು :

೧೫೭

**ಗ್ರಂಥ:** ಬಸವೇಶ್ವರನೂ ವೀರಶೈವರೂ

**ಪ್ರಭೇದ:** ವಿಮರ್ಶೆ - ಕಥೆ

**ಕರ್ತೃ:** ಕೇಸರಿ (ಎಮ್. ಎಸ್.)

**ಕಾಲ:** ಜ. ೧೮೯೬

**ಆಕಾರ:** ೨೧×೧೩ ಸೆ. ಮಿ.

**ಪುಟ:** ೧೩

**ಸ್ಥಳ:** ಧಾರವಾಡ

**ಪ್ರಕಾಶಕ:** ಕರ್ತೃ

**ಆವೃತ್ತಿ:** ಪ್ರಥಮ

**ಮಿತಿ:** ೧೯೩೦

**ಸಾರಾಂಶ:** ಬಸವಣ್ಣನವರ ಚರಿತ್ರೆ ಇದೆ. ಕೊನೆಯಲ್ಲಿ ಹಿಂದುಸ್ತಾನದಲ್ಲಿ ೩೫ ಲಕ್ಷ ವೀರಶೈವರಿರುವರೆಂದೂ ಅವರ ಅಂದಿನ (೧೯೩೦) ಸ್ಥಿತಿಗತಿ, ಶೂದ್ರರೆಂದು ಗಣಿಸಲ್ಪಟ್ಟದಕ್ಕೆ ಕಾರಣ, ಕರ್ನಾಟಕ ಏಕೀಕರಣದಿಂದ ವೀರಶೈವರಿಗಾಗುವ ಲಾಭ, ಕೆಲವು ಗಣ್ಯ ವ್ಯಕ್ತಿಗಳ ಚರಿತ್ರೆ — ಮುಂತಾದ ಸಂಗತಿಗಳನ್ನು ಹೇಳಿದೆ

೧೫೮

**ಗ್ರಂಥ:** ಬಸವೇಶ್ವರ ರಗಳೆ

**ಪ್ರಭೇದ:** ಉತ್ಸಾಹ ರಗಳೆ

**ಕರ್ತೃ:** ಪಾಲ್ಕುರಿಕೆ ಸೋಮನಾಥ

**ಕಾಲ:** ಸು. ೧೧೯೫

**ಆಕಾರ:** ಕಾಗದ. ೭·೨ × ೫·೮ ಇಂಚು

**ಪತ್ರ:** ೨೦೬ ರಿಂದ ೨೦೭

**ಸಾಲು:** ೧೪

**ಅಕ್ಷರ:** ೨೨

**ಸಾರಾಂಶ:** ಬಸವಣ್ಣನವರ ಹೆಸರಿನ ಮಹಾತ್ಮೆಯನ್ನು ವರ್ಣಿಸುತ್ತದೆ. ಕ. ಹ. ವ. ಸೂಚಿಯಲ್ಲಿ ಗ್ರಂಥದ ಆದಿಯಲ್ಲಿ ಕೊಟ್ಟ ಪದ್ಯವು ಸಿದ್ಧರಾಮಯ್ಯನ 'ಬಸವಸ್ತೋತ್ರ ತ್ರಿವಿಧಿ'ಯಲ್ಲಿಯು ಆದಿ ಪದ್ಯವಾಗಿದೆ. ಇಲ್ಲಿ ಅದು ಬಹುಶಃ ತಪ್ಪಾಗಿ ಬಂದಿರಬಹುದು.

ಅನಂತರದ ಕಂದಪದ್ಯಗಳನ್ನಿಲ್ಲಿ ಕೊಡುತ್ತೇವೆ:

**ಆದಿ:** ಶರಣಸ್ತವ ಕಲ್ಪಕುಜಾಂ ।
ಕುರಪದ ಸಭಾವಿಜಾತನವ ಕುಸುಮಸ್ತೋ ।
ತ್ತರ ಶತನಾಮಂಗಳ ಬಸ ।
ವರಸಂಗರ್ಪಿಸಿದ ಪಾಲ್ಕುರಿಕಿಯ ಸೋಮಾಂಕಂ ॥

**ಅಂತ್ಯ:** ಶರಣಸ್ತವ ಮೆಸಲೊಪ್ಪುವ
ಶರಣ ಗಣೋತ್ಸಾಹದ ರಗಳೆಯಂ ಪಠಿಸಲು ವಿ ।
ಸ್ತರಿಸಲು ತಾಂ ಬರೆದೋದಲು
ವರಸದ್ಭಕ್ತಿರತಿಯಂ ಬಸವ ನೀವಂ ಕಾಯ್ವಂ ॥

ಇದಕ್ಕೆ 'ಸಮಗ್ರ ಶರಣಸ್ತವ' ಮತ್ತು 'ಅಷ್ಟೋತ್ತರ ಶತನಾಮ' ಎಂಬ ಬೇರೆ ಹೆಸರುಗಳಿದ್ದಂತಿದೆ.

**ನೋಡು:** ೧. ಅಷ್ಟೋತ್ತರ ಶತ ಬಸವನಾಮಾವಳಿ

---

**ಆಕರ:**
ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೨, ಪು. ೪೨

೧೫೯

**ಗ್ರಂಥ:** ಬಸವೇಶ್ವರ ರಗಳೆ

**ಪ್ರಭೇದ:** ಕಂದ **ಸಂಖ್ಯೆ:** ೪೬

**ಕಾಲ:** ಸು. ೧೬೦೦

**ಸಾರಾಂಶ:** ಕವಿ ಚರಿತ್ರೆಕಾರರು "ರಗಳೆ ಎಂಬ ಹೆಸರಿದ್ದರೂ ಇದರಲ್ಲಿ ೪೬ ಕಂದಗಳಿವೆ" ಎಂದಿದ್ದಾರೆ. ಕೆಳಗಿನ ಕಂದಪದ್ಯವೊಂದನ್ನು ಉದಾಹರಿಸಿರುವರು:

ಪ್ರಣವದ ಬಳ್ಳಿ ಬಕಾರಂ ।
ಪ್ರಣವದ ನಾದಾನುಸಾರಸಾರ ಸಕಾರಂ ।
ಪ್ರಣವದ ಬಿಂದು ವಕಾರಂ
ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ।

**ನೋಡು :** ೧. ಬಸವೇಶ್ವರ ಸ್ತೋತ್ರ
೨. ಬಸವ ಸ್ತೋತ್ರ

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೨, ಪು. ೨೮೬

೧೬೦

**ಗ್ರಂಥ :** ಬಸವೇಶ್ವರ ವಚನಶಾಸ್ತ್ರ ಸಾರಕವಿತ ಮಿಶ್ರ

**ಮಿತಿ :** ೧೯೨೯

**ಸಾರಾಂಶ :** ಶ್ರೀ ಸಿಂದಗಿ ಸಿದ್ಧಪ್ಪನವರು 'ಗ್ರಂಥಾವಳಿ' ಯಲ್ಲಿ ಇದನ್ನು ಸೇರಿಸಿದ್ದಾರೆ.

---

**ಆಕರ :**

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

೧೬೧

**ಗ್ರಂಥ :** ಬಸವೇಶ್ವರ ವಚನ ಸಂಗ್ರಹ

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೦

**ಸಂಪಾದಕ** ಬಸವರಾಜು ( ಎಲ್ )

**ಆಕಾರ :** ೧೮×೧೨ ಸೆ. ಮಿ.

**ಪುಟ :** viii+೧೭೫+೩೧=೨೧೭

**ಸಾಲು :** ೨೦

ಅಕ್ಷರ : ೧೬

ಸ್ಥಳ : ಮೈಸೂರು

ಪ್ರಕಾಶಕ : ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ

ಆವೃತ್ತಿ : ಪ್ರಥಮ

ಮಿತಿ : ೧೯೫೨

ಬೆಲೆ : ೧-೧೨-೦

ಮಾಲೆ : ಪುಸ್ತಕ ಭಂಡಾರ ಮಾಲೆ, ೮

ಸಾರಾಂಶ : ಬಸವಣ್ಣನವರ 'ಸರಳ ಸುಂದರ ನೀತಿ ಪ್ರತಿಪಾದಿಸುವ ಮತ್ತು ಸಾಹಿತ್ಯದ ಮೆರಗಿನಿಂದ ಕೂಡಿರುವ ಸುಮಾರು ೪೫೦ ವಚನಗಳನ್ನು' ಈ ಸಂಗ್ರಹದಲ್ಲಿ ಆಯ್ದುಕೊಡಲಾಗಿದೆ.

ಕೊನೆಯಲ್ಲಿ 'ವಚನಾರಂಭದ ಅಕಾರಾದಿ ಕೋಶ' ಮತ್ತು ಕಠಿಣ ಶಬ್ದಗಳ 'ಅರ್ಥಕೋಶ' ಇವುಗಳನ್ನು ಕೊಟ್ಟಿದ್ದು ತುಂಬಾ ಉಪಯುಕ್ತವಾಗಿವೆ.

೧೬೨

ಗ್ರಂಥ : ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ

ಪ್ರಭೇದ : ಗದ್ಯ-ಕಥೆ

ಸಂಪಾದಕ : ಹಳಕಟ್ಟಿ (ಫಕೀರಪ್ಪ ಗುರಬಸಪ್ಪ )
ಜ. ೨-೭-೧೮೮೦. ಮ. ೨೯-೬-೧೯೬೪.

ಆಕಾರ : ೨೧×೧೩ ಸೆ. ಮಿ.

ಪತ್ರ : ೧+೧೧೨=೧೧೩

ಸಾಲು : ೨೯

ಅಕ್ಷರ : ೨೭

ಸ್ಥಳ : ವಿಜಾಪುರ

ಪ್ರಕಾಶಕ : ಕರ್ತೃ

ಆವೃತ್ತಿ : ಪ್ರಥಮ

ಮಿತಿ : ೧೯೩೪

**ಬೆಲೆ:** ೦-೧೨-೦ ಆಣೆ

**ಮಾಲೆ:** ಶಿವಾನುಭವ ಗ್ರಂಥಮಾಲೆ, ೪೧

**ಸಾರಾಂಶ:** ಸಂಪಾದಕರು 'ಇದರ ಗ್ರಂಥಕರ್ತನಾರೆಂಬುದು ತಿಳಿದಿಲ್ಲ. ಅವನು ಈ ವಚನ ಗ್ರಂಥದಲ್ಲಿ ಉಲ್ಲೇಖವಾಗಿರುವ ಶಿವಶರಣರ ಮತ್ತು ಪೌರಾಣಿಕ ಪುರುಷರ ಚರಿತ್ರೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿರುವನು ಈ ವಿವರಣೆಗಳ ಮೇಲಿಂದ ಗ್ರಂಥಕಾರನು ಎಷ್ಟು ಬಹುಕೃತನಾಗಿದ್ದನೆಂಬುದು ಚೆನ್ನಾಗಿ ವ್ಯಕ್ತ-ವಾಗುತ್ತದೆ ಬಸವೇಶ್ವರನ ವಚನಗಳನ್ನು ಅಭ್ಯಾಸಿಸುವವರಿಗೆ ಈ ಗ್ರಂಥವು ಉಪಯೋಗವಾಗಬಹುದೆಂದು ಎಣಿಸಿ ಇದನ್ನು ಪ್ರಸಿದ್ಧಿಸಿದ್ದೇವೆ' ಎಂದು ಪ್ರಸ್ತಾ-ವನೆಯಲ್ಲಿ ಹೇಳಿದ್ದಾರೆ.

ಇದರಲ್ಲಿ ೨೨೧ ಶರಣರ ಮತ್ತು ಪೌರಾಣಿಕ ವ್ಯಕ್ತಿಗಳ ಬಗೆಗೆ ಹೇಳಿದ ಕಥೆ ಗಳಿವೆ. ಸಂಪಾದಕರು ತಾವು ಮುದ್ರಿಸಿದ 'ಬಸವೇಶ್ವರನ ವಚನಗಳು' ಈ ಗ್ರಂಥದ ೨ನೆಯ ಆವೃತ್ತಿಯೊಳಗಿನ ಪುಟ ಮತ್ತು ವಚನ ಸಂಖ್ಯೆ ಇವುಗಳನ್ನು ಕೊಟ್ಟಿರು ವದರಿಂದ ಅಭ್ಯಾಸಿಗಳಿಗೆ ತುಂಬಾ ಸಹಾಯವಾಗಿದೆ. ಕೊನೆಯಲ್ಲಿ ಕಥೆಯಲ್ಲಿ ಬರುವ ವ್ಯಕ್ತಿಗಳ ಅಕಾರಾದಿಯನ್ನು ಕೊಟ್ಟಿದೆ.

೧೬೩

**ಗ್ರಂಥ:** **ಬಸವೇಶ್ವರ ಸಹಸ್ರ ನಾಮಾವಳಿ**

**ಪ್ರಭೇದ:** ವೃತ್ತ-ಕಂದ-ರಗಳೆ **ವೃತ್ತ:** ೧ **ಕಂದ:** ೨೮ **ರಗಳೆ**

**ಕರ್ತೃ:** ಬಸವಲಿಂಗ ? **ಸಾಲು:** ೧೦೦೬

**ಆಕಾರ:** ೧೮×೧೦ ಸೆ. ಮಿ.

**ಪತ್ರ:** ೧ರಿಂದ೪೭

**ಸಾಲು:** ೨೫

**ಅಕ್ಷರ:** ೧೦ ರಿಂದ ೨೦

**ಸ್ಥಳ:** ಬೆಂಗಳೂರು

**ಪ್ರಕಾಶಕ:** ವಿಚಾರ ದರ್ಪಣ ಮುದ್ರಾಕ್ಷರ ಶಾಲೆ

**ಆವೃತ್ತಿ:** ತೃತೀಯ

**ಮಿತಿ:** ೧೮೮೯

**ಸಾರಾಂಶ**: ಈ ಗ್ರಂಥವು 'ಶಿವಜ್ಞಾನ ನಿಷ್ಠರಾದ ಶಿವಭಕ್ತರಿಗೆ ಸಂಪ್ರದಾಯಾನುಸಾರವಾಗಿ ಪೇಳಿದ **ಬಸವಸಹಸ್ರ ನಾಮಾವಳಿಯು** ಗಣಸಹಸ್ರನಾಮವು ೬೩ಮಂದಿ ಪುರಾತನರ ತ್ರಿವಿಧಿಸಹ' ಎಂಬ ಶಿರೋನಾಮದಲ್ಲಿ ಮುದ್ರಿತವಾಗಿದೆ. ಮೊದಲ ಭಾಗದಲ್ಲಿ ಪ್ರಸ್ತುತ ಗ್ರಂಥವಿದೆ.

ಆದಿಯಲ್ಲಿ ಒಂದು ವೃತ್ತ ಎರಡು ಕಂದಪದ್ಯಗಳಿವೆ. ಅನಂತರ 'ಬಸವಾಯನಮಃ' ಎಂಬಶಬ್ದಪುಂಜದಿಂದ ಕೊನೆಗೊಳ್ಳುವ ನಾಮಾವಳಿಗಳು ಪ್ರಾರಂಭವಾಗುತ್ತವೆ. ಪ್ರತಿ ೧೦೦ ನಾಮಾವಳಿಗಳನಂತರ ಎರಡೆರಡು ಕಂದ ಪದ್ಯಗಳಿವೆ. ೧೦೦೬ ನಾಮಾವಳಿಯು ಮುಗಿದ ಮೇಲೆ ಆರು ಕಂದಪದ್ಯಗಳಿವೆ. ಈ ಕಂದಪದ್ಯಗಳಿಂದ 'ಬಸವಲಿಂಗ' ಎಂಬವನು ಇದನ್ನು ಬರೆದಿರುವಂತೆ ಭಾಸವಾಗುತ್ತದೆ.

**ಆದಿ** । ಕಂ । ಧರ್ಮಸ್ವರೂಪ ನಿಶ್ಚಲ ।
ನಿರ್ಮಲ ಚಿದ್ಗಾತ್ರ ಶರಣಮಿತ್ರ ನಿರಘನೀ ।
ರಮಹೇಶ ಶಂಕರ ಶುಭ ।
ಕರ್ಮತ್ರಯ ಪಾಹಿಮಾಂ ಬಸವೇಶಾ ॥೩॥
............................

ನಾಮಾವಳಿ । ಲಿಂಗಪ್ರಾಣಿ ಬಸವಾಯನಮಃ ॥೨೦೫॥
ಜಂಗಮಪ್ರಾಣಿ ಬಸವಾಯನಮಃ ॥೨೦೬॥
ತನುತ್ರಯ ಮತತ್ವವಿರಹಿತ ಬಸವಾಯನಮಃ ॥೨೩೩॥
ಮನತ್ರಯ ಮಹತ್ವವಿರಹಿತ ಬಸವಾಯನಮಃ ॥೨೩೪॥

**ಅಂತ್ಯ** । ಕಂ । ಶರಣಾವಳಿಬಸವೇಶನ
ಪರಮಾನುಭಾವಾರ್ಥವೆಸಗಿಪಡೆದನಿತಾಂತರ'
ತೆರದೊಳೆ **ಸಹಸ್ರನಾಮ** ।
ನೊರೆವುದುನಿಂ **ಬಸವಲಿಂಗ** ಯೆಂದತಿಕೃಪೆಯಿಂ ॥೫॥

ವಿರತಾಗ್ರಣಿ ಶಿವಪೂಜಾ ।
ನಿರುತಂ ಸುಜ್ಞಾನ ಭಕ್ತಿ ವೈರಾಗ್ಯದಯ ।
ಭರಿತಂ ಅತಿಸತಿಗಾಲದ ।
ಬಸವೇಶಂ ನಿರೂಪಿಸಲ್ಕಾಂಬರದೇಂ ॥೬॥

ಕವಿಚರಿತೆಕಾರರು 'ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೇ ಇರುವ ಗ್ರಂಥಗಳನ್ನು ನಮಗೆ ತಿಳಿದಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂದುಹೇಳಿ ಅವರಲ್ಲಿ 'ಬಸವೇಶ್ವರ ಸಹಸ್ರನಾಮ' ಎಂಬಗ್ರಂಥವನ್ನು ಅನುಬಂಧದಲ್ಲಿಕೊಟ್ಟಿರುವರು. ಬಹುಶಃ ಆ ಗ್ರಂಥ ಇದೇ ಆಗಿರಲೂ ಬಹುದು.

ಇದೇ ಹೆಸರಿನ ಗ್ರಂಥವೊಂದು ಮೈಸೂರು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯ ಅಚ್ಚಾದ ಕನ್ನಡ ಗ್ರಂಥಭಂಡಾರದಲ್ಲಿದೆ.

**ನೋಡು:** ೧. ಬಸವೇಶ್ವರ ಸಹಸ್ರನಾಮಾವಳಿ (ಕನ್ನಡ)
೨. ಬಸವೇಶ್ವರ ಸಹಸ್ರನಾಮ (ಸಂಸ್ಕೃತ)

---

**ಆಕರ:**

೧. ಕರ್ನಾಟಕ ಕವಿಚರಿತೆ, ಭಾ. ೩, ಪು. ೪೧೮-ಮತ್ತು ೪೨೬
೨. Catalogue of printed Kannada works in the Oriental Research Institute, Mysore p. 76, Book No. K 346.
೩. ಸಮಗ್ರ ವಚನ ವಾಙ್ಮಯ ಪ್ರಕಟನಾಯೋಜನೆಯ ಭಂಡಾರದ ಹಸ್ತಪ್ರತಿ, ನಂ. ೧೧೯೪ ಪತ್ರ ೨೪ ರಿಂದ ೯೫

## ೧೬೪

**ಗ್ರಂಥ:** ಬಸವೇಶ್ವರ ಸಹಸ್ರನಾಮಾವಳಿ

**ಕರ್ತೃ:** ಪಾಲ್ಕುರಿಕಿ ಸೋಮನಾಥ

**ಕಾಲ:** ಸು. ೧೧೯೫

**ಸಾರಾಂಶ:** ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಇದು ಕನ್ನಡದಲ್ಲಿ ಪಾಲ್ಕುರಿಕಿ ಸೋಮನಾಥನಿಂದ ನಿರ್ಮಿತವಾಗಿದೆಯೆಂದು 'ಬಸವತತ್ತ್ವ ರತ್ನಾಕರ'ದಲ್ಲಿ ಹೇಳುತ್ತಾರೆ. ಆದರೆ ಉಸ್ಮಾನಿಯಾ ವಿಶ್ವವಿದ್ಯಾಲಯ ಹಸ್ತಪ್ರತಿಗಳ ಗ್ರಂಥಾಲಯದಲ್ಲಿ ಕವಿಯ ಹೆಸರು ಗೊತ್ತಿಲ್ಲದ ಸಂಸ್ಕೃತ ತಾಳವೋಲೆಯ ಗ್ರಂಥವಿರುವದೆಂದು ಹೇಳಲಾಗಿದೆ. ಅಲ್ಲದೆ ಕನ್ನಡದಲ್ಲಿ ಬಸವಲಿಂಗಕೃತವಾಗಿರಬಹುದಾದ 'ಬಸವೇಶ್ವರ ಸಹಸ್ರನಾಮಾವಳಿ' ಎಂಬ ಮತ್ತೊಂದು ಗ್ರಂಥವಿದೆ.

**ನೋಡು:** ೧. ಬಸವೇಶ್ವರ ಸಹಸ್ರ ನಾಮಾವಳಿ (ಕನ್ನಡ)
೨. ಬಸವೇಶ್ವರ ಸಹಸ್ರನಾಮ (ಸಂಸ್ಕೃತ)

---

**ಆಕರ:**

೧. ಬಸವ ತತ್ತ್ವರತ್ನಾಕರ, ಪು. ೫೫೬

## ೧೬೫

### ಗ್ರಂಥ : ಬಸವೇಶ್ವರ ಸಂಗೀತ

**ಸಾರಾಂಶ :** ಕವಿಚರಿತೆಕಾರರು 'ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆ ಇರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ' ಎಂದಿದ್ದಾರೆ. ಬಸವಣ್ಣನವರ ವಚನಗಳನ್ನು ಸಂಗೀತಕ್ಕೆ– ರಾಗಗಳಿಗೆ– ಅಳವಡಿಸಿದ ಗ್ರಂಥವಿದಾಗಿರಬಹುದೇನೋ ?

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೨೬
೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

## ೧೬೬

### ಗ್ರಂಥ : ಬಸವೇಶ್ವರ ಸ್ತೋತ್ರ

**ಪ್ರಭೇದ :** ಕಂದ

**ಕಾಲ :** ಸು ೧೫೦೦

**ಸಾರಾಂಶ :** ಕವಿಚರಿತೆಕಾರರು ಕವಿಗಳು ಗೊತ್ತಿಲ್ಲದ ಕೆಲವು ಕಾವ್ಯಗಳಲ್ಲಿ ಬಸವೇಶ್ವರ ಸ್ತೋತ್ರ (ಕಂದ ೧೬)' ಎಂಬಹೆಸರಿನ ಕಾವ್ಯವನ್ನು ಹೇಳಿ ಅದರಿಂದ ಎರಡು ಪದ್ಯಗಳನ್ನು ಉದಾಹರಿಸಿದ್ದಾರೆ. ಆದರೆ ಅದೇ ಅನುಬಂಧದ ಪು. ೨೪೬ ರಲ್ಲಿ 'ಬಸವೇಶ್ವರ ರಗಳೆ' ಎಂಬ ಗ್ರಂಥವನ್ನು ಹೆಸರಿಸಿ "ರಗಳೆ ಎಂಬ ಹೆಸರಿದ್ದರೂ ೪೬ ಕಂದಗಳಿವೆ" ಎಂದು ಹೇಳಿ ಒಂದು ಕಂದ ಪದ್ಯವನ್ನು ಉದಾಹರಿಸಿದ್ದಾರೆ. ಎರಡೂ ಕಾವ್ಯಗಳಿಂದ ಉದಹರಿಸಿದ ಕಂದ ಪದ್ಯಗಳು ಒಂದೇ ಆಗಿವೆ. ಮೊದಲನೆಯದರ ಕಾಲ ಸು. ೧೫೦೦ ಎಂ ಎರಡನೆಯದರ ಕಾಲ ಸು. ೧೬೦೦ ಎಂದೂ ಕೊಟ್ಟಿದ್ದಾರೆ. ಎರಡೂ ಕಾವ್ಯಗಳು ಒಂದೇ ಆಗಿರಬಹುದೇನೋ ?

ಕಂ॥ ಪ್ರಣವದ ಬಳ್ಳಿ ಬಕಾರಂ ।
ಪ್ರಣವದನಾದಾನುಸಾರಸಾರ ಸಕಾರಂ ।
ಪ್ರಣವದ ಬಿಂದು ವಕಾರಂ ।
ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ।

ಬಸವಂ ಭಕ್ತಿಗೆ ಮೂಲಂ
ಬಸವಂ ಕಾಲಂಗೆ ಕಾಲನನುಪಮಶೀಲಂ
ಬಸವಂ ಜಂಗಮ ಲೋಲಂ
ಬಸವಾ ರಕ್ಷಿಸುವುದೆನ್ನ ಸಂಗನ ಬಸವಾ ॥

**ನೋಡು :** ೧. ಬಸವೇಶ್ವರ ರಗಳೆ
೨. ಬಸವ ಸ್ತೋತ್ರ

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೨೭೯

೧೬೭

**ಗ್ರಂಥ :** ಬಸವೇಶ್ವರ ಸ್ತೋತ್ರ ಪದ್ಯಗಳು

**ಪ್ರಭೇದ :** ಕಂದ–ಷಟ್ಪದಿ–ವೃತ್ತ–ಇತ್ಯಾದಿ

**ಕರ್ತೃ :** ವಿವಿಧ ಕವಿಗಳು

**ಸಂಪಾದಕ :** ಚೆನ್ನಮಲ್ಲಿಕಾರ್ಜುನ ಜ. ೧೯೦೦

**ಆಕಾರ :** ೧೮×೧೨ ಸೆ. ಮಿ.

**ಪುಟ :** ೧೪

**ಸಾಲು :** ೨೪

**ಅಕ್ಷರ :** ೧೨ ರಿಂದ ೨೦

**ಸ್ಥಳ :** ದಾವಣಗೆರೆ

**ಪ್ರಕಾಶಕ :** ಸಂಪಾದಕ

**ಆವೃತ್ತಿ :** ಪ್ರಥಮ

**ಮಿತಿ :** ೧೯೩೧

**ಬೆಲೆ :** ೦–೧–೦ ಆಣೆ

**ಮಾಲೆ :** ಸದ್ಧರ್ಮ ಗ್ರಂಥಮಾಲೆ, ೨

**ಸಾರಾಂಶ :** ಪಾಲ್ಕುರಿಕಿ ಸೋಮಾರಾಧ್ಯ ಕೃತ 'ಶರಣು ಬಸವ ರಗಳೆ' ಮತ್ತು 'ಬಸವೇಶ್ವರ ಪಂಚರತ್ನ', ಚೆನ್ನಂಜೆದೇವರಿಂದ ಸಂಪಾದಿತ 'ಬಸವ ಸ್ತೋತ್ರದ ಷಟ್ಪದಿ', ಅದೃಶ್ಯ ಕವಿಕೃತ 'ಪ್ರೌಢರಾಯನ ಕಾವ್ಯ', ಷಡಕ್ಷರ ಕವಿಕೃತ 'ವೃಷಭೇಂದ್ರ ವಿಜಯ', ತಿಲಕೂರ ಬಸವಲಿಂಗ ವಿರಚಿತ 'ಬಸವಲಿಂಗ ಪ್ರಲಾಪ' ?— ಇತ್ಯಾದಿ ಗ್ರಂಥಗಳಲ್ಲಿ ಬಸವಣ್ಣನವರನ್ನು ಕೀರ್ತಿಸಿ ಬರೆಯಲ್ಪಟ್ಟ ಪದ್ಯಗಳನ್ನಿಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಕೆಲವು ಕಠಿಣ ಶಬ್ದಗಳಿಗೆ ಅರ್ಥವನ್ನು ಕೊಟ್ಟಿದೆ.

೧೬೮

**ಗ್ರಂಥ :** ಬಸವೇಶ್ವರ ಸ್ತೋತ್ರ ಮುಕ್ತಾಕಲಾಪ

**ಪ್ರಭೇದ :** ವಚನ

**ಕರ್ತೃ :** ವಿವಿಧ ಕವಿಗಳು

**ಸಂಪಾದಕ :** ನಂಜಪ್ಪ (ಮಾ. ನಂ.)

**ಆಕಾರ :** ೧೮×೧೨ ಸೆ ಮಿ.

**ಪುಟ :** ೯೪

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಶ್ರೀ ಮಾ. ನಂ. ನಂಜಪ್ಪನವರು, ಕಲ್ಯಾಣ ಭವನ

**ಮಿತಿ :** ೧೯೬೦

**ಬೆಲೆ:** ೧=೦೦ ರೂ.

**ಸಾರಾಂಶ :** "ಶ್ರೀ ಬಸವೇಶ್ವರನನ್ನು ಕುರಿತು ಶ್ರೀ ಷಡಕ್ಷರದೇವ, ಪ್ರಸಾದಿ ಸೋಮನಾಥ, ಪಾಲ್ಕುರಿಕಿ ಸೋಮನಾಥ, ಬಲಸಂಗಯೋಗಿ, ಮೈಲಾರದ ಶರಣರು, ದೇವಲ ಮಹರ್ಷಿಗಳು, ನೀಲಕಂಠ ಶಿವಯೋಗಿ, ಬಸವಲಿಂಗ ಶಿವ ಯೋಗಿಗಳು– ರಚಿಸಿದ ಸ್ತೋತ್ರ ಗೀತೆಗಳನ್ನೂ ಸ್ವವಿರಚಿತ ವೈಶಾಖ ಗೀತೆ ಮಂಗಳಗಳನ್ನೂ ಕೂಡಿಸಿ ಈ ಗ್ರಂಥವನ್ನು ಪ್ರಕಟಿಸಲಾಗಿದೆ..... ಭಾವುಕರಿಗೂ ಶಿವಭಕ್ತರಿಗೂ ಈ ಗ್ರಂಥವು ಅತ್ಯಂತ ಉಪಯುಕ್ತವೆನಿಸಿದೆ..... ವಿವೇಕಿಗಳಿಂದ ಪರಿಗ್ರಹಿಸಲು ಈ ಗ್ರಂಥವು ಅರ್ಹವಾಗಿದೆ."

— ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

---

**ಆಕರ :**

೧. ಶರಣ ಸಾಹಿತ್ಯ, ಸಂಪುಟ ೨೪; ಸಂಚಿಕೆ ೧-೨; ಪು. ೩೮. ಎಪ್ರಿಲ್- ಮೇ ೧೯೬೧

## ೧೬೯

**ಗ್ರಂಥ:** ಬಿಜ್ಜಣರಾಯ ಪುರಾಣ

**ಪ್ರಭೇದ:** ಭಾಮಿನೀ ಷಟ್ಪದಿ **ಆಶ್ವಾಸ:** ೮ **ಪದ್ಯ:** ೪೯೮

**ಕರ್ತೃ:** ಚಂದ್ರಸಾಗರವರ್ಣಿ

**ಕಾಲ:** ೧೮೧೦

**ಸಾರಾಂಶ:** ಬಿಜ್ಜಳ-ಬಸವೇಶ್ವರರ ಚರಿತ್ರೆ ಇದರ ವಸ್ತು. ಇತಿಹಾಸಕ್ಕೆ ವಿರೋಧವಾಗಿ ಬರೆದ ಕೃತಿಯೆಂದು ಪಂಡಿತರ ಅಭಿಪ್ರಾಯ.

---

**ಆಕರ:**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೨೫೯
೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

## ೧೭೦

**ಗ್ರಂಥ:** ಬಿಜ್ಜಳರಾಯ ಚರಿತೆ

**ಪ್ರಭೇದ:** ಸಾಂಗತ್ಯ

**ಕರ್ತೃ:** ಧರಣಿ ಪಂಡಿತ

**ಕಾಲ:** ೧೬೫೦

**ಸಾರಾಂಶ:** ಬಸವಣ್ಣನವರ ಚರಿತ್ರೆ ಇದರ ವಸ್ತು. ದ್ವೇಷೈಕ ದೃಷ್ಟಿಯಿಂದ ಬರೆದಕೃತಿಯೆಂದು ಪಂಡಿತರ ಮತ.

---

**ಆಕರ:**

೧. ಕರ್ಣಾಟಕ ಕವಿಚರಿತೆ, ಭಾ. ೨, ಪು. ೪೧೮
೨. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೬

## ೧೭೧

**ಗ್ರಂಥ:** ಭಕ್ತರಾಜ ಬಸವಣ್ಣ

**ಪ್ರಭೇದ:** ಗದ್ಯ-ಚರಿತ್ರೆ

ಕರ್ತೃ : ಸಿಂಪಿ (ಲಿಂಗಣ್ಣ)

ಕಾಲ : ಜ : ೧೧–೨–೧೯೦೫

ಆಕಾರ : ೧೮×೧೨ ಸೆ. ಮಿ.

ಪುಟ : ೬೨

ಸಾಲು : ೨೭

ಅಕ್ಷರ : ೨೪

ಸ್ಥಳ : ಬೆಂಗಳೂರು, ಚಿಕ್ಕಪೇಟೆ.

ಪ್ರಕಾಶಕ : ವೀರಶೈವ ಸಾಹಿತ್ಯ ಭಾಂಡಾರ

ಆವೃತ್ತಿ : ಪ್ರಥಮ

ಮಿತಿ : ೧೯೪೫

ಬೆಲೆ : ೦–೧೨–೦ ಆಣೆ

ಮಾಲೆ : ವೀರಶೈವ ಸಾಹಿತ್ಯ ಭಾಂಡಾರ ಗ್ರಂಥಮಾಲೆ, ೫

ಸಾರಾಂಶ : 'ಕನ್ನಡ ಕುಲೋದ್ಧಾರಕ' 'ಅರಿತ ಶರಣ' 'ಗೆಲುವೆನೆಂಬ ಭಾಷೆ' 'ನ್ಯಾಯನಿಷ್ಠುರಿ-ಲೋಕ ವಿರೋಧಿ' 'ಸಂಗನಿಗೆ ವೀರ-ಶರಣರಿಗೆ ವಧು' ಬಸವಣ್ಣನು ಹಾಯ್ದ ಹೆಜ್ಜೆ' — ಹೀಗೆ ಬಸವಣ್ಣನವರನ್ನು ಕುರಿತು ಬರೆದ ೬ ಬರಹಗಳನ್ನೊಳಗೊಂಡಿದೆ ಈ ಗ್ರಂಥ.

ಶಿವಾನುಭಾವ ನಿರತ ಶ್ರೀ ಬಸವೇಶ್ವರರ ಚಿತ್ರವಿದೆ.

೧೭೨

ಗ್ರಂಥ : ಭಕ್ತಿಭಂಡಾರಿ ಬಸವಣ್ಣ

ಪ್ರಭೇದ : ನಾಟಕ

ಕರ್ತೃ : ಪಾಟೀಲ (ಮಲ್ಲನಗೌಡ)

ಕಾಲ : ಸು. ೧೯೦೦

ಸಾರಾಂಶ : ಇದೇ ಲೇಖಕರ '**ಶ್ರೀ ಬಸವೇಶ್ವರರ ಚರಿತ್ರೆಯ ಮೇಲೆ ಹೊಸಬೆಳಕು**' ಎಂಬ ಸಂಶೋಧನಾತ್ಮಕ ಗ್ರಂಥದ ಆಧಾರದ ಮೇಲೆ ಪ್ರಸ್ತುತ ನಾಟಕ ರಚಿತವಾಗಿದೆ. ಇದರ ಆದಿಯ ಅಲ್ಪಭಾಗವು 'ಜ್ಞಾನ ಪ್ರಸಾದ' ಎಂಬ

ಲೇಖಕರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ ಮಾಸಿಕದಲ್ಲಿ ಪ್ರಕಟವಾಗಿದೆ. ಕ್ರೌನ ಆಕಾರದ ೧೦೦ ಪುಟಗಳಷ್ಟಾಗಬಹುದೆಂದು ಲೇಖಕರು ತಿಳಿಸಿರುವರು. ಸಂಪೂರ್ಣ ನಾಟಕ ಅಪ್ರಕಟಿತ.

೧೭೩

**ಗ್ರಂಥ:** ಭಕ್ತಿಭಂಡಾರಿ ಬಸವಣ್ಣನವರ ವಚನಗಳು

**ಪ್ರಭೇದ:** ವಚನ-ಅರ್ಥ **ಸಂಖ್ಯೆ:** ೩೨೭

**ಕರ್ತೃ:** ಬಸವಣ್ಣ

**ಕಾಲ:** ಸು ೧೧೬೭

**ಟೀಕಾಕಾರ:** ಹಿರೇಮಠ (ಶ್ರೀಕಂಠಶಾಸ್ತ್ರಿ ಅಮರಾರ್ಯ) ಜ. ೧೯೯೧

**ಆಕಾರ:** ೧೮×೧೨ ಸೆ. ಮಿ.

**ಪುಟ:** ೧೦೭

**ಸಾಲು:** ೨೫

**ಅಕ್ಷರ:** ೧೦–೨೫

**ಸ್ಥಳ:** ಹುಬ್ಬಳ್ಳಿ

**ಪ್ರಕಾಶಕ:** ಸಿಟಿ ಬುಕ್ ಸ್ಟಾಲ

**ಆವೃತ್ತಿ:** ಪ್ರಥಮ

**ಮಿತಿ:** ೧೯೫೮

**ಬೆಲೆ:** ೦–೮–೦ ಆಣೆ

**ಸಾರಾಂಶ:** ಆದ್ಯರ ವಚನ ಮುಕ್ತಿಸಾಧನ, ದುಃಖಮಯ ಸಂಸಾರ, ಆರ್ತಭಕ್ತನ ಆತ್ಮನಿವೇದನೆ, ಚಿತ್ತಚಾಂಚಲ್ಯ, ದೇವರಲ್ಲಿ ಪ್ರಾರ್ಥನೆ, ಕಾಮಾದಿ ನಿಗ್ರಹ, ಕರ್ಮಾಸಕ್ತಿ ತ್ಯಾಜ್ಯ, ಕುಲಜಾತಿ ಕೃತಕ, ಲಿಂಗ-ಜಂಗಮ ನಿಷ್ಠೆ, ದೇವರ ಕೃಪೆ, ಪತಿಪ್ರೇಮ, ಧರ್ಮೋಪದೇಶ, ಡೇವರು, ಸರ್ವಭರಿತ, ದೇವರು ಒಬ್ಬನೇ, ಭಕ್ತಿ ಸ್ವರೂಪ, ಶರಣ ಸಂಗ, ಶಿವ ಚಿಂತನ, ಲಿಂಗದಲ್ಲಿ ಏಕಾಗ್ರತೆ, ಲಿಂಗಪತಿ ಶರಣಸತಿ, ಸತ್ಯವಂತನಾಗಿ ಬಾಳು, ಅಹಂಕಾರ, ಪರಸ್ತ್ರೀಯರಲ್ಲಿ ತಾಯ್ತನ, ಸತ್ಪಾತ್ರ, ಕಳ್ಳತನ ಬೇಡ, ದೇವರ ಕಾರುಣ್ಯಯಾಚನೆ, ದೇವರಲ್ಲಿ ನಿಷ್ಠೆ, ಅನ್ಯ-

ದೇವರಿಲ್ಲ, — ಇತ್ಯಾದಿ ತಲೆಬರಹಗಳಿಗೆ ಅನ್ವಯಿಸುವ ಬಸವಣ್ಣನವರ ೩೨೬ ವಚನಗಳಿಗೆ ಸಂಕ್ಷೇಪವಾದ ಅರ್ಥವಿವರವನ್ನು ಕೊಡಲಾಗಿದೆ.

---

ಆಕರ :

೧. ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಭಾಂಡಾರ, ಸಂ. Q 234xF32:52 33J54

೧೭೪

**ಗ್ರಂಥ :** ಭಕ್ತಿಭಾಂಡಾರಿ ಬಸವಣ್ಣನವರು

**ಪ್ರಭೇದ :** ಗದ್ಯ-ಚರಿತ್ರೆ

**ಕರ್ತೃ :** ಶ್ರೀನಿವಾಸಮೂರ್ತಿ (ಎಂ. ಆರ್.)

**ಕಾಲ :** ಜ. ೧೮೯೨ ಮ. ೧೯೫೩

**ಆಕಾರ :** ೧೮×೧೨ ಸೆ. ಮಿ.

**ಪುಟ :** ೪ + ೧೪೦ = ೧೪೪

**ಸಾಲು :** ೨೭

**ಅಕ್ಷರ :** ೨೨

**ಸ್ಥಳ :** ಬೆಂಗಳೂರು

**ಪ್ರಕಾಶನ :** ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜು

**ಆವೃತ್ತಿ :** ಪ್ರಥಮ

**ಮಿತಿ :** ೧೯೩೧

**ಸಾರಾಂಶ :** ಪ್ರಾರಂಭದಲ್ಲಿ ಬಸವಣ್ಣನವರ ಜೀವನವನ್ನು ಬಸವ ಪುರಾಣವನ್ನಾಧರಿಸಿ ವಿವರಿಸಿದೆ. ಹರೀಶ್ವರನ ' ಬಸವರಾಜ ದೇವರ ರಗಳೆ ' ಸಿಂಗಿರಾಜನ 'ಅಮಲಬಸವಚಾರಿತ್ರ' ಷಡಕ್ಷರದೇವನ 'ವೃಷಭೇಂದ್ರ ವಿಜಯ'ಗಳಲ್ಲಿಯ ಅವರ ಜೀವನ ಚರಿತ್ರೆಯಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದೆ. ಅನಂತರ 'ಬಸವಣ್ಣನವರ ಭಕ್ತಿಸಾಧನೆ' 'ಜಂಗಮಲಿಂಗ ಸಾಮರಸ್ಯ' 'ಐಕಮತ್ಯ ಸಾಧನೆ' 'ಅನ್ಯಮತ ವಿಡಂಬನೆ' ಬಸವಣ್ಣನವರ ಬೋಧೆ' 'ದೋಷಾರೋಪಣೆಗಳ ವಿಮರ್ಶೆ' 'ಬಸವಣ್ಣನವರ ಪ್ರಭಾವಮುದ್ರೆ'— ಈ ತಲೆಕಟ್ಟುಗಳಿಗೆ ಸಂಬಂಧಿಸಿದ ೧೫೪ ವಚನಗಳನ್ನು ಆಧರಿಸಿ ಬಸವಣ್ಣನವರ ಜೀವನವನ್ನು ನಿರೂಪಿಸಿದೆ.

"ಮತಪ್ರಚಾರಕರಾಗಿ ಅವರ ಸ್ಥಾನವು ಉನ್ನತವಾಗಿದೆ. ತತ್ವಬೋಧಕರಾಗಿ ಅವರ ಸ್ಥಾನ ಇನ್ನೂ ಉನ್ನತವಾಗಿದೆ. ಭಕ್ತರಾಗಿ ಅವರ ಸ್ಥಾನ ಅತ್ಯುನ್ನತವಾಗಿದೆ. ಇಂತಹ ಮಹಾತ್ಮರು ಕರ್ನಾಟಕ ದೇಶದಲ್ಲಿ ಅವತರಿಸಿದರು. ಕರ್ನಾಟಕದ ಕೀರ್ತಿಯು ಅವರಿಂದಲೂ ಹೆಚ್ಚಿರುವದು. ಸಮಾಜ ಸುಧಾರಣೆಗಾಗಲಿ, ರಾಷ್ಟ್ರ ಸುಧಾರಣೆಗಾಗಲಿ, ಅವರು ಹಾಕಿರುವ ಮೇಲ್ಪಂಕ್ತಿಯನ್ನು ಇಂದಿಗೂ ನಾವು ಅನುಸರಿಸಬೇಕಾಗಿದೆ. ಅವರ ವಚನಗಳಿಂದ ಅವರ ಮೂರ್ತಿಸ್ವರೂಪವನ್ನು ಚಿತ್ರಿಸಿ, ಅವರ ಕಾರ್ಯಕಲಾಪಗಳಿಂದ ಅವರ ಮಹಿಮೆಯನ್ನು ರೂಪಿಸಿ, ಲೋಕದ ಮುಂದೆ ನಿಜವಾದ ಬಸವಣ್ಣನವರನ್ನು ಸ್ಥಾಪಿಸುವದೇ ಅವರಿಗೆ ನಾವು ನ್ಯಾಯವಾಗಿ ಸಲ್ಲಿಸುವ ಭಕ್ತಿಯ ಕಾಣಿಕೆಯಾಗಿರುತ್ತದೆ. **ಬಸವಣ್ಣನವರು ವೀರಶೈವರಿಗೆ ಮಾತ್ರ ಸಂಬಂಧಪಟ್ಟವರಲ್ಲ; ಕರ್ನಾಟಕಕ್ಕೆ ಮಾತ್ರ ಸಂಬಂಧಪಟ್ಟವರೂ ಅಲ್ಲ; ಅವರು ಇಡಿಯ ಭರತಖಂಡಕ್ಕೆ, ಇಡೀ ಪ್ರಪಂಚಕ್ಕೆ ಸಂಬಂಧಪಟ್ಟ ಮಹಾಪುರುಷರು.** "

—ಪು. ೧೨೨

ಪರಿಶಿಷ್ಟ ೧ರಲ್ಲಿ 'ಶೈವಶಾಖೆ'ಗಳ ಬಗೆಗೂ, ೨ರಲ್ಲಿ 'ದಾಸಿಮಾರ್ಯರು ಮತ್ತು ಚನ್ನಯ್ಯ' ಇವರ ಬಗೆಗೂ, ವಿವೇಚನೆ ಮಾಡಲಾಗಿದೆ. ಅಂತ್ಯದಲ್ಲಿ 'ಅಕಾರಾದಿ ವಿಷಯ ಸೂಚಿಕೆ' ಇದೆ.

ಬಿಜಾಪುರ ಜಿಲ್ಲೆಯ ಮತ್ತು ಸುತ್ತಣ ಸೀಮೆಯ ಒಂದು ನಕಾಶವಿದೆ. ಬಾಗೇವಾಡಿ ಬಸವೇಶ್ವರ ಗುಡಿ, ಕೂಡಲ ಸಂಗಮದೇವರ ಗುಡಿ, ಸೋಲಾಪುರದ ಸಿದ್ಧರಾಮನ ಕೆರೆ ಮತ್ತು ದೇವಸ್ಥಾನ, ಸಂಗಮದಲ್ಲಿರುವ ಮಂಟಪ, ಮತ್ತು ಹಿಪ್ಪರಿಗೆಯ ಕಲ್ಲಿನಾಥನ ಗುಡಿ— ಇವುಗಳ ಚಿತ್ರಗಳನ್ನು ಸೇರಿಸಿದೆ.

೧೭೫

**ಗ್ರಂಥ: ಭಕ್ತಿಯ ಬೆಳಕು**

**ಕರ್ತೃ:** ಹರ್ಡೇಕರ (ಮಂಜಪ್ಪ)

**ಕಾಲ:** ಜ ೧೮-೨-೧೮೮೫ ಮ. ೩-೧-೧೯೪೭

**ಮಿತಿ:** ೧೯೩೪ ಬಸವ ಜಯಂತಿ

**ಸಾರಾಂಶ** :"೧೯೩೪ನೆಯ ಇಸವಿ ಬಸವ ಜಯಂತಿಯ ಕಾಲಕ್ಕೆ **'ಭಕ್ತಿಯ ಬೆಳಕು'** ಎಂಬ ಬಸವಣ್ಣನವರ ಕೆಲವು ವಚನಗಳಿಗೆ ಅರ್ಥವನ್ನು ಬರೆದ ಚಿಕ್ಕ

ಪುಸ್ತಕವನ್ನು ಪ್ರಕಟಿಸಿದೆನು. ಆ ಪುಸ್ತಕದ ಇಪ್ಪತ್ತು ಸಾವಿರ ಪ್ರತಿಗಳು ಹಂಚಲ್ಪಟ್ಟವು."

–ಲೇಖಕರ 'ಆತ್ಮಚರಿತ್ರೆ'ಯಿಂದ

---

ಆಕರ :

೧. ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ, ಪು. ೬೭

೧೭೬

**ಗ್ರಂಥ : ಭಕ್ತಿಯು ವಚನಗಳು**

**ಪ್ರಭೇದ :** ವಚನ **ಸಂಖ್ಯೆ :** ೧೦೦

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಹಳಕಟ್ಟಿ ( ಫಕೀರಪ್ಪ ಗುರುಬಸಪ್ಪ )

ಜ : ೨-೭-೧೮೮೦ ಮ : ೨೯-೬-೧೯೬೪

**ಆಕಾರ :** ೧೮×೧೨ ಸೆ. ಮಿ.

**ಪುಟ :** ೪೮

**ಸ್ಥಳ :** ವಿಜಾಪುರ

**ಪ್ರಕಾಶಕ :** ಸಂಪಾದಕ

**ಮಿತಿ :** ೧೯೪೨ ?

**ಬೆಲೆ :** ೦-೧೦-೦ ಆಣೆ

**ಮಾಲೆ :** ಶಿವಾನುಭವ ಗ್ರಂಥಮಾಲೆ

**ಸಾರಾಂಶ :** ಈ ಗ್ರಂಥದ ಪೀಠಿಕೆಯಲ್ಲಿ "ಶಿವಶರಣರ ತತ್ವಗಳನ್ನು ಅಭ್ಯಾಸ ಮಾಡಲಪೇಕ್ಷಿಸುವವರು ಈ ಪುಸ್ತಕವು ಪ್ರಾರಂಭದ ಗ್ರಂಥವೆಂದು ಭಾವಿಸಿ ಇದರ ಉಪಯೋಗ ಮಾಡಿಕೊಳ್ಳಬಹುದು. ಇದರಲ್ಲಿಯ ವಚನಗಳು ಭಕ್ತಿಯ ಸ್ವರೂಪವನ್ನು ಬಹು ಚೆನ್ನಾಗಿ ನಿರೂಪಿಸುತ್ತವೆ" ಎಂದು ಹೇಳಲಾಗಿದೆ.

ಗ್ರಂಥದ ಬಗೆಗೆ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಹೀಗೆ ವಿಮರ್ಶೆ ಮಾಡಿರುವರು :

"ಇದಕ್ಕೆ ಮಾನ್ಯ ಹಳಕಟ್ಟಿಯವರು ಅರ್ಥವಿವರಣೆ ಮಾಡಿದ್ದಾರೆ. ಇದರಲ್ಲಿ ಭಕ್ತಿಯ ಬಗೆಬಗೆಯ ಹತ್ತು ಅವಸ್ಥೆಗಳನ್ನು ಕುರಿತು ಹಾಡಿದ ವಚನಗಳಿವೆ."

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೬, ಸಂಚಿಕೆ ೯, ಪು. ೩೪೭, ನವ್ಹಂಬರ ೧೯೪೩

೧೭೭

ಗ್ರಂಥ: ಭಕ್ತಿರಸರಸಾಲ ಭಗವಾನ್ ಬಸವೇಶ್ವರ ನಾಟಕ

ಪ್ರಭೇದ : ನಾಟಕ

ಕರ್ತೃ : ಪುಟ್ಟಯ್ಯಸ್ವಾಮಿ ಗವಾಯಿ

ಕಾಲ : ಜ. ೩-೩-೧೯೧೪

ಆಕಾರ : ೧೮×೧೨ ಸೆ. ಮಿ.

ಪುಟ : ೧೩೪

ಸಾಲು : ೨೪

ಅಕ್ಷರ : ೫-೨೦

ಸ್ಥಳ : ಗದಗ

ಪ್ರಕಾಶಕ : ದೊಡ್ಡಬಸವಾರ್ಯ ಗವಾಯಿ ಮತ್ತು ಮರಿಬಸಪ್ಪ ಮಾಸ್ತರ

ಆವೃತ್ತಿ : ಪ್ರಥಮ

ಮಿತಿ : ೧೯೫೬

ಬೆಲೆ : ೧-೮-೦ ರೂ.

ಸಾರಾಂಶ : ಜನಜನಿತವಾದ ಬಸವಣ್ಣನವರ ಚರಿತ್ರೆ ಇಲ್ಲಿ ನಾಟಕ ರೂಪ ಪಡೆದಿದ್ದರೂ ಕೆಲವು ಹೊಸ ವಿಚಾರಗಳು ಬಂದಿವೆ.

೧೭೮

ಗ್ರಂಥ : ಭಕ್ತಿರಸ ಸೋನೆ

ಪ್ರಭೇದ : ಸಾಂಗತ್ಯ ಸಂಧಿ : ೨೫ ಪದ್ಯಸಂಖ್ಯೆ : ೨೮೦೯

**ಕರ್ತೃ :** ಮಂಚಯ್ಯ

**ಆಕಾರ :** ಕಾಗದ ೨೧×೧೫ ಸೆ. ಮಿ.

**ಪತ್ರ :** ೧೨೪

**ಸಾಲು :** ೧೬

**ಅಕ್ಷರ :** ೨೭

**ಸಾರಾಂಶ :** ಬಸವಣ್ಣನವರ ಜೀವನ ಚರಿತ್ರೆಗೆ ಸಂಬಂಧಿಸಿದ ಈ ಕಾವ್ಯದ ಕಥೆಯು 'ಸಿಂಗಿರಾಜ ಪುರಾಣ'ವನ್ನು ಹೋಲುತ್ತದೆ. ಸಾಂಗತ್ಯದಲ್ಲಿ ಬರೆದ ಈ ಬೃಹತ್ ಕಾವ್ಯ ಮನೋಹರವಾಗಿರುವಂತೆ ತೋರುತ್ತದೆ. 'ಬಸವ ಪುರಾಣ' 'ಬಸವರಾಜ ದೇವರ ರಗಳೆ' 'ಸಿಂಗಿರಾಜ ಪುರಾಣ' 'ವೃಷಭೇಂದ್ರ ವಿಜಯ' ಮತ್ತು 'ಬಸವ ಸಂಪಾದನೆ' ಈ–ಕಾವ್ಯಗಳಿಗಿರುವಷ್ಟೇ ಮಹತ್ವವನ್ನು 'ಭಕ್ತಿರಸ ಸೋನೆ'ಗೂ ಕೊಡಬಹುದು. ಅಪ್ರಕಟಿತ.

ಕವಿಚರಿತೆಕಾರರು ಈ ಕಾವ್ಯದ ಬಗೆಗೆ "ಮಂಚಯ್ಯ. ಸು. ೧೬೫೦. ಈತನು ಭಕ್ತಿರಸ ಸೋನೆಯನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಇವನ ಕಾಲ ಸುಮಾರು ೧೬೫೦ ಆಗಿರಬಹುದು. ಇವನ ಗ್ರಂಥ ಭಕ್ತಿರಸ ಸೋನೆ. ಇದು ಸಾಂಗತ್ಯ-ದಲ್ಲಿದೆ" ಎಂದಿಷ್ಟು ಮಾತ್ರ ಹೇಳಿ ಮೌನ ತಾಳಿದ್ದಾರೆ. ಈ ಕಾವ್ಯವು ಪ್ರಕಟ-ವಾದರೆ ಬಸವಣ್ಣನವರ ಜೀವನದ ಮೇಲೆ ಹೊಸ ಬೆಳಕು ಬೀಳಬಹುದು. ಗ್ರಂಥದ ಕೊನೆಯಲ್ಲಿ ಚನ್ನಬಸವಣ್ಣನವರ ಮಂತ್ರಿಪಟ್ಟ, ಹರಳಯ್ಯ ಮಧುವಯ್ಯಗಳ ಮರಣ, ಬಿಜ್ಜಳನ ಕೊಲೆ, ರಾಯಮುರಾರಿಯ ಕಾಳಗ, ಉಳಿವೆಯತ್ತ ಗಮನ ಇತ್ಯಾದಿ ವಿಷಯಗಳನ್ನು ಹೇಳಲಾಗಿದೆ.

ಇದರಿಂದ ಕೆಲವು ನುಡಿಗಳನ್ನು ಉದ್ಧರಿಸುವೆವು :

ಎಲ್ಲರು ಶಿವಭಕ್ತರೆಲ್ಲರು ಶಿವಜ್ಞಾನಿ ।  
ರೆಲ್ಲರು ಶಿವಶಾಸ್ತ್ರವನೂ ।  
ಬಲ್ಲನುಭಾವಿಗಳಲ್ಲದಲತಿ ಮೂಢ ।  
ರಿಲ್ಲವಾ **ಬಾಗೆವಾಡಿ**ಯಲಿ ॥೮॥ ಸಂಧಿ ॥ ೧೨ ॥

ಅಂತಾವರೊಳಗೊಪ್ಪಿ ಸಂತತ ಬಾಳನು ।  
ಇಂತು ಮಂಡಿಗೆಯ ಮಾವರಸಾ ।  
ಮುಂತಾದಾತನ ಸತಿಕಾಂತೆ ಮಾದಮ್ಮನು ।  
ಸಂತತ ಸುಖ ಮಿರುತಿರಲೂ ॥೧೧॥ ಸಂಧಿ ॥೧೨॥

ಎಂದ ಮಾತನು ಕೇಳಿ ನಂದಿನಾಥನು ಬೇಗ ।
ಮುಂದಕ್ಕೆ ತನುವ ಚಾಚಿದನೂ ।
ಹೆಂದ ಬೇನೆಯು ನೊಂದು ದೋರದೆ ಚಲ್ವ ।
ಕಂದನ ಪಡದಾಳಾ ಕ್ಷಣದಿ ॥೩೨॥ ಸಂಧಿ ೧೨ ॥

ನೂತನಂಬುಜ ನವಚೇತನ ಗಂಧಿನೀ ।
ನೋತು ಕೇಳೊಲಿದು ತ್ರೈಲೋಕಾ ।
ತಾತ ಸಕಲ ಪ್ರಾಣದಾತಾನು ಶ್ರೀ ನಂದಿ
ನಾತ ಜನಿಸಿದನು ಜಾತಾ ॥೩೩॥ ಸಂಧಿ ೧೨ ॥

**ಕವಿ ಕಾವ್ಯ :**

ಸತಿಯು ವೀರಮ್ಮನ ಪತಿ ಬಸವಯ್ಯರ ।
ಸುತನು **ಪಂಚಯ್ಯ**ನೆನಿಪನೂ ।
ಸಿತ ಕಂಠ ನೊರದೀ ಸನ್ನುತಿಸಿ ಪೇಳಿದನೀಸ ।
ತೃತಿಯು ಮುಗಿದುದು ಶರಣಾರ್ಥಿ ॥ ೫೦ ॥ ಸಂಧಿ ೨೫ ॥

ಗ್ರಂಥದ ಆದಿಯಲ್ಲಿ 'ಬಾಣ ಮಯೂರ, ಉದ್ಭಟ, ಕಾಳಿದಾಸ, ನಂಬಿಯಣ್ಣ, ಹಂಪೆಯ ಹರೀಶ್ವರ, ಬಸವ, ಅಲ್ಲಮ, ಚೆನ್ನಬಸವ— ಇವರನ್ನು ಸ್ತುತಿಸಿರುವನು. ಹರೀಶ್ವರನ 'ಬಸವರಾಜದೇವರ ರಗಳೆ' ಅಪೂರ್ಣವಾಗಿದೆಯೆಂಬ ಪ್ರತೀತಿಯಿದೆ. ಅದು ಮೂಲದಲ್ಲಿ ೬೫ ಸ್ಥಲಗಳಲ್ಲಿರಬೇಕೆಂಬ ಊಹೆ ಇದೆ. 'ಭಕ್ತಿರಸ ಸೋನೆ'ಯ ಪ್ರಕಟನೆಯಿಂದ 'ಬಸವರಾಜದೇವರ ರಗಳೆ'ಯ ಮೇಲೂ ಹೊಸ ಬೆಳಕು ಬೀಳಬಹುದು.

ಕವಿಯು ಕಂತೆಯ ಶಿವಲಿಂಗಸ್ವಾಮಿ, ಕಪ್ಪುಗೊರಳ ಕರಿಬಸವರಾಜೇಂದ್ರಸ್ವಾಮಿ, ರಾಚವಟ್ಟೆ ಇವರನ್ನು ಗ್ರಂಥಾಂತ್ಯದಲ್ಲಿ ಸ್ಮರಿಸಿರುವನು.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೨, ಪು. ೪೪೦

೨. ಸಮಗ್ರ ವಚನ ವಾಙ್ಮಯ ಪ್ರಕಟಣಾ ಯೋಜನೆಯ ಗ್ರಂಥಭಂಡಾರದ ಹಸ್ತಪ್ರತಿಗಳು, ನಂ. ೧೨೨೦ ಮತ್ತು ೯೯

೧೭೯

**ಗ್ರಂಥ:** ಭಗವಾನ್ ಶ್ರೀ ಬಸವೇಶ್ವರ

**ಪ್ರಭೇದ:** ಚರಿತ್ರೆ

**ಕರ್ತೃ:** ನಂಜುಂಡಯ್ಯ (ಎಸ್)

**ಕಾಲ :** ಸು. ೧೯೦೦

**ಆಕಾರ :** ೧೬×೧೦ ಸೆ. ಮಿ.

**ಪುಟ :** iii+v+೫೬ = ೬೪

**ಸಾಲು :** ೨೪

**ಅಕ್ಷರ :** ೨೧

**ಸ್ಥಳ:** ಮೈಸೂರು

**ಪ್ರಕಾಶಕ :** ಶರಣ ಮಂಡಲಿ, ತ್ಯಾಗರಾಜ ರಸ್ತೆ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೪

**ಬೆಲೆ :** ೦೦-೨೫ ಪೈಸೆ

**ಮಾಲೆ :** ಶರಣ ಮಂಡಲಿ ಗ್ರಂಥಮಾಲಾ, ೧

**ಸಾರಾಂಶ :** 'ಜಗದಣ್ಣ ಬಸವಣ್ಣ', 'ಬಾಗೇವಾಡಿಯ ಭಾಗ್ಯರವಿ', 'ಮಹಾಮನೆಯ ಮಹಾದಾಸೋಹಿ', 'ಕೂಡಲಸಂಗಮ','ಅನುಭವ ಮಂಟಪದ ಮಹಾನುಭಾವಿ', 'ಇಲ್ಲಿ' ಮತ್ತು 'ಅಲ್ಲಿ' 'ಸಮಾಜೋದ್ಧಾರಕ', 'ಕಾಯಕವೇ ಕೈಲಾಸ' 'ಬಸವಯುಗದ ಮಹಿಳೆ', 'ಅಣ್ಣನ ಮಾತು ಅಮೃತ— ಹೀಗೆ ಹತ್ತು ಪ್ರಬಂಧಗಳಲ್ಲಿ ಬಸವಣ್ಣನವರ ವ್ಯಕ್ತಿತ್ವದ ಘನತೆಯನ್ನು ಚಿತ್ರಿಸಲಾಗಿದೆ ಸಿಂಹಾಸನಾರೂಢರಾಗಿ ಕುಳಿತ ಬಸವಣ್ಣನವರ ಭಾವಚಿತ್ರವಿದೆ

೧೮೦

**ಗ್ರಂಥ :** ಮಲೆಬಸವ ಚರಿತ್ರೆ

**ಸಾರಾಂಶ :** ಕವಿಚರಿತೆಕಾರರು ಸಿಂಗಿರಾಜಕೃತ ಮಲಬಸವರಾಜ ಚಾರಿತ್ರದ ಬಗೆಗೆ ಸ್ಪಷ್ಟವಾಗಿ ಹೇಳಿ ಪುನಃ ಅನುಬಂಧದಲ್ಲಿ ಕೊಟ್ಟಿರುವದರಿಂದ ಇದು ಪ್ರಕಟ

ವಾದುದಾಗಿರಬೇಕು. ಅಲ್ಲದೆ ಮುಂದೆ ವರ್ಣಿಸಿದ 'ಮಲೆಬಸವ ಪುರಾಣ'ದಂತೆ ಯಾರಿಂದಾದರೂ ಸಂಪಾದಿತವಾಗಿ ಪ್ರಸ್ತುತ ಹೆಸರಿನಲ್ಲಿ ಮುದ್ರಿತವಾಗಿರಬಹುದೆಂದು ಊಹಿಸುತ್ತೇವೆ. ಇದರ ಶುದ್ಧ ತಲೆಬರಹ 'ಅಮಲಬಸವ ಚರಿತ್ರೆ' ಎಂದಿದೆ.

**ನೋಡು :** ಸಿಂಗಿರಾಜ ಪುರಾಣ

---

**ಆಕರ :**

೧. ಕರ್ನಾಟಕ ಕವಿಚರಿತೆ, ಭಾಗ ೨, ಪು. ೧೪೮-೧೪೯
೨. ,, ,, ಭಾ. ೩, ಪು. ೪೧೮ ಮತ್ತು ೪೨೭

೧೮೧

## ಗ್ರಂಥ : ಮಲೆಬಸವ ಪುರಾಣ

**ಸಾರಾಂಶ :** ಕವಿಚರಿತೆ ಕಾರರು "ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆ ಇರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ." ಎಂದು ಕ. ಕ. ಚ ಭಾ. ೩. ಪು. ೪೨೭ ರಲ್ಲಿ ಹೇಳಿದ್ದಾರೆ. ಆದರೆ ಅವರ ಕ. ಕ. ಚ. ಭಾ. ೨, ಪು. ೧೪೮-೧೪೯ ರಲ್ಲಿ ಸಿಂಗಿ-ರಾಜಕೃತ ಅಮಲಬಸವರಾಜ ಚಾರಿತ್ರದ ಬಗೆಗೆ ವಿವರವಾಗಿ ಹೇಳಿದ್ದಾರೆ. ಪ್ರಸ್ತುತ ಗ್ರಂಥವು ಇದೇ ಆಗಿರಬಹುದಾದರೂ ಯಾರಿಂದಾದರೂ ಪ್ರಕಟವಾಗಿದ್ದಿರಬಹುದು.

**ನೋಡು :** ಸಿಂಗಿರಾಜ ಪುರಾಣ.

---

**ಆಕರ :**

೧. ಕರ್ನಾಟಕ ಕವಿಚರಿತೆ, ಭಾ. ೨, ಪು. ೧೪೮-೧೪೯.
೨. ಕರ್ನಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೨೭

೧೮೨

## ಗ್ರಂಥ : ಮಹಾಕಾರುಣಿಕ ಶ್ರೀ ಬಸವಣ್ಣನವರು

**ಕರ್ತೃ :** ವೀರೇಶ್ವರ. **ಗು. ನಾ.**

**ಪುಟ :** ೧೦+೫೨=೬೨

**ಸ್ಥಳ** : ಬೆಂಗಳೂರು

**ಪ್ರಕಾಶಕ** : ಶ್ರೀ ಡಿ. ಎಸ್. ಚಂದ್ರಪ್ಪ, ಶ್ರೀ ವೀರಶೈವ ಸಮಾಜ-ಸೇವಾಸಂಘ,

**ಆವೃತ್ತಿ** : ಪ್ರಥಮ

**ಮಿತಿ** : ೧೯೩೮ ?

**ಬೆಲೆ** : ೦-೧-೬ ಆಣೆ

**ಸಾರಾಂಶ** : "ಜಗತ್ತಿನ ಸುಪ್ರಸಿದ್ಧ ಜೀವಜ್ಯೋತಿಗಳಲ್ಲಿ ಒಬ್ಬರಾದ ಶ್ರೀ ಬಸವಣ್ಣನವರ ಜೀವನ ತತ್ವದ ವಿಷಯದಲ್ಲಿ ಇತ್ತೀಚೆಗೆ ಕೆಲವು ಆಕ್ಷೇಪಗಳು ಹುಟ್ಟಿ ವೀರಶೈವ ಸಮಾಜದಲ್ಲಿ ಒಂದು ವಿಷಮ ವಾತಾವರಣವು ತಲೆಹಾಕುತ್ತಿರುವುದರಿಂದ ಅದರ ನಿವಾರಣೆಗೆಂದು ಆಕ್ಷೇಪಗಳಿಗೆ ಚಾರಿತ್ರಿಕ ಪ್ರಮಾಣಗಳ ಆಧಾರದ ಮೇಲೆ ಸಮಂಜಸವಾದ ಉತ್ತರವನ್ನು ಬರೆದು ಅದನ್ನು ನಾಡಿನಲ್ಲಿ ಬೀರುವ ಉದ್ದೇಶದಿಂದ ಈ ಕೈಪಿಡಿಯನ್ನು ಪ್ರಕಟಿಸಲಾಗಿದೆ."

—ಮುನ್ನುಡಿಯಿಂದ

---

ಆಕರ :

೧. ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೨೩, ಸಂಚಿಕೆ ೧, ಪು. ೫೭-೫೮. ಜನೇವರಿ-ಮಾರ್ಚ ೧೯೩೮

## ೧೮೩

**ಗ್ರಂಥ** : **ಮಹಾತ್ಮಾ ಬಸವಣ್ಣನವರ ಕ್ರಾಂತಿಕಾರ್ಯ**

**ಪ್ರಭೇದ** : ಗದ್ಯ-ಚರಿತ್ರೆ

**ಕರ್ತೃ** : ಗಲಗಲಿ (ಕೆ. ಕೆ.)

**ಕಾಲ** : ಜ. ೧೫-೮-೧೯೧೭

**ಆಕಾರ** : ೧೮×೧೨ ಸೆ. ಮಿ.

**ಪತ್ರ** : ४+४೧=४೫

**ಸಾಲು** : ೨४

**ಅಕ್ಷರ** : ೨೧

**ಸ್ಥಳ** : ಬೆಳಗಾವಿ

**ಪ್ರಕಾಶಕ :** ಕೆ. ಜಿ. ಜೊಯಿಸಿ, ಭುವನೇಶ್ವರಿ ಮುದ್ರಣಾಲಯ,

**ಆವೃತ್ತಿ :** ಪ್ರಥಮ

**ಮಿತಿ :** ೧೯೪೭

**ಬೆಲೆ :** ೦-೧೦-೦ ಆಣೆ

**ಸಾರಾಂಶ :** ಬಸವಣ್ಣನವರು ಕ್ರಾಂತಿಪುರುಷರು; ಹೆಮ್ಮಕ್ಕಳಿಗೆ ಸಾಮಾಜಿಕ, ಧಾರ್ಮಿಕ ಸಮಾನ ಹಕ್ಕು-ಬಾಧ್ಯತೆಗಳನ್ನು ಕಲ್ಪಿಸಿಕೊಟ್ಟು ದಾಸ್ಯತ್ವದಿಂದ ಬಿಡುಗಡೆ ಮಾಡಿದರು; ಅಸ್ಪೃಶ್ಯತೆಯು ಸಾಮಾಜಿಕ ಪಾಪವೆಂಬುದನ್ನು ಸಾರಿ ದಲಿತೋದ್ಧಾರ ಮಾಡಿದರು; ಕನ್ನಡದ ಮುನ್ನಡೆಗೆ ಕಾರಣೀಭೂತರಾದರು; ಕಾಯಕವೇ ಕೈಲಾಸವೆಂದು ಹೇಳಿ ನಿರುದ್ಯೋಗ ನಿವಾರಣೆ ಮಾಡಿದರು; ಸರ್ವರಲ್ಲಿ ಆರ್ಥಿಕ ಸಮಾನತೆಯನ್ನುಂಟು ಮಾಡಿದರು; ಇಡೀ ಸಮಾಜಕ್ಕೆ ಬೇಧಭಾವವಿಲ್ಲದೆ ಶಿಕ್ಷಣವನ್ನಿತ್ತರು—ಇತ್ಯಾದಿ ವಿಚಾರಗಳನ್ನು ಇದರಲ್ಲಿ ವಿವರಿಸಲಾಗಿದೆ.

ಅನುಬಂಧ-೧ರಲ್ಲಿ ಬಸವಣ್ಣನವರ ಜನತಾವಾದ ಮತ್ತು ಮಾರ್ಕ್ಸ್‌ರ ಸಮಾಜವಾದ— ಇವುಗಳ ತುಲನಾತ್ಮಕ ಸಂಕ್ಷಿಪ್ತ ವಿವೇಚನೆಯಿದೆ. ಅನುಬಂಧ-೨ರಲ್ಲಿ ಶರಣರ ಮಾರ್ಗದ ರಹಸ್ಯವನ್ನು ಸ್ವಲ್ಪದರಲ್ಲಿ ವಿವರಿಸಲಾಗಿದೆ.

೧೮೪

**ಗ್ರಂಥ : ಮಹಾತ್ಮಾ ಬಸವೇಶ್ವರ**

**ಪ್ರಭೇದ :** ನಾಟಕ

**ಕರ್ತೃ :** ಬೆಳ್ಳಾವೆ (ನರಹರಿಶಾಸ್ತ್ರೀ ಶ್ರೀ ಬಿನರಸಾವಧಾನಿ)

**ಕಾಲ :** ಜ. ೧೮೮೨ ಮ. ೧೯೬೧

**ಮಿತಿ :** ೧೯೫೧

**ಸಾರಾಂಶ :** ಬಸವಣ್ಣನವರ ಜೀವನ ಚರಿತ್ರೆಯನ್ನು ಪ್ರಕಟಪಡಿಸುವ ನಾಟಕವಿದು. ಅಲಭ್ಯ.

---

ಆಕರ :

೧. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪು. ೭೧

೧೮೫

**ಗ್ರಂಥ : ಮಹಾನುಭಾವರಾದ ಬಸವಣ್ಣನವರು**

**ಪ್ರಭೇದ :** ಚರಿತ್ರೆ

**ಕರ್ತೃ :** ಹಂಜಿ (ಸದಾಶಿವ ವೀರಭದ್ರಪ್ಪ)

**ಕಾಲ :** ಸು. ೧೯೨೫

**ಆಕಾರ :** ೧೮×೧೨ ಸೆ.ಮಿ.

**ಪುಟ :** iv+೧೪೦=೧೪೪

**ಸಾಲು :** ೨೪

**ಅಕ್ಷರ :** ೨೦

**ಸ್ಥಳ :** ಬಾಗಲಕೋಟ

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೦

**ಬೆಲೆ :** ೧-೫೦ ರೂ.

**ಸಾರಾಂಶ :** ಬಸವಣ್ಣನವರ 'ಸರಳ ಜೀವನ' 'ಭಕ್ತಿ ಜೀವನ'ಗಳ ಪರಿಚಯವಿದೆ. ಅವರ 'ವಚನಾಮೃತ'ದ ಸವಿ, ಪ್ರಪಂಚಕ್ಕೆ ನೀಡಿದ 'ದಿವ್ಯ ಸಂದೇಶ'ಗಳ ವಿವರವಿದೆ. ಅವರು ವೀರಶೈವ ಧರ್ಮವನ್ನು ವಿಶ್ವಧರ್ಮವನ್ನಾಗಿ ಮಾಡಿದ್ದುದು, ಅಸ್ಪೃಶ್ಯತೆಯ ನಿವಾರಣೆ ಮಾಡಿದುದು, ಸ್ತ್ರೀಯರಿಗೆ ಗೌರವ ತೋರಿಸಿದುದು, ಕನ್ನಡ ಸೇವೆ ಮಾಡಿದುದು, ಸರ್ವಾಂಗ ಸುಂದರ ಸಮಾಜ ರಚಿಸಿದುದು— ಇತ್ಯಾದಿ ವಿಷಯಗಳ ವಿವೇಚನೆಯಿದೆ.

ಹರಿಹರ, ಭೀಮ, ಚಾಮರಸ, ಸಿಂಗಿರಾಜ, ಷಡಕ್ಷರದೇವ ಇವರ ಕಾವ್ಯಗಳಿಂದ ಉಚಿತ ಭಾಗಗಳನ್ನೂ, ಬಸವಣ್ಣನವರ ೧೨೯ ವಚನಗಳನ್ನೂ ವಿಷಯ ಪ್ರತಿಪಾದನೆಗೆ ಆಧಾರವಾಗಿ ಬಳಸಿಕೊಳ್ಳಲಾಗಿದೆ.

'ಜಗತ್ತಿನ ಮಹಾಪುರುಷರಲ್ಲಿ ಬಸವಣ್ಣನವರ ಸ್ಥಾನ' ಎಂಬ ಪ್ರಕರಣದಲ್ಲಿ ಶ್ರೀಯುತರಾದ ಫ. ಗು. ಹಳಕಟ್ಟಿ, ಎಂ. ಆರ್. ಶ್ರೀ, ಎಸ್. ಸಿ. ನಂದಿಮಠ, ರಂಗನಾಥ ದಿವಾಕರ, ಎಂ. ಆರ್. ಸಾಖರೆ, ಶಿ. ಶಿ. ಬಸವನಾಳ, ಬಾಗಿ— ಇವರು ಬಸವಣ್ಣನವರನ್ನು ಕುರಿತು ಮಾಡಿದ ಸಾಹಿತ್ಯ ಸೇವೆಯನ್ನು ಪ್ರಶಂಸಿಸಲಾಗಿದೆ.

೧೮೬

## ಗ್ರಂಥ: ಮಹಾನುಭಾವ ಶ್ರೀ ಬಸವಣ್ಣನವರು

**ಪ್ರಭೇದ:** ಗದ್ಯ–ಸಚಿತ್ರ ಜೀವನಚರಿತೆ

**ಕರ್ತೃ:** ಮನೋಹರ

**ಕಾಲ:** ಸು. ೧೯೨೫

**ಆಕಾರ:** ೧೮×೧೨ ಸೆ.ಮಿ.

**ಪುಟ:** ೬೧

**ಸಾಲು:** ೨೩

**ಅಕ್ಷರ:** ೧೮

**ಸ್ಥಳ:** ಧಾರವಾಡ

**ಪ್ರಕಾಶಕ:** ಮನೋಹರ ಘಾಣೇಕರ

**ಆವೃತ್ತಿ:** ದ್ವಿತೀಯ ಪ್ರಥಮ

**ಮಿತಿ:** ೨–೧೦–೧೯೬೨ ೧೯೫೫

**ಬೆಲೆ:** ೦೦–೬೦ ಪೈ.

**ಮಾಲೆ:** ಮನೋಹರ ಬಾಲಸಾಹಿತ್ಯ, ೭

**ಸಾರಾಂಶ:** ಇದರಲ್ಲಿ ಬಸವಣ್ಣನವರ ಜನನದಿಂದ ಐಕ್ಯದವರೆಗಿನ ಜೀವನವನ್ನು ಮಕ್ಕಳಿಗಾಗಿ ಸುಲಭ ಶೈಲಿಯಲ್ಲಿ ಬರೆಯಲಾಗಿದೆ. ಉಚಿತ ಸಂದರ್ಭಗಳಲ್ಲಿ ಚಿತ್ರಗಳಿರುವದರಿಂದ ಗ್ರಂಥಕ್ಕೆ ಕಳೆಕಟ್ಟಿದೆ. ಸರಳವಾದ ೩೫ ವಚನಗಳನ್ನಾಯ್ದು ಕೊಟ್ಟಿದೆ. ವಚನಗಳಲ್ಲಿ ಬರುವ ಕಠಿಣ ಶಬ್ದಗಳ ಅರ್ಥಕೋಶವು ಇದೆ.

೧೮೭

## ಗ್ರಂಥ: ಮಹಾನುಭಾವಿ ಶ್ರೀ ಬಸವೇಶ್ವರನ ದಿವ್ಯೋಪದೇಶ

**ಪ್ರಭೇದ:** ವಚನ–ಗೀತ

**ಕರ್ತೃ:** ಬಸವಣ್ಣ

**ಕಾಲ:** ಸು. ೧೧೬೭

**ಸಂಗೀತಗಾರ :** ಮೃತ್ಯುಂಜಯ ಗವಾಯಿ

**ಆಕಾರ :** ೨೧×೧೩ ಸೆ.ಮಿ.

**ಪುಟ :** ೮

**ಸ್ಥಳ :** ಹಾವೇರಿ

**ಸಂಪಾದಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ಬಸವ ಶಕೆ ೮೦೬

**ಸಾರಾಂಶ :** ಇದರಲ್ಲಿ ಬಸವಣ್ಣನವರ ೧೭ ವಚನಗಳಿಗೆ ಸ್ವರ-ಪ್ರಸ್ತಾರ ಹಾಕಿ ರಾಗ-ತಾಳಗಳನ್ನು ಕೂಡಿಸಿಕೊಟ್ಟಿದೆ. ಈ ವಚನಗಳನ್ನು ಸಂಗೀತದಲ್ಲಿ ಹಾಡಲಿಕ್ಕೆ ಬಹು ಸುಲಭದಲ್ಲಿ ಕಲಿಯಬಹುದು.

೧೮೮

**ಗ್ರಂಥ : ಮಂತ್ರಗೋಪ್ಯ**

**ಪ್ರಭೇದ :** ಹಾಲು

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಾರಾಂಶ :** "ಇದು ಹಾಡಿನ ರೂಪವಾಗಿದೆ. ಇದರಲ್ಲಿ ವೀರಶೈವ ಸಿದ್ಧಾಂತವು ಸಂಗ್ರಹವಾಗಿ ಹೇಳಿದೆ" ಎಂದು ಕವಿಚರಿತೆಕಾರರು ವರ್ಣಿಸಿರುವರು.

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೧, ಪು. ೧೭೭

೧೮೯

**ಗ್ರಂಥ : ಮುಗಿಯದ ಕನಸು** ಭಾ. ೫

**ಪ್ರಭೇದ :** ಕಾದಂಬರಿ

**ಕರ್ತೃ :** ಪುಟ್ಟಸ್ವಾಮಯ್ಯ (ಬಿ)

**ಕಾಲ :** ಜ. ೨೭-೫-೧೯೫೭

**ಆಕಾರ :** ೧೮×೧೨ ಸೆ. ಮಿ.

**ಪುಟ :** vii+೨೬೮=೨೭೫

**ಸಾಲು :** ೨೯

**ಅಕ್ಷರ :** ೨೭

**ಸ್ಥಳ :** ಬೆಂಗಳೂರು ಅರಳೆಪೇಟೆ

**ಪ್ರಕಾಶಕ :** ಶಾರದಾ ಪ್ರಕಟನಾಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೨

**ಬೆಲೆ :** ೩=೭೫ ರೂ.

**ಮಾಲೆ :** ಶಾರದಾ ಪ್ರಕಟನಾಲಯ, ಪ್ರಕಟನೆ, ೧೨೮

**ಸಾರಾಂಶ :** "ಜಾತಿ-ಪಂಥಗಳ ನಿವಾರಣೆ, ಶಿವಭಕ್ತರೆಲ್ಲರ ಸಮಾನತೆ, ಸ್ತ್ರೀ ಶೂದ್ರರ ಸಮಾನಾಧಿಕಾರ— ಈ ತತ್ವಗಳನ್ನು ಪ್ರತಿಪಾದಿಸಿ ಆಚರಣೆಗೆ ತಂದು ವೈದಿಕ ಧರ್ಮದ ವಿರೋಧಿಗಳಾಗಿದ್ದ ಬಸವಣ್ಣನವರು, ಅನುಭವ ಮಂಟಪದ ಶರಣರು, ತಮ್ಮ ತತ್ವನಿಷ್ಠೆ ಆದರ್ಶಗಳ ಮೇಲೆ ಎರಗಿ ಬಂದ ಈ ಸವಾಲನ್ನು ಯಾವ ರೀತಿ ಎದುರಿಸಿದರು, ಎಂಬುದರ ವಾಸ್ತವ ಚಿತ್ರವನ್ನು ರೂಪಿಸಲು ಇಲ್ಲಿ ಪ್ರಯತ್ನಿಸಿದೆ."

—ಲೇಖಕರ 'ಮೊದಲ ಮಾತಿ'ನಿಂದ

ಚಾಲುಕ್ಯ ರಾಜ್ಯಕಾಲದಲ್ಲಿ ನಡೆದ ಕಲಚೂರ್ಯ ಬಿಜ್ಜಳನ ರಾಜ್ಯಾಪಹಾರದ ನಂತರದ ಅವಧಿಯಲ್ಲಿ ನಡೆದ ಘಟನೆಗಳನ್ನು ಕುರಿತು, ಬಸವಣ್ಣನವರ ಜೀವನ ಚರಿತ್ರೆಯನ್ನು ಕುರಿತು ಬರೆದ ಕಾದಂಬರಿ.

**ನೋಡು :** ೧. ಉದಯರವಿ
೨. ರಾಜ್ಯಪಾಲ
೩. ಕಲ್ಯಾಣೇಶ್ವರ
೪. ನಾಗಬಂಧ
೫. ಕ್ರಾಂತಿ ಕಲ್ಯಾಣ

೧೯೦

**ಗ್ರಂಥ ಃ ಯುಗಪ್ರವರ್ತಕ ಬಸವಣ್ಣನವರು**

**ಪ್ರಭೇದ :** ಗದ್ಯ-ಚರಿತ್ರೆ

**ಕರ್ತೃ :** ಹಳಪೇಟಿ (ಚಿಂತಾಮಣಿ)

**ಕಾಲ :** ಜ. ೧೯೧೫

**ಆಕಾರ :** ೧೮×೧೨ ಸೆ. ಮಿ.

**ಪುಟ :** viii+೮೦=೮೮

**ಸಾಲು :** ೨೮

**ಅಕ್ಷರ :** ೨೬

**ಸ್ಥಳ :** ಮೈಸೂರು ಧಾರವಾಡ

**ಪ್ರಕಾಶಕ :** i. ಜೀವನ ಪುಸ್ತಕಾಲಯ ii. ಮನೋರಂಜನ ಪ್ರಕಾಶನ ಸಮಿತಿ iii. ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ

**ಆವೃತ್ತಿ :** ಪ್ರಥಮ ದ್ವಿತೀಯ ತೃತೀಯ

**ಮಿತಿ :** ೨೫-೪-೧೯೪೪ ೧೯೪೭ ೧೧-೫-೧೯೬೭

**ಬೆಲೆ :** ೧-೦-೦ ರೂ. ೧=೫೦ ರೂ.

**ಸಾರಾಂಶ :** ಬಸವಣ್ಣನವರು ಹೃದಯಧರ್ಮದ ತಳಹದಿಯ ಮೇಲೆ ಸ್ವಯಂಪೋಷಿತ ಸ್ವಾವಲಂಬಿ ಸಮಾಜವನ್ನು ಕಟ್ಟಿದವರು, ಇಹಲೋಕದಲ್ಲಿದ್ದು ಕೊಂಡು ಜೀವನ ಸಾಫಲ್ಯಹೊಂದುವ ರೀತಿಯನ್ನು ತೋರಿಸಿಕೊಟ್ಟರು. ಪ್ರತಿಯೊಬ್ಬನಿಗೂ ಕಾಯಕವೇ ಕೈಲಾಸವೆಂಬ ಮಂತ್ರದೀಕ್ಷೆ ಮಾಡಿದರು. ದಯೆ, ಸತ್ಯ, ಅಹಿಂಸೆ, ಶಾಂತಿ ಮುಂತಾದ ಸದ್ಗುಣಗಳ ಸಾಕಾರಮೂರ್ತಿಯಾಗಿದ್ದರು. ಅವರ ಭಾವ ವಾಣಿಯೇ ಕನ್ನಡಿಗರ ದೇವವಾಣಿಯಾಯಿತು. ಮಹಾದೇವಿಯಕ್ಕ ಮೊದಲಾದ ಸ್ತ್ರೀಯರಿಗೆ ಅಕ್ಕರೆಯ ಅಣ್ಣನಾಗಿದ್ದರು. ಒಟ್ಟಾರೆ ಅವರೊಬ್ಬ ಮಹೋನ್ನತ ಆದರ್ಶವನ್ನಿಟ್ಟುಕೊಂಡು ಆಚರಿಸಿದ, ಭಾರತದ ಯುಗಪ್ರವರ್ತಕರು— ಎಂದು ಬಸವಣ್ಣನವರ ಜೀವನವನ್ನು ಏಳು (ಪ್ರಬಂಧಗಳಲ್ಲಿ) ಪ್ರಸ್ತುತ ಗ್ರಂಥದಲ್ಲಿ ವರ್ಣಿಸಲಾಗಿದೆ.

"ದೇಶಪ್ರೇಮ, ಜನಜಾಗ್ರತಿ, ಕರ್ಣಾಟಕ ಏಳಿಗೆ ಇವುಗಳಿಗಾಗಿ ಆಸ್ಥೆ ತೋರಿಸುವ, ದುಡಿಯಬೇಕೆನ್ನುವ ಕನ್ನಡಿಗರು ಈ ಗ್ರಂಥದಲ್ಲಿಯ ವಿಚಾರಸರಣಿಯನ್ನು ನಿರ್ವಿಕಾರ ಮನಸ್ಸಿನಿಂದ ವಿಚಾರಮಾಡುವದು ಆವಶ್ಯಕವಾಗಿದೆ."

—ಪ್ರೊ ಎಸ್. ಎಸ್. ಮಾಳವಾಡ ಅವರ ಅಭಿಪ್ರಾಯ

೧೯೧

**ಗ್ರಂಥ : ರಾಜ್ಯಪಾಲ** ಭಾ. ೨.

**ಪ್ರಭೇದ :** ಕಾದಂಬರಿ

**ಕರ್ತೃ :** ಪುಟ್ಟಸ್ವಾಮಯ್ಯ (ಬಿ)

**ಕಾಲ :** ಜ. ೨೭-೫-೧೮೯೭

**ಆಕಾರ :** ೨೨×೧೪ ಸೆ. ಮಿ.

**ಪುಟ :** ೪೩೦

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಶಾರದಾ ಪ್ರಕಟನಾಲಯ

**ಆವೃತ್ತಿ:** ಪ್ರಥಮ ದ್ವಿತೀಯ

**ಮಿತಿ :** ೧೯೬೦ ೧೯೬೫

**ಬೆಲೆ :** ೩=೫೦ ರೂ

**ಮಾಲೆ :** ಶಾರದಾ ಪ್ರಕಟನಾಲಯ, ಪ್ರಕಟನೆ, ೯೬

**ಸಾರಾಂಶ :** "ಚಾಲುಕ್ಯ ಅರಸರಲ್ಲಿ ಪೆರ್ಮ ಜಗದೇಕಮಲ್ಲನ ಅನಂತರ ಸಿಂಹಾಸನವನ್ನೇರಿದ ನೂರ್ಮಡಿ ತೈಲಪನು ವಿಲಾಸಪ್ರಿಯನೂ, ಆಲಸಿಯೂ, ರಾಜಕಾರಣದಲ್ಲಿ ಅನನುಭವಿಯೂ ಆಗಿದ್ದುದರಿಂದ ರಾಜ್ಯಸೂತ್ರಗಳು ಸಾಮಂತನೂ ಮಹಾದಂಡನಾಯಕನೂ ಆಗಿದ್ದ ಕಲಚುರ್ಯ ಬಿಜ್ಜಳನ ಅಧೀನವಾದವು. ಈ ರಾಜ್ಯಾಪಹಾರ ನಡೆದ ಹನ್ನೆರಡನೆಯ ಶತಮಾನದ ಮೇಲೆ ಅಭೂತಪೂರ್ವವಾದ ಸಾಹಿತ್ಯ ಧಾರ್ಮಿಕ ಕ್ರಾಂತಿಯ ಹೊಲಬನ್ನು ಚೆಲ್ಲಿ, ಬಿಜ್ಜಳನ ರಾಜ್ಯಕಾಲವನ್ನು ಐತಿಹಾಸಿಕ ಪ್ರಾಮುಖ್ಯತೆಗೇರಿಸಿದ ಭಕ್ತಿಭಂಡಾರಿ ಬಸವಣ್ಣನವರು ಬಿಜ್ಜಳನ ಮಂತ್ರಿಪರಿಷತ್ತಿನಲ್ಲಿ ರಾಜಪ್ರತಿನಿಧಿಯಾಗಿದ್ದ ಅವಧಿಯಲ್ಲಿ ನಡೆದ ಘಟನೆಗಳು 'ರಾಜ್ಯಪಾಲ' ಕಾದಂಬರಿಯ ಕಥಾವಸ್ತು. ಕಾದಂಬರಿಯ ಹಿನ್ನೆಲೆಯಾಗಿ ಆ ಕಾಲದ ಸಾಮಾಜಿಕ ರಾಜಕೀಯ ಪರಿಸ್ಥಿತಿಯನ್ನು, ಸಮಸಾಮಯಿಕ ಸಾಹಿತ್ಯ ಶಾಸನಗಳ ಸಹಾಯದಿಂದ ನಿರೂಪಿಸಲು ಇಲ್ಲಿ ಪ್ರಯತ್ನಿಸಿದೆ."

—ಲೇಖಕರ 'ಮೊದಲ ಮಾತು'ಗಳಿಂದ

ನೋಡು : ೧. ಉದಯ ರವಿ
೨. ಕಲ್ಯಾಣೇಶ್ವರ
೩. ನಾಗಬಂಧ
೪. ಮುಗಿಯದ ಕನಸು
೫. ಕ್ರಾಂತಿ ಕಲ್ಯಾಣ

೧೯೨

**ಗ್ರಂಥ : ರಾಜಯೋಗ ವಚನ**

ಪ್ರಭೇದ : ವಚನ

ಕರ್ತೃ : ಬಸವಣ್ಣ

ಕಾಲ : ಸು. ೧೧೬೭

**ಸಾರಾಂಶ :** ಇದು ಬಸವಣ್ಣನವರಿಂದ ಬರೆಯಲ್ಪಟ್ಟದೆಂದು ಈ. ಪಿ. ರಾಯಿಸ ಸಾಹೇಬರು ಹೇಳಿರುವರು.

---

ಆಕರ :

೧. History of Kanarese Literature p. 53-54
೨. ಶರಣ ಸಾಹಿತ್ಯ, ವಿಶೇಷ ಸಂಚಿಕೆ, ಪು. ೫೯. ದಿ. ೨೩-೪-೧೯೩೯

೧೯೩

**ಗ್ರಂಥ : ವಸ್ತುಕ ಬಸವ ಪುರಾಣ**

ಕರ್ತೃ : ಶಿವಕವಿದೇವ (ಬಾಲಚಂದ್ರ ನಗರದ)

ಕಾಲ : ಸು. ೧೮೩೦

**ಸಾರಾಂಶ :** "ಬಸವಲಿಂಗನ (ಸು. ೧೮೩೦) ಶರಣು ಬಸವ ರಗಳೆ ಕಂದದಲ್ಲಿ ಬಾಲಚಂದ್ರನಗರದ ಒಬ್ಬ ಶಿವಕವಿ **ವಸ್ತುಕ ರೂಪವಾದ** ಒಂದು **ಬಸವ ಪುರಾಣ**ವನ್ನು ಬರೆದಂತೆ ಹೇಳಿದೆ. (Kittel's Nagavarma's 'Prosody' LXXX)" ಎಂದು ಕವಿಚರಿತೆಕಾರರು ಹೇಳಿದ್ದಾರೆ.

"ಈ ಬಾಲಚಂದ್ರಪುರವು ಮೈಸೂರು ಜಿಲ್ಲೆಯ ಯಳಂದೂರು ಆಗಿರಬಹದೆಂದು ತೋರುತ್ತದೆ. ಆ ಭಾಗದಲ್ಲಿ ಹಲವು ಮಂದಿ ವೀರಶೈವ ಕವಿಗಳು ಆಗಿ ಹೋಗಿದ್ದಾರೆ" ಎಂದು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು 'ಶರಣಸಾಹಿತ್ಯ'ದಲ್ಲಿ ಹೇಳಿದ್ದಾರೆ. ಆದರೆ ಈ ಗ್ರಂಥದ ಶೋಧವಿನ್ನೂ ಆಗಿಲ್ಲ.

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೧, ಪು. ೧೩

೨. ಶರಣ ಸಾಹಿತ್ಯ, ವಿಶೇಷ ಸಂಚಿಕೆ, ಪು. ೬೨. ದಿ. ೨೩-೪-೧೯೩೯

೧೯೪

ಗ್ರಂಥ : ವಿಭೂತಿ ಮಹಾತ್ಮ್ಯವು

ಪ್ರಭೇದ : ವಚನ

ಕರ್ತೃ : ಬಸವಣ್ಣ

ಕಾಲ : ಸು. ೧೧೬೦

ಆಕಾರ : ತಾಳವೋಲೆ. ೭×೧ ಇಂಚು

ಪುಟ : ೭

ಸಾಲು : ४

ಸಾರಾಂಶ : DCKM ದ ಸಂಪಾದಕರು ಗ್ರಂಥದ ಬಗೆಗೆ ಹೀಗೆ ಹೇಳುತ್ತಾರೆ :

"ಇದು ವಚನದಲ್ಲಿ ಬರೆದಿದೆ. ಇದರಲ್ಲಿ ವಿಭೂತಿ ಮಹಿಮೆಯು ಪ್ರತಿಪಾದಿತವಾಗಿದೆಯಾಗಿ ಈ ಗ್ರಂಥಕ್ಕೆ 'ವಿಭೂತಿ ಮಹಾತ್ಮ್ಯ'ವೆಂದು ಕೊಟ್ಟಿದೆ."

'ಕೂಡಲಸಂಗಮದೇವ' ಎಂಬ ಅಂಕಿತವಿರುವದರಿಂದ ಇದು ಬಸವಣ್ಣನವರ ವಚನಗಳ ಸಂಗ್ರಹವಿರಬಹುದೆಂದು ನಾವಿಲ್ಲಿ ಎತ್ತಿಕೊಂಡಿದ್ದೇವೆ. ಈಗ ಪ್ರಕಟವಾಗಿರುವ ಬಸವಣ್ಣನವರ ವಚನ ಸಂಕಲನಗಳಲ್ಲಿ ಇವು ಬಂದಂತೆ ತೋರುವದಿಲ್ಲ. ಇದರಲ್ಲಿಯ ಒಂದು ವಚನವನ್ನು ನಾವಿಲ್ಲಿ ಉದ್ಧರಿಸುತ್ತೇವೆ :

'ಎಣಿಕೆಯಿಲ್ಲದ ಭವಪಾಶವು ಪರಿವುದು ನೋಡಾ!
ವಿಭೂತಿಯನೊಲಿದು ಧರಿಸಿದನೆಂದು
ಯಾನುಧರಿಸಿ ಬದುಕಿದೆ ಕಾಣೆ ಕೂಡಲಸಂಗಮದೇವಯ್ಯ."

ಆಕರ:

1. Descriptive Catalogue of the Kannada Manuscripts—Madras, vol. IV, No. 544, p. 871

೧೯೫

**ಗ್ರಂಥ:** ವಿಶ್ವಬಂಧು ಬಸವೇಶ್ವರ

**ಪ್ರಭೇದ:** ಗದ್ಯ-ಪ್ರಬಂಧ

**ಕರ್ತೃ:** ಕೃಷ್ಣರಾಯ (ಅ. ಸ.)

**ಕಾಲ:** ಜ. ೯-೫-೧೯೦೪

**ಆಕಾರ:** ೧೫×೧೦ ಸೆ. ಮಿ.

**ಪುಟ:** ೪೧

**ಸ್ಥಳ:** ಮೈಸೂರು

**ಪ್ರಕಾಶಕ:** ಎಚ್. ವೆಂಕಟರಾಮಯ್ಯ ಆ್ಯಂಡ ಸನ್ಸ

**ಆವೃತ್ತಿ:** ಪ್ರಥಮ

**ಮಿತಿ:** ೧೯೫೯

**ಬೆಲೆ:** ೧=೦೦ ರೂ.

**ಮೂಲೆ:** ವಿದ್ಯಾನಿಧಿ ಜ್ಞಾನಭಂಡಾರ, ೩

**ಸಾರಾಂಶ:** ೧. ವಿಶ್ವಬಂಧು ಶ್ರೀ ಬಸವೇಶ್ವರ, ೨. ಬಸವಣ್ಣನವರನ್ನು ನೋಡುವ ದೃಷ್ಟಿ, ೩. ಬಸವಣ್ಣನವರು ಸಾಧಿಸಿದ ಸಮಾಜ ಸಂಘಟನೆ, ೪. ಬಸವಣ್ಣನವರ ದರ್ಶನ, ೫. ಬಸವಣ್ಣನವರ ವಚನಗಳು, ೬. ಬಸವ ಜಯಂತಿ, ೭. ಚಿತ್ರಕಲೆಯಲ್ಲಿ ಶ್ರೀ ಬಸವಣ್ಣನವರು—ಹೀಗೆ ಏಳು ಪ್ರಬಂಧಗಳು ಇದರಲ್ಲಿ ಸಂಕಲಿತವಾಗಿವೆ.

"ವೀರಶೈವ ಧರ್ಮಸ್ಥಾಪಕರಾದ ಶ್ರೀ ಬಸವಣ್ಣನವರು ವೀರಶೈವರಿಗೆ ಮಾತ್ರವಲ್ಲದೇ ಎಲ್ಲ ಕನ್ನಡಿಗರಿಗೂ, ಎಲ್ಲ ಸಾಧಕರಿಗೂ ಪ್ರಿಯರಾಗಿದ್ದಾರೆ. ಧರ್ಮ-

ಪ್ರಸಾರಕರಾಗಿ, ರಾಜಕಾರಣಿಗಳಾಗಿ, ನೂತನ ಸಮಾಜ ಸ್ಥಾಪಕರಾಗಿ, ಸಾಹಿತಿಗಳಾಗಿ ಬಸವಣ್ಣನವರು ನಾಡಿಗೆ ಬಹುಮುಖ ಸೇವೆ ಸಲ್ಲಿಸಿದ್ದಾರೆ. ಅವರ ಅನಾದೃಶ ಜೀವನದ ಕೆಲವು ಮುಖಗಳನ್ನು 'ವಿಶ್ವಬಂಧು ಬಸವೇಶ್ವರ' ಪರಿಚಯ ಮಾಡಿಕೊಡುತ್ತದೆ."

—ಲೇಖಕರ 'ಮುನ್ನುಡಿ'ಯಿಂದ

೧೯೬

**ಗ್ರಂಥ:** ವೀರಶೈವ ಧರ್ಮೋದ್ಧಾರಕರಾದ ಶ್ರೀ ಬಸವೇಶ್ವರ ಲಾವಣಿ ಪದ.

**ಪ್ರಭೇದ:** ಲಾವಣಿ

**ಕರ್ತೃ:** ಕುಲಕರ್ಣಿ (ಕೇಶವರಾಯ)

**ಕಾಲ:** ಸು. ೧೯೦೦

**ಆಕಾರ:** ೧೩×೧೧ ಸೆ.ಮಿ.

**ಪುಟ:** ೧೫

**ಸಾಲು:** ೨೨

**ಅಕ್ಷರ:** ೨೭

**ಸ್ಥಳ:** ಧಾರವಾಡ

**ಪ್ರಕಾಶಕ:** ಶ್ರೀನಿವಾಸ ಶೇಷೋ ಕುಲಕರ್ಣಿ ಇವರ ಸಲುವಾಗಿ ಶ್ರೀ ಬಿ. ಜಿ. ಅವಧಾನಿ

**ಆವೃತ್ತಿ:** ಪ್ರಥಮ

**ಮಿತಿ:** ಬಸವ ಜಯಂತಿ ೧೯೩೭

**ಬೆಲೆ:** ೦–೪–೦ ಆಣೆ

**ಮಾಲೆ:** ಸ್ವಾತಂತ್ರ್ಯ ಪ್ರಕಾಶನ, ೨

**ಸಾರಾಂಶ:** ಬಸವಣ್ಣನವರ ಜನನ, ಬಾಲ್ಯ, ಶಿಕ್ಷಣ, ಮಂತ್ರಿಪದ, ಉಪದೇಶ, ತ್ರಿವಿಧ ಭಕ್ತಿ, ಗುರುಪಥ, ಶಿವಪಥ, ನೀತಿ ಪ್ರಾರ್ಥನೆ, ಅನುಭಾವ, ಶಿವದರ್ಶನ– ಇತ್ಯಾದಿ ವಿಷಯಗಳನ್ನು ಅಳವಡಿಸಿಕೊಂಡು ಪ್ರಕಟವಾದ ಲಾವಣಿಪದದ ಗ್ರಂಥವಿದು. ಸ್ವತಂತ್ರಸಾಹಿತ್ಯದ ಯುಗಪುರುಷ ಬಸವಣ್ಣ ಎಂದು ವರ್ಣಿಸ-

ಲಾಗಿದೆ. ಶರಣರ ವಿವಿಧ ಕಾಯಕಗಳ ವಿವರಣೆ ಅಲ್ಲಲ್ಲಿ ಬಂದಿದೆ. ಕಥೆ ಸಾಂಪ್ರದಾಯದ್ದು.

"೧೯೩೬ರ ಬಸವ ಜಯಂತಿಗೆ 'ಗದುಗಿನ ವೀರಶೈವ ತರುಣ ಸಂಘದವರು' ಈ ಕೃತಿಯ ಸೊಬಗು, ಸೌಂದರ್ಯಗಳನ್ನರಿತು ಅಚ್ಚುಪಡಿಸಿ ಪುಕ್ಕಟೆಯಾಗಿ ಹರಡಿದರು. ಈ ಚಿಕ್ಕ ಕೃತಿಯನ್ನೇ ಮುಂದುವರಿಸಿ ತತ್ವಗಳು ಹೊರಹೊಮ್ಮಿ ಎಲ್ಲರಿಗೂ ತಿಳಿಯುವ ಹಾಗೆ ವಚನ ಸಂಪತ್ತನ್ನೇ ನಿಧಿಯಾಗಿಟ್ಟುಕೊಂಡು ಲಾವಣಿ, ಗೀಗೀ ಶೈಲಿಗೆ ಒಪ್ಪುವ ಹಾಗೆ ಹೆಣೆಯಲು ಪ್ರಯತ್ನ ಮಾಡಿರುವೆ."

—ಲಾವಣಿಕಾರರ 'ಅರಿಕೆ'ಯಿಂದ

ಆಕರ:

೧. ಕರ್ನಾಟಕ ವಿದ್ಯಾವರ್ಧಕ ಸಂಘ, ಗ್ರಂಥ ನಂ. ૩೦೭೪

೧೯೭

**ಗ್ರಂಥ :** ವೀರಶೈವ ಭಕ್ತಿವಿಜಯ ಅಥವಾ ಶ್ರೀ ಬಸವೇಶ್ವರ ಕಥಾಮೃತ

**ಪ್ರಭೇದ :** ಗದ್ಯ-ಚರಿತ್ರೆ

**ಕರ್ತೃ :** ಹಿರೇಮಠ (ಬಸವಯ್ಯ ಶಾಸ್ತ್ರಿ)

**ಆಕಾರ :** ೧೮×೧೨ ಸೆ.ಮಿ.

**ಪುಟ :** ii+૩೧೨=૩೧೪

**ಸಾಲು :** ೨೭

**ಅಕ್ಷರ :** ೨೬

**ಸ್ಥಳ :** ಗದಗ

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೫

**ಬೆಲೆ :** ೨=೫೦ ರೂ.

**ಮಾಲೆ :** ಶ್ರೀ ಗಣಾಧೀಶ್ವರ ಗ್ರಂಥಮಾಲೆ, ೮

**ಸಾರಾಂಶ:** ಈ ಗ್ರಂಥಕ್ಕೆ ಆಧಾರವಾದ ಮೂಲಗ್ರಂಥವಾವುದೆಂದು ಲೇಖಕರು ಎಲ್ಲಿಯೂ ಹೇಳಿಲ್ಲ. ಇದು 'ಬಸವ ಪುರಾಣ'ದ ಗದ್ಯಾನುವಾದವಾಗಿದೆ. ಶ್ರೀ ಎನ್. ಆರ್. ಕರಿಬಸವಶಾಸ್ತ್ರಿಗಳು ಬರೆದ **'ಬಸವರಾಜ ವಿಜಯಂ'** (೧೯೩೪) ಗ್ರಂಥದ ಗದ್ಯಾನುವಾದಕ್ಕೂ ಪ್ರಸ್ತುತ ಗ್ರಂಥದ ಗದ್ಯಾನುವಾದಕ್ಕೂ ಭಾಷೆ-ಶೈಲಿಗಳಲ್ಲಿ ಬಹಳ ಸಮೀಪದ ಹೋಲಿಕೆಯಿದೆ. ಬಸವಾದಿ ಶರಣರ ಕಥೆಗಳೇ ಈ ಗ್ರಂಥದ ಮೂಲವಸ್ತು.

೧೯೮

**ಗ್ರಂಥ: ವೀರಶೈವ ಮತೋದ್ಧಾರಕರಾದ ಶ್ರೀ ಬಸವೇಶ್ವರರು**

**ಪ್ರಭೇದ:** ಗದ್ಯ-ವಿಮರ್ಶೆ

**ಕರ್ತೃ:** ರಾಮರಾವ್ (ಎಂ.)

**ಕಾಲ:** ಜ. ೧೮೬೦

**ಆಕಾರ:** ೧೭·೫×೧೨ ಸೆ. ಮಿ.

**ಪುಟ:** ೩೮

**ಸಾಲು:** ೨೭

**ಅಕ್ಷರ:** ೨೫

**ಸ್ಥಳ:** ನ್ಯೂಮಾರ್ಕೆಟ್, ಬೆಂಗಳೂರು

**ಪ್ರಕಾಶಕ:** ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

**ಆವೃತ್ತಿ:** ಪ್ರಥಮ

**ಮಿತಿ:** ಜೂನ ೧೯೨೫

**ಬೆಲೆ:** ೦–೨–೦ ಆಣೆ

**ಮಾಲೆ:** ಸುಬೋಧ ಕುಸುಮಾಂಜಲಿ ಗ್ರಂಥಮಾಲಾ, ೪೧

**ಸಾರಾಂಶ:** ಬಸವ ಪುರಾಣ, ಸಿಂಗಿರಾಜ ಪುರಾಣ, ಬಸವ ಚರಿತ್ರೆ– ಮುಂತಾದ ಪ್ರಾಚೀನ ಕಾವ್ಯಗಳನ್ನು ಆಧಾರವಾಗಿಟ್ಟುಕೊಂಡು ನವೀನ ದೃಷ್ಟಿಯಿಂದ ವಿಮರ್ಶಿಸಿ ಬಸವಣ್ಣನವರ ಚರಿತ್ರೆಯನ್ನು ಇದರಲ್ಲಿ ವರ್ಣಿಸಿದೆ. ಚರಿತ್ರೆಯಲ್ಲಿ ಸಾಂಪ್ರದಾಯದ ಕಥೆಗೆ ಕೆಲವು ವ್ಯತ್ಯಾಸಗಳಿವೆ. ಬಸವಣ್ಣನವರ ವ್ಯಕ್ತಿತ್ವದ ಹಿರಿಮೆಯನ್ನು ಪ್ರಕಟಪಡಿಸಲು ಆಧುನಿಕ ವಿಮರ್ಶಾ ವಿಧಾನವನ್ನನುಸರಿಸಿದೆ.

೧೯೯

**ಗ್ರಂಥ :** ವೀರಶೈವ ಶಿಖಾರತ್ನ

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಆಕಾರ :** ೭.೮×೫.೫ ಸೆ. ಮಿ.

**ಪುಟ :** ೧೯

**ಸಾರಾಂಶ :** ಕವಿಚರಿತೆಕಾರರು "**ಶಿಖಾರತ್ನ ವಚನ:** ಇದರಲ್ಲಿ೩೪ ವಚನಗಳಿವೆ" ಎಂದು ಹೇಳಿ 'ಅಪ್ರಮಾಣ ಕೂಡಲಸಂಗಮದೇವಾ' ಎಂಬ ಮುದ್ರಿಕೆಯುಳ್ಳ ವಚನವೊಂದನ್ನು ಉದಾಹರಿಸಿದ್ದಾರೆ. ಇದೇ ಅಭಿಪ್ರಾಯವನ್ನು ಅವಲಂಬಿಸಿ ಕ.ವ.ಹ. ಸೂಚಿಯಲ್ಲಿ 'ವೀರಶೈವ **ಶಿಖಾರತ್ನ**'ವನ್ನು ಬಸವಣ್ಣ ಕರ್ತೃತ್ವದಲ್ಲಿ ಕೊಟ್ಟಿದೆ. ಅದರಲ್ಲಿ ವಚನಗಳು ೩೬ ಇದ್ದು 'ಅಪ್ರಮಾಣ ಕೂಡಲಸಂಗಮದೇವಾ' ಎಂಬ ಅಂಕಿತವಿದೆ. ಇವೇ ವಚನಗಳನ್ನು ಡಾ. ಫ. ಗು. ಹಳಕಟ್ಟಿಯವರು 'ಸಂಗನ ಬಸವೇಶ್ವರನ ವಚನಗಳು' ಎಂಬ ಶಿರೋನಾಮದಲ್ಲಿ ಪ್ರಕಟಿಸಿರುವರು. ಭಾಷೆ, ಭಾವ ಇತ್ಯಾದಿಗಳಿಂದ ಇವು ಬಸವಕೃತ ಹೌದೋ? ಅಲ್ಲವೋ? ಎಂಬುದನ್ನು ನಿರ್ಧರಿಸುವದು ಕಷ್ಟ. ಸಾಂಪ್ರದಾಯಕ್ಕೆ ಅನುಗುಣವಾಗಿ ನಾವಿಲ್ಲಿ ಸದ್ಯಕ್ಕೆ 'ಬಸವ'ಕೃತವೆಂದು ಎತ್ತಿಕೊಂಡಿದ್ದೇವೆ.

ಕ.ಹ.ವ. ಸೂಚಿಯಲ್ಲಿ(ನಂ ೧೪೯೯) ಇದೇ ಹೆಸರಿನ ವಚನ,ಪದ್ಯ, ಶ್ಲೋಕಗಳಿಂದ ಕೂಡಿದ ಗ್ರಂಥವು '**ಬಾಲಸಂಗಮ**'ನಿಂದ ಬರೆಯಲ್ಪಟ್ಟುದಾಗಿ ವಿವರಿಸಿದೆ. ಅದರ ಆದಿಯಲ್ಲಿ ಬಸವಣ್ಣನವರನ್ನು ವರ್ಣಿಸುವ ಗದ್ಯವಿದೆ.

---

**ಆಕರ :**

೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೪, ನಂ. ೧೬೦೦, ಪು. ೮೮-೮೯

೨. ಕರ್ನಾಟಕ ಕವಿಚರಿತೆ, ಭಾ. ೧, ಪು. ೧೭೬

೨೦೦

## ಗ್ರಂಥ : ವೃಷಭೇಂದ್ರ ಸಾಂಡ್ಯ

**ಸಾರಾಂಶ :** ಶ್ರೀ ಸಿಂದಿಗಿ ಸಿದ್ಧಪ್ಪನವರು ಬಸವಣ್ಣನವರ ಬಗೆಗೆ ಬರೆಯಲ್ಪಟ್ಟ ಗ್ರಂಥಸೂಚಿಯಲ್ಲಿ ಪ್ರಸ್ತುತ ಗ್ರಂಥವನ್ನು ಸೇರಿಸಿರುವರು. ಅನುಪಲಬ್ಧ.

---

ಆಕರ :

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೫

೨೦೧

## ಗ್ರಂಥ : ವೃಷಭೇಂದ್ರ ವಿಜಯ

**ಪ್ರಭೇದ :** ಚಂಪೂ **ಆಶ್ವಾಸ :** ೪೨ **ಪದ್ಯ :** ೪೪೭೨

**ಕರ್ತೃ :** ಷಡಕ್ಷರದೇವ

**ಕಾಲ :** ೧೬೫೫

**ಸಂಪಾದಕ :** ಶ್ರೀಸಿವಾಸಾಚಾರ್ಯ (ಕಂ. ಟಿ.) ಮತ್ತು ವೆಂಕಟ್ರಾವಶಾಸ್ತ್ರಿ

**ಆಕಾರ :** ೨೧×೧೩ ಸೆ. ಮಿ.

**ಪುಟ :** ೪೬೮

**ಸಾಲು :** ೨೭

**ಅಕ್ಷರ :** ೨೭ ತೆಲಗು ಲಿಪಿಯನ್ನು ಹೋಲುತ್ತಿದೆ.

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಕಂ. ಟಿ. ಶ್ರೀಸಿವಾಸಾಚಾರ್ಯ, ಕರ್ಣಾಟಕಾಕ್ಷರ ಮುದ್ರಾಶಾಲೆ

**ಆವೃತ್ತಿ :** ಪ್ರಥಮ

**ಮಿತಿ :** ೧೫-೯-೧೮೭೫

**ಸಾರಾಂಶ :** ಬಸವ ಚರಿತ್ರೆ. 'ಬಸವ ಪುರಾಣ'ದ ಚಂಪೂರೂಪವಿದು.

" ಇದುವರೆಗೆ ಕೇವಲ ಅಪ್ರಚುರವಾಗಿಯಿದ್ದ ವೃಷಭೇಂದ್ರ ವಿಜಯವೆಂಬೀ-ಗ್ರಂಥವನ್ನು ಪರಿಷ್ಕರಿಸಿ ಮುದ್ರಿಸಿ ಪ್ರಕಟಿಸಬೇಕೆಂದು ಕನ್ನಡ ಭಾಷಾಭಿಮಾನಿಗಳಾ-

ಗಿಯೂ, ವೀರಶೈವ ಮತಾವಲಂಬಿಗಳಾಗಿಯೂ ಇರುವವರು ಅನೇಕರು ನನ್ನನ್ನು ಪ್ರೇರೇಪಿಸಿದ್ದರಿಂದ ಈ ಕಾರ್ಯವನ್ನು ನಾನು ವಹಿಸಲಾದೆನು. ಇದರ ಮೂಲ ಪ್ರತಿಗಳನ್ನು ಸಂಪಾದಿಸಲಿಕ್ಕೆ ಯತ್ನಿಸುವಲ್ಲಿ ಅವು ಪ್ರಾಯಶಃ ದುರ್ಲಭಗಳಾಗಿ ಕಾಣಬಂದವು. ಕಥಂಚಿತ್ ಸಂಪಾದಿಸಿದ ಎರಡು ಮೂರು ಪ್ರತಿಗಳೊಳು ಸ್ಖಾಲಿತ್ಯ-ಗಳೂ, ಅಕ್ಷರವ್ಯತ್ಯಾಸಗಳೂ, ತುಂಬಿ ಇದ್ದವು. ಅವುಗಳನ್ನು ಪರಿಷ್ಕರಿಸಲಿಕ್ಕೆ ಪ್ರವೇ-ಶಿಸಿದಾಗ ಆ ಪ್ರತಿಗಳಲ್ಲಿ ಪರಸ್ಪರ ಪಾಠಭೇದಗಳು ಮಿತಿಯಿಲ್ಲದಷ್ಟು ಕಾಣಬಂದವು. ಅಂತು "ನನ್ನ ಪರಿಷ್ಕರಣೋದ್ಯೋಗವು ನವೀನ ಗ್ರಂಥ ರಚನೆಗಿಂತಲೂ ಶ್ರಮಸಾಧ್ಯವಾಗಿತ್ತು."

— ಕಂ. ಟಿ. ಶ್ರೀ. ಅವರ ಪೀಠಿಕೆಯಿಂದ

---

ಆಕರ :

೧. ಪ್ರೊ. ಎಂ. ಎಂ. ಕಲಬುರ್ಗಿ, ಕನ್ನಡ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಅವರ ಸ್ವಂತ ಸಂಗ್ರಹದಲ್ಲಿದೆ.

೨. ಕರ್ನಾಟಕ ಕಾಲೇಜ, ಕೇಂದ್ರ ಗ್ರಂಥ ಭಂಡಾರದಲ್ಲಿದೆ.

## ೨೦೨

**ಗ್ರಂಥ :** ವೃಷಭೇಂದ್ರ ವಿಜಯ

**ಪ್ರಭೇದ :** ಚಂಪೂ **ಆಶ್ವಾಸ :** ೪೨

**ಕರ್ತೃ :** ಷಡಕ್ಷರದೇವ

**ಕಾಲ :** ೧೬೫೫

**ಸಂಪಾದಕ :** ಭಾರತಿ ಸಂಪಂಗಿ ರಾಮಯ್ಯ

**ಆಕಾರ :** ೨೧ × ೧೩ ಸೆ. ಮಿ.

**ಪುಟ :** ೩ + ೫೩೧ = ೫೩೪

**ಸ್ಥಳ :** ಬೆಂಗಳೂರು

**ಪ್ರಕಾಶಕ :** ವಾಜಪೇಯಂ ಗೋವಿಂದಯ್ಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೨೭

**ಬೆಲೆ :** ೩-೦-೦ ರೂ.

**ಸಾರಾಂಶ:** ಬಸವ ಚರಿತ್ರೆ. ಮೇಲೆ ೨೦೧ರಲ್ಲಿ ಹೇಳಿದ ಕಾವ್ಯವೇ ಇದು. ಮುದ್ರಣ ದೃಷ್ಟಿಯಿಂದ ಮಹತ್ವವೆಂದರಿತು ಇಲ್ಲಿ ಎತ್ತಿಕೊಂಡಿರುವೆವು.

---

**ಆಕರ :**

೧. ಕರ್ನಾಟಕ ವಿದ್ಯಾವರ್ಧಕ ಸಂಘ ಗ್ರಂಥಾಲಯದ ಪ್ರತಿ

೨. ಕರ್ಣಾಟಕ ಕವಿಚರಿತೆ, ಭಾ. ೨, ಪು. ೪೪೬

## ೨೦೩

**ಗ್ರಂಥ :** ವೃಷಭೇಂದ್ರ ವಿಜಯದ ಟೀಕು

**ಪ್ರಭೇದ :** ಚಂಪೂ–ಟೀಕೆ

**ಕರ್ತೃ :** ಷಡಕ್ಷರದೇವ

**ಕಾಲ :** ೧೬೫೫

**ಆಕಾರ :** ತಾಳೆಗರಿ. ೨೭ × ೫ ಸೆ. ಮಿ.

**ಪತ್ರ :** ೩೯

**ಸಾಲು :** ೧೦

**ಅಕ್ಷರ :** ೫೫

**ಸಾರಾಂಶ :** ಗ್ರಂಥಕ್ಕೆ ಟೀಕೆ ಬರೆದವನಾರೋ ತಿಳಿಯದು. ಅಸಮಗ್ರ. ಅಪ್ರಕಟಿತ.

**ಆದಿ :** ಶ್ರೀ ಗುರುಭ್ಯೋ ನಮಃ । ಶ್ರೀ ಮದ್ವೃಷಭೇಂದ್ರ ವಿಜಯ ಮಹಾಪುರಾಣದಲ್ಲಿಯ ಷಟ್ಪ ಪದ್ಯಗಳ ನುಡಿಯ ಬರೆವುದಕ್ಕೆ ಶುಭಮಸ್ತು. ಶೋಭನಮಸ್ತು. ಅವಿಘ್ನಮಸ್ತು. ಶ್ರೀ ರಸ್ತು.

ಪ್ರಥಮ ವೃತ್ತಕ್ಕೆರಡರ್ಥಂ : ಮೊದಲು ಪರಶಿವನಿಗೆ : ಶ್ರೀ ಮತ್ಕಲ್ಯಾಣಂ ಭೂಭೃನ್ನುತ ಸುಕರಪದಂ : ಶ್ರೀಮತ್ = ಮಹದೈಶ್ವರ್ಯೋಪಲಕ್ಷಿತವಾದ ; ಕಲ್ಯಾಣ = ಪರಂಜಯ ; ಭೂಭೃತ್ = ಪರ್ವತದಲ್ಲಿ ; ನುತ = ಕೀರ್ತಿಸಲ್ಪಟ್ಟ ; ಸು = ಶೋಭನವನು; ಕರ = ಉಂಟುಮಾಡುತ್ತಿರ್ದ; ಪದಂ = ಸ್ಥಾನವನ್ನುಳ್ಳಂತ.

**ಅಂತ್ಯ :** ಸ್ವಸ್ತಿ. ಪ್ರತಿ ಪಲಿತ = ಮಾರ್ಪೊಳೆವು; ವಿಲುಳಿತ = ನವೆವುದು; ಆಶಯುಂ = ಬುದ್ಧಿಯನು ; ಆಷಾಡಂ = ಮುತ್ತುಕದ ಕಟ್ಟಿಗೆಯು ; ಕೃಷ್ಟ = ಎಳೆಯಲ್ಪಟ್ಟ; ನೃ = ನರ; ತಾರ್ಜ = ಸಿವಿರೂ....

---

**ಆಕರ :**

೧. ಸಮಗ್ರ ವಚನ ವಾಙ್ಮಯ ಪ್ರಕಟನಾಯೋಜನೆಯ ಗ್ರಂಥಭಂಡಾರದ ಹಸ್ತಪ್ರತಿ, ನಂ. ೫೫೧.

೨೦೪

## ಗ್ರಂಥ : ವೃಷಭೇಂದ್ರ ವಿಜಯ ಪುರಾಣ

**ಕರ್ತೃ :** ಇಮ್ಮಡಿ ಶಿವರಾತ್ರೀಶ್ವರ

**ಸಾರಾಂಶ :** 'ಪ್ರಸಾದ' ಗ್ರಂಥದ ಸುತ್ತೂರು ಮಠದ 'ಸದ್ಗುರು ಪರಂಪರೆ' ಎಂಬ ಲೇಖನದಲ್ಲಿ ಸಿ. ಅಂಕಪ್ಪನವರು ಕವಿ, ಕೃತಿಗಳ ಬಗೆಗೆ ಹೀಗೆ ಹೇಳಿದ್ದಾರೆ:

" 'ಪರಮ ಶಿವಾಧಿಕ್ಯ ಶಿಖಾಮಣಿ' ಎಂಬ ಗ್ರಂಥದ ಲೇಖಕರೂ, ಜಂಗಮ ರೂಪಿನಿಂದ ಧರೆಗಿಳಿದು ಬಂದ ಮಹದೇವನಿಗೆ ಕಾಯಕದ ಪಾಠಹೇಳಿಕೊಟ್ಟವರೂ ಆದ ಶ್ರೀ ಸಿದ್ಧನಂಜದೇಶಿಕೇಂದ್ರರೂ, ವಚನಕಾರ ಘನಲಿಂಗ ಚಕ್ರವರ್ತಿಯೂ, **'ವೃಷಭೇಂದ್ರ ವಿಜಯ ಪುರಾಣ'**ದ ಕರ್ತೃ **ಇಮ್ಮಡಿ ಶಿವರಾತ್ರೀಶ್ವರರೂ,** 'ಚೋಳ ರೇಣುಕ ಸಂವಾದ' ಎಂಬ ಗ್ರಂಥಕ್ಕೆ ಟೀಕೆಯನ್ನು ರಚಿಸಿರುವ ಚೆನ್ನಬಸವ ಶಿವಾಚಾರ್ಯರೂ ಈ ಪರಂಪರೆಯಲ್ಲಿ ಕಳಶಪ್ರಾಯರೆನ್ನಬಹುದು."

ಕವಿಚರಿತೆಕಾರರು "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೇ ಇರುವ ಗ್ರಂಥಗಳನ್ನು ನಮಗೆ ತಿಳಿದಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂದು ಹೇಳಿ **'ವೃಷಭೇಂದ್ರ ಪುರಾಣ'** ಗ್ರಂಥದ ಕರ್ತೃ **'ಶಿವರಾತ್ರಿ ಸ್ವಾಮಿ'** ಎಂದು ಬರೆದಿರುವರು. ಈ 'ಶಿವರಾತ್ರಿ ಸ್ವಾಮಿ' ಗಳೇ 'ಇಮ್ಮಡಿ ಶಿವರಾತ್ರೀಶ್ವರ' ರಾಗಿರಬಹುದೆಂದೂ ವೃಷಭೇಂದ್ರ ಪುರಾಣವೇ 'ವೃಷಭೇಂದ್ರ ವಿಜಯ ಪುರಾಣ' ವಾಗಿರಬಹುದೆಂದೂ ನಾವು ಊಹಿಸುತ್ತೇವೆ.

---

ಆಕರ :

೧. ತಿಪ್ಪೇರುದ್ರಸ್ವಾಮಿ (ಹೆಚ್), ಸಂ : ಪ್ರಸಾದ, ಪು. viii
೨. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೩೦

೨೦೫

## ಗ್ರಂಥ : ವೃಷಭೇಂದ್ರ ವಿಜಯ ಪುರಾಣದ ಲಲಿತಪದವೃತ್ತನಾಂದ್ಯ

**ಪ್ರಭೇದ :** ವಿಧವಿಧ ವೃತ್ತಗಳು **ಪದ್ಯ :** ೫೭

**ಕರ್ತೃ :** ಷಡಕ್ಷರ ದೇವ

**ಕಾಲ :** ೧೬೫೫

**ಆಕಾರ :** ತಾಡವೋಲೆ. ೯×೨ ಇಂಚು

**ಪತ್ರ :** ೭ (೩೯ರಿಂದ೪೫)

**ಸಾಲು :** ೧೧

**ಅಕ್ಷರ :** ೫೦

**ಸಾರಾಂಶ :** 'ವೃಷಭೇಂದ್ರ ವಿಜಯ' ಕಾವ್ಯದಲ್ಲಿ ಬಸವಣ್ಣನವರನ್ನು ನೇರವಾಗಿ ವರ್ಣಿಸುವ ಪದ್ಯಗಳನ್ನಿದರಲ್ಲಿ ಸಂಗ್ರಹಿಸಿದೆ. ಸಂಗ್ರಹಕಾರನಾರೋ ತಿಳಿಯದು. ಈ ಕಟ್ಟಿನಲ್ಲಿ ೩೪ ಗ್ರಂಥಗಳಿದ್ದು ಎಲ್ಲವೂ ಬೇರೆ ಬೇರೆ ಮೂಲಗ್ರಂಥಗಳಿಂದ ಸಂಗ್ರಹಿಸಿದ ನಾಂದ್ಯದ ಪದಗಳಾಗಿವೆ.

**ನೋಡು :** ವೃಷಭೇಂದ್ರ ವಿಜಯ

---

ಆಕರ :

೧. Descriptive Catalogue of Manuscripts in the K. R. I- Dharwar, vol. IV, MS. No. 1103 (xiii), p. 24-26

೨೦೩

**ಗ್ರಂಥ :** ವೃಷಭೇಂದ್ರ ವಿಜಯ ಶಬರ ಶಂಕರ ವಿಲಾಸಗಳ ಘಟ್ಟಿ ಪದ್ಯಗಳಿಗೆ ಟೀಕೆ

**ಪ್ರಭೇದ :** ಚಂಪೂ-ಟೀಕೆ

**ಕರ್ತೃ :** ಷಡಕ್ಷರ ದೇವ

**ಸಾರಾಂಶ :** ಕವಿಚರಿತೆಕಾರರು "ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆ ಇರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂದು ಹೇಳಿರುವರು. ಇದರಲ್ಲಿ ಕಠಿಣ ಪದ್ಯಗಳಿಗೆ ಅರ್ಥವಿವರಣೆ ಇರಲಿಕ್ಕೆ ಸಾಕು.

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೩೦

## ೨೦೭

**ಗ್ರಂಥ :** ವೃಷಭೇಂದ್ರ ವಿಲಾಸ

**ಪ್ರಭೇದ :** ಯಕ್ಷಗಾನ

**ಕರ್ತೃ :** ನಂಜುಂಡ ಭಾಗವತ

**ಕಾಲ :** ಸು. ೧೮೬೦

**ಸಾರಾಂಶ :** ಕವಿಚರಿತೆಕಾರರು ಇವನಿಗೆ ನಂಜಯ್ಯನೆಂದು ಕರೆದಿರುವರು. ನಂಜಯ್ಯನ ಮಗನಾದ ಎನ್. ಸುಬ್ಬಯ್ಯ ಭಾಗವತನು ತಂದೆ ಬರೆದ ಹರಿಶ್ಚಂದ್ರ ಕಥೆಯೆಂಬ ಯಕ್ಷಗಾನವನ್ನು ೧೯೧೩ರಲ್ಲಿ ಪರಿಷ್ಕರಿಸಿ ಪ್ರಕಟಿಸಿರುವನು. ಅದರ ಮುನ್ನುಡಿಯಲ್ಲಿ ಪ್ರಸ್ತುತ ಗ್ರಂಥವಾದ 'ವೃಷಭೇಂದ್ರ ವಿಲಾಸ'ವೆಂಬ ಯಕ್ಷಗಾನ-ವನ್ನು ಬರೆದಿರುವದಾಗಿ ತಿಳಿಸಿರುವನೆಂದು ಶ್ರೀ ಎಸ್. ಶಿವಣ್ಣ (ಮೈಸೂರು ವಿಶ್ವ-ವಿದ್ಯಾನಿಲಯದ ಸಂಶೋಧನ ವಿದ್ಯಾರ್ಥಿ) ನನಗೆ ಬರೆದಿರುವರು. ಅಪ್ರಕಟಿತ.

---

ಆಕರ :

೧. 'ಹರಿಶ್ಚಂದ್ರನ ಕಥೆ' (೧೯೧೩) ಗ್ರಂಥದ ಪೀಠಿಕೆ : ಎನ್. ಸುಬ್ಬಯ್ಯ ಭಾಗವತನು ಪರಿಷ್ಕರಿಸಿ ಪ್ರಕಟಿಸಿದುದು.

೧. ಕರ್ನಾಟಕ ಕವಿಚರಿತೆ, ಭಾ. ೩, ಪು. ೨೦೬ ಮತ್ತು ೩೩೧

## ೨೦೮

**ಗ್ರಂಥ :** ಶರಣ ಲೀಲಾಮೃತ

**ಪ್ರಭೇದ :** ಯಕ್ಷಗಾನ **ಸಂಧಿ :** ೨೫ **ಪದ್ಯ :** ೬೬೬೭

**ಕರ್ತೃ :** ಚೆನ್ನಪ್ಪ ಕವಿ

**ಕಾಲ :** ೧೭೫೦

**ಸಂಪಾದಕ :** ಶಿವಬಸವ ಸ್ವಾಮಿಗಳು

**ಆಕಾರ :** ೨೧×೧೩ ಸೆ. ಮಿ.

**ಪುಟ :** ೧೯ + ೬೨೪ = ೬೪೩

**ಸಾಲು :** ೨೬

**ಅಕ್ಷರ :** ೧೩–೨೫

**ಸ್ಥಳ :** ಮೈಸೂರು

**ಪ್ರಕಾಶಕ :** ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೪೫

**ಮಾಲೆ :** ಶ್ರೀ ಗುರುಮಲ್ಲೇಶ್ವರ ಗ್ರಂಥರತ್ನಮಾಲಾ, ೧

**ಸಾರಾಂಶ :** "ಶರಣ ಲೀಲಾಮೃತದಲ್ಲಿ ಹಲವು ಶಿವಶರಣರ ಕಥೆಗಳು ಬರುವದಾದರೂ ಅದು ಮುಖ್ಯವಾಗಿ ಬಸವಣ್ಣನವರ ಜೀವನ ಚರಿತ್ರೆಯಾಗಿದೆ...." ಇದು "ತ್ರಿವುಡೆ, ದ್ವಿಪದಿ, ಏಕತಾಳ, ಅಟತಾಳ, ಜಂಪೆ, ಕೊಂಚ ಜಂಪೆ, ಸಾಂಗತ್ಯ, ರಗಳೆ, ಷಟ್ಪದಿ, ಕಂದ ಮುಂತಾದ ವಿವಿಧ ದೇಸೀಯ ಛಂಧಸ್ಸಿನಲ್ಲಿ ರಚಿತವಾಗಿದೆ. ಅಲ್ಲಲ್ಲಿ ಸಂಸ್ಕೃತ ವೃತ್ತಗಳಿದ್ದರೂ ಅವುಗಳಲ್ಲಿ ಬಳಸಿರುವ ಶೈಲಿ ಬಹಳ ಸರಳವಾಗಿದೆ. ಹೀಗೆ ಎಲ್ಲರಿಗೂ ಸುಲಭಸಾಧ್ಯವಾದ ರೀತಿಯಲ್ಲಿ ರಚಿತವಾದುದರಿಂದಲೇ ಈ ಗ್ರಂಥವು ಕನ್ನಡ ನಾಡಿನಲ್ಲೆಲ್ಲಾ ಜನಪ್ರಿಯವಾಗಿತ್ತೆಂದು ತೋರುತ್ತದೆ. ಇದು ಹನ್ನೊಂದು ಸಂಧಿಗಳಲ್ಲಿರುವುದೆಂದು ಪ್ರತೀತಿಯಿದ್ದರೂ ೨೩-೨೫ ಸಂಧಿಗಳ ಹಸ್ತಪ್ರತಿಗಳು ಸಿಕ್ಕು-ವುದಕ್ಕೂ, ಒಂದೊಂದು ಸಂಧಿಯಲ್ಲಿ ಅದೇ ಅರ್ಥದ ಬೇರೆ ಬೇರೆ ಪದ್ಯಗಳು ಬೇರೆ ಬೇರೆ ಹಸ್ತಪ್ರತಿಗಳಲ್ಲಿ ದೊರೆಯುವುದಕ್ಕೂ ಈ ಲೋಕಪ್ರಿಯತೆಯೆ ಕಾರಣವಾಗಿರ-ಬೇಕು.

"ಶ್ರೀ ಶಿವಬಸವಸ್ವಾಮಿಗಳವರು ಈ ಗ್ರಂಥವನ್ನು ಸಂಪೂರ್ಣವಾಗಿ ೨೫ ಸಂಧಿಗಳಲ್ಲಿ ಪ್ರಕಟಿಸಿರುವರಲ್ಲದೆ, ಪಾಠಾಂತರಗಳನ್ನೂ ಹಸ್ತಪ್ರತಿಗಳಲ್ಲಿಯ ವ್ಯತ್ಯಾಸ-ವನ್ನೂ ಅಡಿ ಟಿಪ್ಪಣೆಗಳಲ್ಲಿ ಕಾಣಿಸಿರುವರು. ವಿಮರ್ಶಕ ದೃಷ್ಟಿಯಿಂದ ಓದುವವ-ರಿಗೆ ಇದು ಬಹಳ ಅನುಕೂಲವಾಗಿದೆ."

—ಪ್ರೊ. ಶಿ. ಶಿ. ಬಸವನಾಳರ 'ಮುನ್ನುಡಿ'ಯಿಂದ

ಅಲ್ಲಲ್ಲಿ ವರ್ಣಚಿತ್ರಗಳಿವೆ.

೨೦೯

**ಗ್ರಂಥ : ಶರಣ ಲೀಲಾಮೃತ**

**ಪ್ರಭೇದ :** ಯಕ್ಷಗಾನ

**ಕರ್ತೃ :** ಚೆನ್ನಪ್ಪ ಕವಿ

**ಕಾಲ :** ೧೭೫೦

**ಸಂಪಾದಕ :** ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿ

**ಸ್ಥಳ :** ಬೆಂಗಳೂರು

**ಆವೃತ್ತಿ :** ಪ್ರಥಮ ತೃತೀಯ

**ಮಿತಿ :** ೧೮೭೧ ೧೮೯೨

**ಸಾರಾಂಶ :** ಇದು ಮೇಲೆ ನಂ. ೨೦೮ರಲ್ಲಿ ವಿವರಿಸಿದ ಕೃತಿಯಾಗಿದೆ. ಈ ಗ್ರಂಥವು ಪ್ರಕಟವಾದ ವಿಷಯವನ್ನು DCKM ದ ಸಂಪುಟ VI, ಪುಟ ೧೫೫೩ ರಲ್ಲಿ ಹೇಳಿದೆ. ನಮಗೆ ನೋಡಲು ಸಿಕ್ಕಿಲ್ಲ. ಕವಿ, ಕೃತಿ, ಕಾಲ ಇತ್ಯಾದಿಗಳ ಬಗೆಗೆ ಹೆಚ್ಚಿನ ವಿಷಯ ತಿಳಿಯ ಬೇಕೆನ್ನುವರು ಆಕರಗಳಲ್ಲಿ ಕೊಟ್ಟ ಗ್ರಂಥಗಳನ್ನು ಅವಲೋಕಿಸಬಹುದು.

DCKM ದಲ್ಲಿ ಹೀಗೆ ಹೇಳಿದೆ:

> "The work has been edited by Shiddhanti Subrahmany Sastri and published in 1871 at Bangalore. The third edition of the same came out in the year 1892."

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೮೫

೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೪, ಪು. ೧೯೦-೧೯೨

೩. Descriptive Catalogue of Manuscripts in the K.R.I-Dharwar, vol. I, No. 42, p. 1o2-106;
vol. III, No. 28, p. 67-69

೪. Descriptive Catalogue of Kannada Manuscripts–Madras. vol. VI, No. 1204-1209, p. 1552-1959

## ೨೧೧

**ಗ್ರಂಥ : ಶರಣು ಬಸವ ರಗಳೆ**

**ಪ್ರಭೇದ :** ರಗಳೆ

**ಕರ್ತೃ :** ಪಾಲಕುರಿಕಿ ಸೋಮನಾಥ

**ಕಾಲ :** ಸು. ೧೧೯೫

**ಸಂಪಾದಕ :** ಬಂಡಾರು ತಮ್ಮಯ್ಯ

**ಆಕಾರ:** ೨೧×೧೩ ಸೆ. ಮಿ.

**ಪುಟ:** ೪೨ ರಿಂದ ೪೬

**ಸಾಲು:** ೨೨

**ಅಕ್ಷರ:** ೧೨-೧೬

**ಸ್ಥಳ:** ದೇವರಪಲ್ಲಿ (ಕೃಷ್ಣಾ ಜಿಲ್ಹಾ, ಆಂಧ್ರ ಪ್ರದೇಶ)

**ಪ್ರಕಾಶಕ:** ಶಿವಶ್ರೀ ಚಿಮಿರಾಲ ಚಂದ್ರಶೇಖರಯ್ಯ

**ಆವೃತ್ತಿ:** ಪ್ರಥಮ

**ಮಿತಿ:** ೧೯೬೨

**ಸಾರಾಂಶ:** ಬಸವಣ್ಣನವರ ಘನತೆಯನ್ನು ಪ್ರಕಟಪಡಿಸುವ ಗ್ರಂಥವಿದು. ಗ್ರಂಥಾದಿಯಲ್ಲಿ ಒಂದು ವೃತ್ತವಿದೆ. ಮಧ್ಯದಲ್ಲಿ ರಗಳೆ ಕೊನೆಯಲ್ಲಿ ೧೪ ಕಂದ ಪದ್ಯಗಳಿವೆ. ರಗಳೆಯ ಪ್ರತಿಯೊಂದು ಸಾಲು 'ಶರಣು ಬಸವ' ಎಂದು ಮುಗಿಯುತ್ತದೆ.

**ಆದಿ:** ಶ್ರೀ ವರಾಜ ದೇವರಾಜ ಸಿದ್ಧ ಸಾಧ್ಯ ಯಕ್ಷರ
ಕ್ಷೋವಿಹಂಗ ರಾಟ್ಪತಂಗ ಸೋಮ, ಧೂಮ ಕರಮರು
ಜ್ಜೀವಿತೇಶ ವಿಧೃತಪಾಶ ಸೇವಿತೋದ್ಯದಂಘ್ರಿರಾ
ಜೀವ ನಿಮ್ಮನಾಂ ಪೊಗಳ್ವೆ ಶ್ರೀವೃಷಾಧಿನಾಯಕಾ ॥

ಶ್ರೀ ವೃಷಾಧಿನಾಯಕ ಪ್ರಸಿದ್ಧ ಭಾವ ಶರಣು ಬಸವ ।
ತಾವಕಾಂಘ್ರಿ ಸೇವಕಾಘ ದಾವದಾವ ಶರಣು ಬಸವ ॥
ನಂದಿ ತದ್ವಿತೀಯ ಶಂಭುನಾಮಧೇಯ ಶರಣು ಬಸವ ।
ವಂದಿತ ತ್ರಿಲೋಕ ವಿಬುಧ ವರನಿಕಾಯ ಶರಣು ಬಸವ ॥
ಆಚಲ ಶೈವಧರ್ಮ ನಿರ್ಣಯಾವತಾರ ಶರಣು ಬಸವ ।
ಪ್ರಚುರಯುಗಮಿತಾಂಘ್ರಿ ಧರ್ಮಪಥ ವಿಹಾರ ಶರಣು ಬಸವ ॥

**ಅಂತ್ಯ:** ಪ್ರಣವದ ಬಳ್ಳಿ ಬಕಾರಂ ।
ಪ್ರಣವದ ನಾದಾನುಸಾರ ಸಕಾರಂ ॥
ಪ್ರಣವದ ಬಿಂದು ವಕಾರಂ ।
ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ॥

ಶರಣಸ್ತವ ಕಲ್ಪಕುಜಾಂ ।
ಕುರುಪದಶಾಖಾಭಿಜಾತ ನವಕುಸುಮಾಷ್ಟೋ ।
ತ್ತರ ಶತನಾಮಂಗಳ ಬಸ ।
ವರಸಂಗರ್ಪಿಸಿದೆ ಪಾಲ್ಕುರಿಕಿ ಸೋಮಾಂಕಂ ॥

ಕ.ಹ.ವ. ಸೂಚಿಯಲ್ಲಿ ಕವಿ ಮತ್ತು ಕಾಲಗಳನ್ನು ಕೊಟ್ಟಿಲ್ಲ. ಕೊನೆಯ ಕಂದ ಪದ್ಯಗಳು ಬೇರೆ ಬೇರೆ ಪ್ರತಿಗಳಲ್ಲಿ ಹೆಚ್ಚುಕಡಿಮೆಯಿದ್ದಂತೆ ತೋರುತ್ತದೆ. '**ಬಸವ ರಗಳೆ**' ಎಂದು ಕ.ಹ.ವ. ಸೂಚಿ ಮತ್ತು DCKMಗಳಲ್ಲಿ ಹೇಳಿದೆ. ಇದನು ಶ್ರೀ ಬಂಡಾರು ತಮ್ಮಯ್ಯನವರು ತೆಲುಗು ಲಿಪಿಯಲ್ಲಿ ಪ್ರಕಟಿಸಿರುವರು. ಇದಕ್ಕೆ 'ಬಸವಾಷ್ಟೋತ್ತರ ಶತನಾಮು'ವೆಂಬ ಮತ್ತೊಂದು ಹೆಸರಿರುವಂತೆ ತೋರುತ್ತದೆ.

---

ಆಕರ :

೧. Descriptive Catalogue of the Kannada Manuscripts—Madras, vol. IV, No. 501, p. 817–820
೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಭಾ. ೩, ಪು. ೨೬
೩. ಕರ್ಣಾಟಕ ಕವಿಚರಿತೆ, ಭಾ. ೧, ಪು. ೨೯೬
೪. ಬಸವತತ್ವರತ್ನಾಕರ, ಪು. ೫೫೬
೫. ಬಂಡಾರು ತಮ್ಮಯ್ಯ: ಪಾಲಕುರಿಕಿ ಸೋಮನಾಥಕವಿ ಲಘುಕೃತುಲು(ತೆಲುಗು) ಪು. ೪೨–೪೬

## ೨೧೧

**ಗ್ರಂಥ : ಶರಣು ಬಸವ ರಗಳೆ**

**ಪ್ರಭೇದ :** ರಗಳೆ-ಟೀಕೆ

**ಕರ್ತೃ :** ಪಾಲ್ಕುರಿಕಿ ಸೋಮನಾಥ

**ಕಾಲ :** ಸು. ೧೧೯೫

**ಆಕಾರ :** ತಾಳವೋಲೆ. ೪೬×೫·೪ ಸೆ. ಮಿ

**ಪತ್ರ :** ೯ರಿಂದ ೧೨

**ಸಾಲು :** ೧೦

**ಅಕ್ಷರ :** ೯೪

**ಸಾರಾಂಶ :** ಮೇಲೆ ನಂ. ೨೧೦ ರಲ್ಲಿ ವರ್ಣಿಸಿದ ಗ್ರಂಥಕ್ಕೆ ಟೀಕೆಯನ್ನು ಬರೆಯಲಾಗಿದೆ.

ಕವಿಚರಿತೆಕಾರರು "ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿಯೂ ಉಕ್ತವಾಗದೆ ಇರುವ ಗ್ರಂಥಗಳನ್ನು ನಮಗೆ ತಿಳಿದ ಮಟ್ಟಿಗೆ ಈ ಅನುಬಂಧದಲ್ಲಿ ಕೊಟ್ಟಿದ್ದೇವೆ" ಎಂದು ಹೇಳಿದ ಈ ಗ್ರಂಥದ ಹೆಸರನ್ನು ಹಿಡಿದು ಹುಡುಕುತ್ತಿರುವಾಗ ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಹಸ್ತಪ್ರತಿಯು ದೊರಕಿತು. ಟೀಕಾಕಾರನ ಹೆಸರು ಇದರಿಂದ ಗೊತ್ತಾಗುವದಿಲ್ಲ. ಇದರ ಆದ್ಯಂತ್ಯಗಳ ಅಲ್ಪಭಾಗವನ್ನಿಲ್ಲಿ ಉದ್ಧರಿಸುತ್ತೇವೆ:

**ಆದಿ :** ಶ್ರೀ ಗುರುಬಸವಲಿಂಗಾಯನಮಃ ।

ಪಾಲ್ಕುರಿಕಿಯ ಸೋಮೇಶ್ವರನು ನಿರೂಪಿಸಿದ ಶರಣು ಬಸವ ಶಗಳೆ॥

ವೃತ್ತ ॥ ಟೀಕು ॥ ಶರಣ=ಚಿತ್‌ಸ್ವರೂಪನಾದಂಥ; ಬಸವ = ಜಗದಾರಾಧ್ಯರಾದ ಸಂಗನಬಸವೇಶ್ವರ ಸ್ವಾಮಿಗಳ ಮಹಿಮಾಪದವನು ನೂರೆಂಟು ಪದಗಳಿಂದ ಜಯಕೀರ್ತನಂಗೈದ; ಗಗಳೆ=ಸ್ತೋತ್ರವು; ವೃತ್ತ=ಆರಡಿವೃತ್ತಗಳ ನಿರೂಪವನಾರು; ಶ್ರೀವರಾಜ=ಲಕ್ಷ್ಮೀವಲ್ಲಭನಾದ ನಾರಾಯಣನು; ದೇವರಾಜ = ಸುರಪತಿಯಾದ ದೇವೇಂದ್ರನು; ಸಿದ್ಧ = ಅಣುಮಾದಿ ಋಷಿಗಳು; ಸಾಧ್ಯ = ಸಾಧಕ ದೇವತೆಗಳು; ಯಕ್ಷರು = ಯಕ್ಷರ ದೇವತೆಗಳು; ರಕ್ಷಾ = ರಾಕ್ಷಸರು; ವಿಹಂಗರಾಪ = ಗರುಡರು; ಪತಂಗ = ಸೂರ್ಯ; ಸೋಮ = ಚಂದ್ರ; ದೂವಕರ = ಅಗ್ನಿ, ಮರುತ, ವಾಯು; ಜೀವಿತೇಶ=ಯಮನು; ವಿದ್ರುತಪಾಶ=ವರುಣಗಳಿಂದ; ಸೇವಿತ = ನತ್ರಿಸಿಕೊಳಲು ಪಟ್ಟ; ಉದ್ಯ=ಉನ್ನತವಾದ ಅಂಘ್ರಿರಾಜೀವ = ಪಾದಕಮಲವನುಳ್ಳ; ಶ್ರೀವೃಷಾಧಿನಾಯಕ=ಎಲೆ ಶ್ರೀ ವೃಷಭೇಶ್ವರನೇ; ನಿಮ್ಮ ನಾಮಂ ಪೊಗಳ್ವೆ.

ಶ್ರೀ ವೃಷಾಧಿನಾಯಕಃ = ಶ್ರೀ ವೃಷಭೇಶ್ವರನೆಂಬ; ಪ್ರಸಿದ್ಧಭಾವ = ಪ್ರಸಿದ್ಧ ಭಾವವನುಳ್ಳ; ಬಸವ=ಬಸವೇಶ್ವರನೆ; ಸರಣು=ಶರಣಾರ್ಥಿ ॥೧॥

**ಅಂತ್ಯ :** ॥ಕಂದ॥ಟೀಕು॥ ಶರಣುಸ್ಥವ=ಶರಣುಸ್ತೋತ್ರವೆಂಬ; ಕಲ್ಪಕುಜಾಂಕುರ=ಕಲ್ಪವೃಕ್ಷದ; ಅಂಕುರ=ಮೊಳಕೆಗಳೋಪಾದಿಯು; ಪದಸಾಖ್ಯ=ಪದಂಗಳೆಂಬ ಕೊಂಬಿಗಳಲ್ಲಿ; ಜಾತ=ಹುಟ್ಟಿದ; ನವ=ಹೊಸ; ಕುಸುಮಂ=ಪುಷ್ಪಂಗಳ ಸಮಾನವಾದ; ಅಷ್ಟೋತ್ತರ ಶತ=ನೂರೆಂಟಾದ; ನಾಮಂಗಳ=ಪೆಸರನುಳ್ಳ; ಪಾಲ್ಕುರಿಕೆಯ ಸೋಮಾಂಕಂ=ಪಾಲ್ಕುರಿಕೆಯ ಸೋಮೇಶ್ವರನು; ಬಸವರಸಂಗರ್ಪಿಸಿದ=ಬಸವರಾಜ ದೇವರಿಗೆ ಸಮರ್ಪಣೆ ಮಾಡಿದನು ॥೧॥ ಶರಣು ಬಸವ ರಗಳೆಯ ಟೀಕು ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ ॥

---

**ಆಕರ :**

೧. ಕನ್ನಡ ಸಂಶೋಧನ ಸಂಸ್ಥೆ ಧಾರವಾಡ, ಹಸ್ತಪ್ರತಿ ನಂ. ೭೩೪, ಪತ್ರ ೯ರಿಂದ ೧೨

೨. ಕರ್ನಾಟಕ ಕವಿಚರಿತೆ, ಭಾ. ೩, ಪು. ೪೧೮ ಮತ್ತು ೪೩೦

೨೧೨

**ಗ್ರಂಥ : ಶರಣು ಬಸವ ರಗಳೆ**

**ಪ್ರಭೇದ :** ರಗಳೆ ? **ಪದ್ಯ :** ೧೦೦

**ಕರ್ತೃ :** ಬಸವಲಿಂಗ

**ಕಾಲ :** ೧೮೩೦

**ಸಾರಾಂಶ :** ಕವಿಚರಿತೆಕಾರರು "ಇವನು **ಶರಣು ಬಸವರಗಳೆ,** ಶರಣು ಬಸವರಗಳೆ ಕಂದ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಈತನು ವೀರಶೈವ ಕವಿ. ಇವನ ಕಾಲವು ೧೮೩೦ ಆಗಿರಬಹುದೆಂದು ತೋರುತ್ತದೆ. ಮೊದಲನೆಯ ಗ್ರಂಥದಲ್ಲಿ ೧೦೦ ಪದ್ಯಗಳಿವೆ. ಒಂದೊಂದೂ 'ಶರಣು ಬಸವ' ಎಂದು ಮುಗಿಯುತ್ತದೆ" ಎಂದಿದ್ದಾರೆ. ಇದು ಪಾಲ್ಕುರಿಕೆ ಸೋಮಾರಾಧ್ಯನ ಕೃತಿಯಿಂದ ಭಿನ್ನವಾದುದಾಗಿದೆ. ಅಪ್ರಕಟಿತ.

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೨೫೯-೨೬೦

೨೧೩

**ಗ್ರಂಥ : ಶರಣು ಬಸವ ರಗಳೆ ಕಂದ**

**ಪ್ರಭೇದ :** ಕಂದ ?

**ಕರ್ತೃ :** ಬಸವಲಿಂಗ

**ಕಾಲ :** ೧೮೩೦

**ಸಾರಾಂಶ :** "ಇವನು ಶರಣು ಬಸವ ರಗಳೆ, **ಶರಣು ಬಸವ ರಗಳೆ ಕಂದ** ಎಂಬ ಗ್ರಂಥಗಳನ್ನು ಬರೆದಿದ್ದಾನೆ........ಎರಡನೆಯದನ್ನು ಯತಿಪುರದ ಸಿದ್ಧೇಶನ ಅನುಗ್ರಹದಿಂದ ಬರೆದಂತೆ ಹೇಳುತ್ತಾನೆ. ಈ ಗ್ರಂಥದಲ್ಲಿ **ಬಸವ ಚರಿತ್ರವು ಹೇಳಿದೆ.** ಇದರ ವಿಷಯವಾಗಿ ಕವಿ 'ಪೂರ್ವದಲ್ಲಿ ಪಾಲ್ಕುರಿಕೆ ಸೋಮನಾಥನು ಬಸವಪುರಾಣವನ್ನು ತೆಲುಗಿನಲ್ಲಿ ಬರೆದನು; ಅದನ್ನು ಭೀಮಕವಿ ಕನ್ನಡ ಷಟ್ಪದಿಯಲ್ಲಿ ಶಚಿಸಿದನು; ಶಂಕರಾರಾಧ್ಯನು ಸಂಸ್ಕೃತದಲ್ಲಿ ಬರೆದನು; ಬಾಲಚಂದ್ರ ನಗರದ

ಶಿವಕವಿ ವಸ್ತುಕರೂಪವಾಗಿ ರಚಿಸಿದನು; ಅದನ್ನೇ ನಾನು ಸುಲಲಿತವಾಗಿ ಬರೆಯುತ್ತೇನೆ' ಎನ್ನುತ್ತಾನೆ" ಎಂದು ಕವಿಚರಿತೆಕಾರರು ಹೇಳಿರುವರು. ಅಪ್ರಕಟಿತ.

**ನೋಡು :** ಬಸವೇಶ್ವರ ರಗಳೆ

---

**ಆಕರ :**

೧. ಕರ್ಣಾಟಕ ಕವಿಚರಿತೆ, ಭಾ. ೩, ಪು. ೨೫೯-೨೬೦

## ೨೧೪

**ಗ್ರಂಥ :** ಶರಣು ಶರಣಾರ್ಥಿ

**ಪ್ರಭೇದ :** ಚೌಪದಿ (ಸಾಂಗತ್ಯ) **ಸಂಧಿ:** ೫ **ಪದ್ಯ ಸಂಖ್ಯೆ :** ೫೩೯

**ಕರ್ತೃ :** ಸೇಪುರದ ಓದಿಸುವ ರುದ್ರದೇವರ ಸುಪುತ್ರ ಚೆನ್ನವೀರದೇವರು

**ಕಾಲ :** ಸು. ೧೨೦೦

**ಆಕಾರ :** ತಾಡವೋಲೆ

**ಸಾರಾಂಶ :** ಈ ಗ್ರಂಥದ ಬಗೆಗೆ ಶ್ರೀ ರಾಯನಗೌಡಾ ಪಾಟೀಲ, ತಲ್ಲೂರ ಅವರು ಕೆಳಗಿನಂತೆ ಬರೆದು ತಿಳಿಸಿರುವರು:

"ಬಸವಣ್ಣನವರ ಸಮಕಾಲೀನ ದಿನಚರಿಯಂತಹ ಐತಿಹಾಸಿಕ ವಿವರಣೆಗಳು ಇರುವವು. ಕಡಕೋಳದಲ್ಲಿ ಶಿವಶರಣರು ತಮ್ಮ ಸಾಹಿತ್ಯ ಸಂಗ್ರಹವನ್ನು ಬಿಟ್ಟು ಹೋದರೆಂದು ಪ್ರತೀತಿ. ಇದು ಅಲ್ಲಿ ದೊರಕಿದೆ. ಇದು ಅತಿ ಹೊಸ ವಿಷಯಗಳನ್ನೊಳಗೊಂಡಿದೆ"

---

**ಆಕರ :**

೧. ಶ್ರೀ ರಾಯನಗೌಡಾ ಪಾಟೀಲ, ತಲ್ಲೂರ, ಇವರ ಗ್ರಂಥಸಂಗ್ರಹಪಟ್ಟಿ

೨೧೫

**ಗ್ರಂಥ :** ಶಿವನು ಪಾರ್ವತಿಗೆ ನಿರೂಪಿಸಿದ ಬಸವಗಣಚಾರಿತ್ರ

**ಆಕಾರ :** ತಾಡವೋಲೆ

**ಸಾರಾಂಶ :** ಇದು ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳಲ್ಲಿರುವ ಹಸ್ತಪ್ರತಿ. ಅವಲೋಕನಕ್ಕೆ ಸಿಕ್ಕಿಲ್ಲ. ಬಸವಚಾರಿತ್ರವಾಗಿರಬಹುದು.

---

ಆಕರ :

೧. ಶರಣ ಸಾಹಿತ್ಯ, ಸಂಪುಟ ೨೧; ಸಂಚಿಕೆ ೫; ಪು. ೧೮೯. ಆಗಸ್ಟ ೧೯೫೮

೨೧೬

**ಗ್ರಂಥ :** ಶಿವನು ವೀರಶೈವ ಮತದ ಮೊದಲನೇ ಸ್ಥಾಪಕನು
ಬಸವೇಶನು ವೀರಶೈವ ಮತದ ಎರಡನೇ ಸ್ಥಾಪಕನು

**ಪ್ರಭೇದ :** ವಿಮರ್ಶೆ ಚರಿತ್ರೆ

**ಕರ್ತೃ :** ಜೀರಗೆ (ಬಸವಲಿಂಗಪ್ಪ)

**ಕಾಲ :** ಸು. ೧೯೦೦

**ಆಕಾರ :** ೧೮×೧೨ ಸೆ.ಮಿ.

**ಪುಟ :** ೨೬

**ಸಾಲು :** ೨೪

**ಅಕ್ಷರ :** ೨೪

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಲೇಖಕ

**ಆವೃತ್ತಿ :** ಪ್ರಥಮ

**ಮಿತಿ :** ೧೯೩೧

**ಬೆಲೆ :** ೦–೪–೦ ಆಣೆ

**ಸಾರಾಂಶ :** ಇದರಲ್ಲಿ ಬಸವಣ್ಣನವರು ವೀರಶೈವ ಧರ್ಮ ಸಂಸ್ಥಾಪಕರೆಂದು ಅನೇಕ ಆಧಾರಗಳನ್ನು ಕೊಟ್ಟು ಸಿದ್ಧಮಾಡಲೆತ್ನಿಸಿದೆ. ಲೇಖಕರು ಕೊನೆಯಲ್ಲಿ ಹೀಗೆ ಹೇಳಿರುವರು:

"ವೀರಶೈವ ಮತವು...ಮೊದಲು ಮೊಳಕೆಯಾಗಿದ್ದದ್ದು ಬಸವೇಶನಿಂದ ವೃಕ್ಷ-ವಾಯಿತು...ಮೊದಲು ಗುಡ್ಡವಾಗಿದ್ದದ್ದು ಬಸವೇಶನಿಂದ ಪರ್ವತವಾಯಿತು.. ಬಸವೇಶ್ವರನು ವೀರಶೈವ ಮತಸ್ಥಾಪಕನು. ವೀರಶೈವ ಮತೋದ್ಧಾರಕನು."

— ಪು. ೨೬

೨೧೭

**ಗ್ರಂಥ:** ಶಿವಶರಣ ಸಾಮ್ರಾಟ್ ಬಸವಣ್ಣ

**ಪ್ರಭೇದ:** ಚರಿತ್ರೆ

**ಕರ್ತೃ:** ಮಂಗಾಪುರಮಠ (ಚಂದ್ರಶೇಖರಶಾಸ್ತ್ರಿ)

**ಕಾಲ:** ಸು. ೧೯೨೫

**ಆಕಾರ:** ೭×೫ ಇಂಚು.

**ಪುಟ:** ೫೪

**ಸಾಲು:** ೨೮

**ಅಕ್ಷರ:** ೨೫

**ಸ್ಥಳ:** ರಾಯಚೂರು

**ಪ್ರಕಾಶಕ:** ಶ್ರೀ ಸಿ. ಎಚ್. ಅನ್ನದಾನೀಶ್ವರ ಹಿರೇಮಠ, ಸೊರದಗಡ್ಡೆಮಠ

**ಆವೃತ್ತಿ:** ಪ್ರಥಮ

**ಮಿತಿ:** ೨೫-೪-೧೯೫೯

**ಸಾರಾಂಶ:** ಬಸವಣ್ಣನವರ ಜೀವನ ಚರಿತ್ರೆಯನ್ನು ಅರುಹುತ್ತದೆ. 'ಬಸವಣ್ಣನವರ ಜನನ' 'ಪವಾಡ ಪುರುಷ ಬಸವಣ್ಣ' 'ಸಮರ್ಥ ರಾಜಕಾರಣಿ ಬಸವಣ್ಣ' 'ತತ್ವಜ್ಞಾನಿ ಬಸವಣ್ಣ' 'ವಚನಕಾರ ಬಸವಣ್ಣ'—ಇತ್ಯಾದಿ ಅಧ್ಯಾಯ-ಗಳಲ್ಲಿ ಬಸವಣ್ಣನವರ ವ್ಯಕ್ತಿತ್ವದ ಹಿರಿಮೆಯನ್ನು ವರ್ಣಿಸಲಾಗಿದೆ. ಬಸವಣ್ಣ-ನವರನ್ನು ಕುರಿತು ಬರೆದ ಕೆಲವು ಪದ್ಯಗಳು ಕೊನೆಯಲ್ಲಿವೆ.

---

**ಆಕರ:**

೧. ಶರಣ ಸಾಹಿತ್ಯ, ಸಂಪುಟ ೨೨, ಸಂಚಿಕೆ ೨-೩, ಪು. ೯೯. ನವ್ಹಂಬರ ೧೯೫೯

೨೧೮

**ಗ್ರಂಥ :** ಶ್ರೀಗುರು ಸಂಗನ ಬಸವನ ಸ್ತುತಿ

**ಪ್ರಭೇದ :** ಪದ್ಯ- ಮಕ್ಕಳ ಸಾಹಿತ್ಯ **ನುಡಿ:** ೬೫

**ಕರ್ತೃ :** ಹರ್ಡೇಕರ ಮಂಜಪ್ಪ

**ಕಾಲ :** ಜ. ೧೮-೨-೧೮೮೫ ಮ. ३-೧-೧೯೪೭

**ಸ್ಥಳ :** ೧೯೪೫

**ಸಾರಾಂಶ :** "ಮಂಜಪ್ಪನವರ ಈ ಸ್ತುತಿಯು ಮಕ್ಕಳಲ್ಲಿ ಪ್ರೇಮಾದರವನ್ನುಂಟು ಮಾಡುವಂತಹ ಉತ್ತಮ ಕೃತಿಯಾಗಿದೆ. ಅದರ ಮುನ್ನುಡಿಯಲ್ಲಿ ಹೀಗೆ ಬರೆದಿದ್ದಾರೆ: 'ಮಹಾನುಭಾವರಾದ ಬಸವಣ್ಣನವರ ದಿವ್ಯ ಚರಿತ್ರೆಯನ್ನು ೬೩ ನುಡಿಗಳಲ್ಲಿ ತಿಳಿಸಿದ ಇದೊಂದು ನನ್ನ ನೂತನ ಪ್ರಯತ್ನ.... ಇದನ್ನು ಚಿಕ್ಕಂದಿನಲ್ಲಿಯೇ ಪಾಠ ಮಾಡಿಸುವದರಿಂದ ಮಕ್ಕಳ ಎಳೆಯ ಮನಸ್ಸಿನಲ್ಲಿ ಆ ದಿವ್ಯ ಚರಿತ್ರೆಯು ಮೂಡಿ ಅದು ಶಿಲಾಶಾಸನವಾಗಿ ಪರಿಣಮಿಸುವದು."

—ಶ್ರೀ ಗ. ಸ. ಹಾಲಪ್ಪನವರ ಪ್ರಸ್ತಾವನೆ, ಪು. ೧೧೩೫

---

**ಆಕರ :**

೧. ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ, ಪು. ೧೩೧೪-೧೩೧೫

೨೧೯

**ಗ್ರಂಥ :** ಶ್ರೀ ಜಗಜ್ಯೋತಿ ಬಸವಣ್ಣನವರ ಲೋಕಪ್ರಿಯ ವಚನಗಳು

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಭೂಸನೂರಮಠ (ಎಸ್. ಎಸ್.), ಕರ್ಕಿ (ಡಿ ಎಸ್.) ಮತ್ತು ಕುಲಕರ್ಣಿ (ಪ್ರಭಾತಾಯಿ)

**ಆಕಾರ :** ೧೮×೧೨ ಸೆ.ಮಿ.

**ಪುಟ** : xxviii+೧೦೪+vii=೧೩೯

**ಸಾಲು** : ೧೯

**ಅಕ್ಷರ** : ೧೦-೨೫

**ಸ್ಥಳ** : ಬೆಳಗಾಂವಿ

**ಪ್ರಕಾಶಕ** : ಶ್ರೀ ವ್ಹಿ. ಸಿ. ಹೆದ್ದೂರಶೆಟ್ಟಿ, ಗೌರವ ಕಾರ್ಯದರ್ಶಿ, ವಚನ ಮಂಟಪ

**ಆವೃತ್ತಿ** : ದ್ವಿತೀಯ

**ಮಿತಿ** : ೧೯-೪-೧೯೬೧

**ಬೆಲೆ** : ೧=೫೦ ರೂ.

**ಸಾರಾಂಶ** : ಪ್ರಸ್ತುತ ವಚನ ಸಂಗ್ರಹವು ೧೯೫೭ರಲ್ಲಿ ಮುದ್ರಿತವಾದ "ಬಸವಣ್ಣನವರ ಲೋಕಪ್ರಿಯ ವಚನಗಳು"— ಎಂಬುದರ ತಿದ್ದಿದ ಎರಡನೆಯ ಆವೃತ್ತಿಯು.

ದೇವರು–೩೦; ಸಂಸಾರ–೨೩; ನೀತಿ–೨೬; ಜ್ಯಾತಿ–೨೦; ಮಾಯೆ–೯; ಭಕ್ತಿ–೩೮; ಮುಕ್ತಿ–೨೭; ಶರಣರು–೫೨; ಉಪದೇಶ–೨೨; ಅನುಭವ–೯೧; ಅರಿಕೆ–೫೧— ಹೀಗೆ ಆ ಆ ವಿಷಯಗಳಿಗೆ ಸಂಬಂಧಿಸಿದ ಒಟ್ಟು ೩೮೫ ವಚನಗಳನ್ನು ಪ್ರಸ್ತುತ ಗ್ರಂಥದಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಮುನ್ನುಡಿಯಲ್ಲಿ ಶ್ರೀಮತಿ ಪ್ರಭಾತಾಯಿ ಕುಲಕರ್ಣಿಯವರು ಸಂಕ್ಷಿಪ್ತವಾಗಿ (i-xiv) ಬಸವಣ್ಣನವರ ಚರಿತ್ರೆಯನ್ನು ಬರೆದಿದ್ದಾರೆ.

ಬೆಳಗಾವಿ–ನಾಗನೂರ ರುದ್ರಾಕ್ಷಿಮಠದ ಶಿವಬಸವ ಸ್ವಾಮಿಗಳು, ವ್ಹಿ. ಸೀ., ಹೆದ್ದೂರ ಶೆಟ್ಟಿಯವರು, ಅಶ್ವಾರೋಹಿ ಬಸವಣ್ಣನವರು,— ಇವರ ಭಾವಚಿತ್ರಗಳಿವೆ. ಕೊನೆಯಲ್ಲಿ ವಚನಗಳ ಅಕಾರಾದಿ ಪಟ್ಟಿಯನ್ನು ಕೊಡಲಾಗಿದೆ.

"ಈಗ ಇದರಲ್ಲಿ ಮೊದಲಿನ ಪುಸ್ತಕಕ್ಕಿಂತಲೂ ೧೭೬ ವಚನಗಳನ್ನು ಹೆಚ್ಚಾಗಿ ಹಾಕಿದೆಯಲ್ಲದೆ, ಅವುಗಳನ್ನು ಚನ್ನಾಗಿ ಉತ್ತಮ ರೀತಿಯಿಂದ ಆರಿಸಿದ ಪರಿವಿಡಿಯಲ್ಲಿ ಓದುಗರಿಗೆ ಸುಲಭವಾಗುವಂತೆ ಜೋಡಿಸಿದೆ."

—ಶ್ರೀ ಹೆದ್ದೂರ ಶೆಟ್ಟರ 'ಸವಿನುಡಿ'ಯಿಂದ, ಪು. xxv

**ನೋಡು** : ಬಸವಣ್ಣನವರ ಲೋಕಪ್ರಿಯ ವಚನಗಳು

---

**ಆಕರ** :

೧. ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಭಂಡಾರ, ನಂ. ಗ್ರಂಥ Q234xF32,52 33K1

೨೨೦

**ಗ್ರಂಥ :** ಶ್ರೀ ಜಗಜ್ಜ್ಯೋತಿ ಬಸವೇಶ್ವರ

**ಪ್ರಭೇದ :** ನಾಟಕ

**ಆಕಾರ :** ಗ್ರಾಮಫೋನ್ ರಿಕಾರ್ಡುಗಳು ೭

**ಬೆಲೆ :** ೨೧–೦೦ ರೂ.

**ಸಾರಾಂಶ :** ಬಸವಣ್ಣನವರ ಜೀವನ ಚರಿತ್ರೆಯನ್ನು ನಾಟಕ ರೂಪದಲ್ಲಿ ಪ್ರತಿಬಿಂಬಿಸುವ ಗ್ರಾಮಫೋನ್ ರಿಕಾರ್ಡುಗಳಿವು.

೨೨೧

**ಗ್ರಂಥ :** ಶ್ರೀ ಜಗಜ್ಜ್ಯೋತಿ ಬಸವೇಶ್ವರ ಶತಕತ್ರಯ

**ಪ್ರಭೇದ :** ವಚನ–ಟೀಕೆ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಟೀಕಾಕಾರ :** ಪೂಜಾರ (ಭೀ. ಶಂ.)

**ಆಕಾರ :** ೧೭·೫×೧೨ ಸೆ.ಮಿ.

**ಪುಟ :** ೮+೧೭೬=೧೮೪

**ಸಾಲು :** ೨೪

**ಅಕ್ಷರ :** ೨೦–೨೫

**ಸ್ಥಳ :** ಗದಗ

**ಪ್ರಕಾಶಕ :** ಪಿ. ಸಿ. ಶಾಬಾದಿಮಠ ಬುಕ್ ಡಿಪೋ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೭

**ಬೆಲೆ :** ೨=೦೦ ರೂ.

**ಸಾರಾಂಶ:** ಬಸವಣ್ಣನವರ ಧರ್ಮಬೋಧಕವಾದ ೧೦೨ ವಚನ, ನೀತಿ ಬೋಧಕವಾದ ೧೦೦ ವಚನ ಹಾಗು ವೇದಾಂತಪರವಾದ ೧೦೩ ವಚನ— ಹೀಗೆ ೩೦೫ ವಚನಗಳಿಗೆ ತಾತ್ಪರ್ಯವನ್ನು ಬರೆಯಲಾಗಿದೆ.

ಧರ್ಮಶತಕದಲ್ಲಿ ದೇವರು, ಸತ್ಯ, ಕಾಮ, ಕ್ರೋಧ, ಐಶ್ವರ್ಯ, ಸ್ತ್ರೀ, ಕಳ್ಳತನ, ಭಯ, ನಿರ್ಭಯ ಸತ್ಸಂಗ, ಅಷ್ಟಾವರಣ ಮುಂತಾದ ವಿಷಯಗಳಿಗೆ ಸಂಬಂಧಿಸಿದ ವಚನಗಳಿಗೆ ಟೀಕೆಯಿದೆ. ನೀತಿಶತಕದಲ್ಲಿ ಷಟ್‌ಸ್ಥಲಗಳಿಗೆ ಸಂಬಂಧಿಸಿದ ವಚನಗಳಿಗೆ ವಿವರವಿದೆ. ವೇದಾಂತ ಅಥವಾ ಮುಕ್ತಿಶತಕದಲ್ಲಿ ಇಹ-ಪರಗಳನ್ನು ಕುರಿತು ಹೇಳಿದ ವಚನಗಳಿಗೆ ಅರ್ಥಕೊಟ್ಟಿದೆ.

ಪುಟ ೧೬೩–೧೬೫ರಲ್ಲಿ ಮಾದಾರ ಚೆನ್ನಯ್ಯ, ಡೋಹರಕಕ್ಕಯ್ಯ, ಶ್ವಪಚಯ್ಯ, ಮಡಿವಾಳ ಮಾಚಯ್ಯ, ಮೋಳಿಗೆಯ ಮಾರಯ್ಯ, ಮಹದೇವಿಯಮ್ಮ, ಕಿನ್ನರಿ ಬೊಮ್ಮಯ್ಯ, ಸಿರಿಯಾಳ, ಸಿಂಧುಮರಾಳ— ಇವರನ್ನು ಬಸವಣ್ಣನವರು ಹೊಗಳಿ ಹೇಳಿದ ವಚನಗಳನ್ನು (೧೦) ಕೊಟ್ಟಿದೆ. ಇವರಲ್ಲಿ ಕೆಲವರ ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳಿದೆ.

೨೨೨

**ಗ್ರಂಥ :** ಶ್ರೀ ಬಸವ ಗೀತೆ

**ಪ್ರಭೇದ :** ವಚನ **ಸಂಖ್ಯೆ :** ೧೦೮

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಮಲ್ಲಪ್ಪ (ಎಸ್. ಆರ್.)

**ಆಕಾರ :** ೧೮×೧೨ ಸೆ. ಮಿ.

**ಪುಟ :** ೨೮

**ಸ್ಥಳ :** ತಿಪಟೂರು

**ಮಿತಿ :** ೧೯೪೨

**ಬೆಲೆ :** ೦–೨–೦ ಆಣೆ

**ಸಾರಾಂಶ :** ಬಸವ ಜಯಂತಿಯ ನೆನಪಿಗಾಗಿ ಪ್ರಕಟಿಸಿದ ವಚನ ಸಂಗ್ರಹವಿದು.

---

**ಆಕರ :**

೧. ಶರಣ ಸಾಹಿತ್ಯ, ಸಂಪುಟ ೫; ಸಂಚಿಕೆ ೧-೨; ಪು. ೭೫-೭೬. ಮಾರ್ಚ ೧೯೪೨

೨೨೩

**ಗ್ರಂಥ:** ಶ್ರೀ ಬಸವ ಚರಿತ್ರೆ

**ಪ್ರಭೇದ:** ಗದ್ಯ-ವಿಮರ್ಶಾತ್ಮಕ ಚರಿತ್ರೆ

**ಕರ್ತೃ:** ಹರ್ಡೇಕರ (ಮಂಜಪ್ಪ)

**ಕಾಲ:** ಜ. ೧೮-೨-೧೮೮೫ ಮ. ೩-೧-೧೯೪೭

**ಆಕಾರ:** ೧೮×೧೨ ಸೆ. ಮಿ.

**ಪುಟ:** ೧೬೦

**ಸಾಲು:** ೨೨

**ಅಕ್ಷರ:** ೨೫

**ಸ್ಥಳ:** ದಾವಣಗೆರೆ

**ಪ್ರಕಾಶಕ:** ಬಾಳಪ್ಪ ಬೊಂದಾಡೆ

**ಆವೃತ್ತಿ:** ಪ್ರಥಮ

**ಮಿತಿ:** ೧೯೨೪

**ಬೆಲೆ:** ೧ ರೂ.

**ಸಾರಾಂಶ:** "…. ಶ್ರೀ ಬಸವಣ್ಣನವರು ಮಂತ್ರಿಗಳಾದ ವರೆಗಿನ ಸಂಗತಿ-ಗಳನ್ನು ಮೊದಲನೆಯ ಮೂರು ಪ್ರಕರಣಗಳಲ್ಲಿಯೂ ಅನಂತರ ವೀರಶೈವ ಮತತತ್ವ-ಗಳನ್ನು ಮತ್ತು ಆಚಾರಗಳನ್ನು ಬಹು ಸಂಕ್ಷಿಪ್ತವಾಗಿ ನಾಲ್ಕನೆಯ ಪ್ರಕರಣದಲ್ಲಿ-ಯೂ, ಆಮೇಲೆ ಬಸವಣ್ಣನವರು ಮಾಡಿದ ಮತಪ್ರಸಾರ ಮತ್ತು ಪ್ರಯಾಣಗಳನು ೫-೬ನೆಯ ಪ್ರಕರಣಗಳಲ್ಲಿಯೂ ವಿವರಿಸಿ, ಉಪಸಂಹಾರದಲ್ಲಿ ಈ ಮಹಾನುಭಾವರ ವಿಷಯದಲ್ಲಿರಬಹುದಾದ ಆಕ್ಷೇಪಗಳನ್ನು ಮತ್ತು ಇವರಿಂದಾದ ರಾಷ್ಟ್ರೋದ್ಧಾರವನ್ನು ಕುರಿತು ಪ್ರಸ್ತಾಪಿಸಿರುವೆನು. ಆ ಬಳಿಕ ಈ ಮಹಾನುಭಾವರ ಅದ್ವಿತೀಯವಾದ ಬೋಧಪರ ಅನೇಕ ವಚನಗಳಲ್ಲಿ ೧೬೦ ವಚನಗಳನ್ನು ಮತ್ತು ಇವರ ಕಾಲದಲ್ಲಿದ್ದ ಮಹಾಜ್ಞಾನಿಗಳಲ್ಲಿ ೨೦ ಶಿವಶರಣರ ೫ ಶಿವಶರಣೆಯರ ಒಟ್ಟು ೬೩ ವಚನಗಳನ್ನು ಉದಾಹರಿಸಿದ ತರುವಾಯ ಈ ವಚನಗಳಲ್ಲಿ ಪ್ರಯೋಗಿಸಲ್ಪಟ್ಟಿರುವ ಈ ಕಾಲದಲ್ಲಿ

೧೯೪

ಕಠಿಣವಾಗಿ ತೋರಬಹುದಾದ ಕೆಲವು ಶಬ್ದಗಳಿಗೆ ಅರ್ಥವನ್ನು...ಬರೆದಿರುವೆನು."

— ಲೇಖಕರ 'ಪೀಠಿಕೆ'ಯಿಂದ

---

ಆಕರ :

೧. ರಾಷ್ಟ್ರಧರ್ಮ ದೃಷ್ಟಾರ ಹರ್ಡೇಕರ ಮಂಜಪ್ಪ, ಪು. ೩೩೬–೩೯೬ (ಪುನರ್ಮುದ್ರಣ); ಪು. ೩೯೩

೨. ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಭಂಡಾರ, ನಂ: Q 234xF32w 33F4

೨೨೪

ಗ್ರಂಥ : ಶ್ರೀ ಬಸವಣ್ಣನವರ ಅಭಯ ಸಂಪತ್ತು

ಪ್ರಭೇದ : ಚರಿತ್ರೆ

ಕರ್ತೃ : ನಂಜುಂಡಪ್ಪ (ಬಿ)

ಕಾಲ : ಸು. ೧೯೦೦

ಆಕಾರ : ೧೮×೧೨ ಸೆ. ಮಿ.

ಪುಟ : ೨ + ೧೪ = ೧೬

ಸಾಲು : ೨೫

ಅಕ್ಷರ : ೨೫

ಸ್ಥಳ : ಬೆಂಗಳೂರು

ಪ್ರಕಾಶಕ : ಸರ್ಪಭೂಷಣಮಠ

ಆವೃತ್ತಿ : ಪ್ರಥಮ

ಮಿತಿ : ಬಸವ ಜಯಂತಿ ೧೭–೪–೧೯೩೬

ಮಾಲೆ : ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲಾ, ೨

ಸಾರಾಂಶ : "ಬಸವಣ್ಣನವರು ಭಕ್ತಿಯೋಗಿಗಳು. ಅವರ ವಚನ ಸಮುದಾಯವು ಅವರ ಆತ್ಮಕಥೆಯಂತಿದೆ. ಪುರಾಣಗಳ ಇತರ ದಂತಕತೆಗಳ ಹೇಳಿಕೆಗಳನ್ನುಳಿದು, ಅವರ ವಚನಗಳನ್ನು ಮಾತ್ರ ತೆಗೆದುಕೊಂಡು, ಅವರಲ್ಲಿ ನೆಲಸಿದ್ದ

ದೈವೀಗುಣಗಳಲ್ಲಿ ಮೊದಲನೆಯದಾದ ಅಭಯ ಗುಣವನ್ನು ಈ ಲೇಖನದಲ್ಲಿ ಸೂಕ್ಷ್ಮವಾಗಿ ವಿವರಿಸಿದೆ."

— ಲೇಖಕರ 'ಬಿನ್ನಹ'ದಿಂದ

ಸಿಂಹಾಸನಾರೂಢ ಬಸವಣ್ಣನವರ ಚಿತ್ರವಿದೆ.

ಧೈರ್ಯ–ಅಭಯ ಗುಣಗಳಿಗೆ ಸಂಬಂಧಪಟ್ಟ ೧೧ ವಚನಗಳನ್ನಾಧರಿಸಿ ಬಸವಣ್ಣನವರ ವ್ಯಕ್ತಿಚಿತ್ರಣ ಕೊಡಲಾಗಿದೆ.

೨೨೫

**ಗ್ರಂಥ :** **ಶ್ರೀ ಬಸವಣ್ಣನವರ ಅಮೃತವಾಣಿ : ಜೀವನಚರಿತ್ರೆ ಮತ್ತು ವಚನಸಾರ**

**ಪ್ರಭೇದ :** ವಚನ-ಚರಿತ್ರೆ

**ಕರ್ತೃ :** ಕೃಷ್ಣರಾವ (ಅ. ಸ.)

**ಕಾಲ :** ಜ. ೯-೫-೧೯೦೮

**ಆಕಾರ :** ೮೧ × ೧೨ ಸೆ. ಮಿ.

**ಪುಟ :** vi + ೧೭೨ + ii = ೧೮೦

**ಸಾಲು :** ೨೬

**ಅಕ್ಷರ :** ೨೫

**ಸ್ಥಳ :** ಧಾರವಾಡ

**ಪ್ರಕಾಶಕ :** ಕರ್ನಾಟಕ ಸಾಹಿತ್ಯ ಮಂದಿರ

**ಆವೃತ್ತಿ :** ಪ್ರಥಮ

**ಮಿತಿ :** ಡಿಸೆಂಬರ ೧೯೪೩

**ಬೆಲೆ :** ೨–೮–೦ ರೂ.

**ಸಾರಾಂಶ :** ಮೊದಲ ಪ್ರಕರಣದಲ್ಲಿ – ಬಾಲ್ಯ, ಯೌವನ, ರಾಜಾಸ್ಥಾನ, ಸಂಸಾರ ನಿರಸನ, ಸಾಧನಯೋಗ, ಶರಣ ಸತಿ ಲಿಂಗ ಪತಿ, ರಾಜ್ಯಸೇವಾ-ಸಕ್ತ, ಧರ್ಮ ಸಂಸ್ಥಾಪನೆ, ಅನುಭವ ಮಂಟಪ, ಮಹಾಕ್ರಾಂತಿ ಇತ್ಯಾದಿ ವಿಷಯ-ಗಳನ್ನು ವಿವೇಚಿಸಿ ಬಸವಣ್ಣನವರ ಜೀವನ ಚರಿತ್ರೆಯನ್ನು ಕೊಡಲಾಗಿದೆ.

೧೯೬

ಎರಡನೆಯ ಪ್ರಕರಣದಲ್ಲಿ ೧೯೯ ಬಸವಣ್ಣನವರ ವಚನಗಳಿವೆ. ಇವುಗಳನ್ನು ೧೬ ವಿಷಯ ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ವಿಷಯ ವಿಭಾಗದ ಆದಿಯಲ್ಲಿ ಅಲ್ಪ ವಿವರಣೆಯಿದೆ.

ಮೂರನೆಯ ಪ್ರಕರಣದಲ್ಲಿ ಬಸವಣ್ಣನವರನ್ನು ಬಣ್ಣಿಸಿದ ಶರಣರ ವಚನಗಳೂ, ಕವಿಗಳ ಕಾವ್ಯಗಳಿಂದಾಯ್ದ ಪದ್ಯಗಳೂ ಇವೆ.

ನಾಲ್ಕನೆಯ ಪ್ರಕರಣದಲ್ಲಿ ಪ್ರಸ್ತುತ ಗ್ರಂಥವನ್ನು ರಚಿಸುವಲ್ಲಿ ಉಪಯೋಗಿಸಿದ ಕನ್ನಡ-ಇಂಗ್ಲಿಷ ಗ್ರಂಥಗಳ ದರ್ಶಕವನ್ನು ಕೊಟ್ಟಿದೆ. ಕೊನೆಯಲ್ಲಿ ವಚನಗಳ ಅಕಾರಾದಿಕೋಶವಿದೆ.

**"ಬಸವಣ್ಣನವರು ಕ್ರಿಸ್ತ, ಮುಹಮ್ಮದ್, ಬುದ್ಧರಂತೆ ಜಗಜ್ಜ್ಯೋತಿಗಳ ಪಂಕ್ತಿಗೆ ಸೇರಿದವರೆಂದು ತೋರಿಸಬೇಕೆಂಬುದು ನಮ್ಮ ಆದರ್ಶ.** ಅವರ ವಚನಗಳನ್ನು ಆಯುವಾಗಲೂ ಇದೇ ಧೋರಣೆಯನ್ನು ಅನುಸರಿಸಿದ್ದೇವೆ. ಪಾರಿಭಾಷಿಕವೂ, ಬೆಡಗಿನವೂ, ಚರ್ಚಾತ್ಮಕವೂ ಆದ ವಚನಗಳನ್ನು ಬಿಟ್ಟು ಸರ್ವಧರ್ಮೀಯರೂ ಸಂತೋಷದಿಂದ ಪರಿಗ್ರಹಿಸಬಹುದಾದ ವಚನಗಳನ್ನೇ ನಾವು ಆಯ್ದಿದ್ದೇವೆ."

—ಲೇಖಕರ 'ಮುನ್ನುಡಿ'ಯಿಂದ

೨೨೬

**ಗ್ರಂಥ :** ಶ್ರೀ ಬಸವಣ್ಣನವರ ಆದರ್ಶ ಜೀವನ

**ಪ್ರಭೇದ :** ಗದ್ಯ

**ಕರ್ತೃ :** ಶಾಸ್ತ್ರಿಮಠ (ನಾಗಭೂಷಣ ಶಾಸ್ತ್ರೀ)

**ಕಾಲ :** ಜ. ೮-೪-೧೯೦೬

**ಆಕಾರ :** ೧೬×೧೦ ಸೆ. ಮಿ.

**ಪುಟ :** ೬೦

**ಸ್ಥಳ :** ಗದಗು

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ಬಸವ ಜಯಂತಿ ೧೯೩೬

**ಸಾರಾಂಶ:** ಬಸವಣ್ಣನವರ ಜನನ, ಬಾಲ್ಯ, ಮದುವೆ, ಮಂತ್ರಿಪದವಿ ಗೇರಿದುದು–ಇತ್ಯಾದಿ ವಿಷಯಗಳನ್ನು ವಿವರಿಸಲಾಗಿದೆ. ಆದರೆ ಗ್ರಂಥದ ಮೂಲ ಉದ್ದೇಶ ಬಸವಣ್ಣನವರ ಗೃಹಸ್ಥ ಜೀವನದ ಆದರ್ಶವನ್ನು ಎತ್ತಿತೋರಿಸುವದಾಗಿದೆ.

''ಇಡೀ ಭರತ ಖಂಡದ ಧಾರ್ಮಿಕ-ಸಾಹಿತ್ಯ ಗ್ರಂಥಗಳಲ್ಲಿ ಎರಡು ಗ್ರಂಥಗಳು ಮಾತ್ರ ವಿದ್ವಾಂಸರ ಮನ್ನಣೆಗೆ ಯೋಗ್ಯಗಳಾಗಿರುವವು. ಒಂದು **ಬಸವಾದಿ ಪ್ರಮಥರ ವಚನಗ್ರಂಥ**, ಮತ್ತೊಂದು **ಭಗವದ್ಗೀತೆ.** ಇವೆರಡುಗಳಲ್ಲಿ 'ವಚನ ಗ್ರಂಥವು' ವಕ್ತೃವಿನ ಅನುಭಾವ ಪ್ರಧಾನವಾಗಿಯೂ ಗೀತೆಯು ಜ್ಞಾನಪ್ರಧಾನ ವಾಗಿಯೂ ಇರುವವು. ಜ್ಞಾನಪ್ರಧಾನವಾದ ಗ್ರಂಥಕ್ಕಿಂತಲೂ-ಅನುಭಾವ ಪ್ರಧಾನ ವಾದ ಗ್ರಂಥವು ಶ್ರೇಷ್ಠವಾದದ್ದೆಂಬುವದು ನಿರ್ವಿವಾದವಾದದ್ದು.''

—ಗ್ರಂಥಕರ್ತರಿಂದ

---

ಆಕರ:

೧. ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು ಭಾ. ೧, ಪು. ೪೩–೪೪

೨೨೭

**ಗ್ರಂಥ:** ಶ್ರೀ ಬಸವಣ್ಣನವರ ೫೦ ತೆರದ ಆಚಾರಗಳು

**ಪ್ರಭೇದ:** ವಚನ

**ಕರ್ತೃ:** ಬಸವಾದಿ ಶರಣರು

**ಕಾಲ:** ಸು. ೧೧೬೭

**ಆಕಾರ:** ೧೫·೫×೧೨ ಸೆ. ಮಿ.

**ಪುಟ:** ೧೨

**ಸಾಲು:** ೨೦

**ಅಕ್ಷರ:** ೨೮

**ಸ್ಥಳ:** ಯಾದಗಿರಿ

**ಪ್ರಕಾಶಕ:** ಅಡಿವೆಪ್ಪ ಗೋಲಗೇರಿ, ಮೃತ್ಯುಂಜಯ ತುಮ್ಮೂರ

**ಮಿತಿ:** ಜನವರಿ ೧೯೫೫

**ಸಾರಾಂಶ :** ವೀರಶೈವರು ಆಚರಿಸಬೇಕಾದ ೫೦ ತೆರೆದ ಆಚಾರಗಳನ್ನು ನಿರೂಪಿಸುವ ಚೆನ್ನಬಸವಣ್ಣನವರ ಎರಡು ವಚನಗಳು ಆದಿಯಲ್ಲಿವೆ. ಅನಂತರ ಬಸವಣ್ಣನವರ ೫೨ ವಿಧದ ಇರವನ್ನು ಹೇಳುವ ಮಹದೇವಿಯಕ್ಕನ ವಚನವಿದೆ. ಬಸವಣ್ಣನವರ ೧೯ ವಚನಗಳನ್ನಾಯ್ದು ಕೊನೆಯಲ್ಲಿ ಕೊಟ್ಟಿದೆ.

೨೨೮

**ಗ್ರಂಥ :** **ಶ್ರೀ ಬಸವಣ್ಣನವರ ಚರಿತ್ರವು**

**ಪ್ರಭೇದ :** ವಾರ್ಧಕ ಷಟ್ಪದಿ

**ಕರ್ತೃ :** ಕೋಪರಡೆ (ತುಕಾರಾಮಪ್ಪ ರತ್ನಪ್ಪ)

**ಕಾಲ :** ಸು. ೧೯೦೦

**ಸ್ಥಳ :** ಬನಹಟ್ಟಿ

**ಮಿತಿ :** ೧೯೩೩

**ಸಾರಾಂಶ :** ಗ್ರಂಥ ಅವಲೋಕನಕ್ಕೆ ಸಿಕ್ಕಿಲ್ಲ. ಲಿಂ. ಅ. ಕೃ. ಗ್ರಂಥದಲ್ಲಿ ಕೊಟ್ಟ ಮೂರು ಪದ್ಯಗಳಲ್ಲಿ ಒಂದನ್ನಿಲ್ಲಿ ಉದ್ಧರಿಸುತ್ತೇವೆ :

ಮುನ್ನವಾ ಬಸವಣ್ಣ ಮಾಡಿಟ್ಟ ನೇಮಗಳು
ರನ್ನದೀವಿಗೆಯಂತೆ ಮಾರ್ಗ ತೋರಿಸುತಿಹವು
ಚೆನ್ನಾಗಿ ಯಾ ತತ್ವ ತಿಳಕೊಂಡು ನಡೆದರೆ ಬಲಪಡೆವುದೈ ಧರ್ಮವು ।
ಭಿನ್ನಮಾರ್ಗದೆ ಹೊಂದಲಾರದೀ ಭಾರತವು
ಉನ್ನತಿಯ ತಿಲಮಾತ್ರ ಬರಿದೆ ಕಾಲಹರಣ
ವಿನ್ನಾದರೂ ಮಾಡದೇ ಸಾಗಿ ಬಸವನ ಪಥದೆ ಬೆಳೆಸಿರೀ ಧರ್ಮವ ॥

---

ಆಕರ :

೧. ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು, ಭಾ. ೧, ಪು. ೯೫
೨. ಬಸವತತ್ವ ರತ್ನಾಕರ, ಪು. ೬೨೦

೨೨೯

**ಗ್ರಂಥ :** **ಶ್ರೀ ಬಸವಣ್ಣನವರ ದಿವ್ಯಜೀವನ**

**ಪ್ರಭೇದ :** ಗದ್ಯ–ಚರಿತ್ರೆ

ಕರ್ತೃ : ದೇಶಪಾಂಡೆ (ಮನೋಹರ, ಶ್ರೀ.)

ಕಾಲ : ಜ. ೨೬-೨-೧೮೯೯

ಆಕಾರ : ೧೭.೫×೧೨.೫ ಸೆ. ಮಿ.

ಪುಟ : xix + ೧೫೨ = ೧೭೧

ಸಾಲು : ೨೫

ಅಕ್ಷರ : ೨೫

ಸ್ಥಳ : ಹುಬ್ಬಳ್ಳಿ

ಪ್ರಕಾಶನ : ಲೋಕ ಶಿಕ್ಷಣ ಟ್ರಸ್ಟ ಪ್ರಕಾಶನ

ಆವೃತ್ತಿ : ಪ್ರಥಮ

ಮಿತಿ : ಎಪ್ರಿಲ್, ೧೯೬೬

ಬೆಲೆ : ೨=೦೦ ರೂ.

ಮಾಲೆ : ಲೋಕ ಶಿಕ್ಷಣ ಮಾಲೆ

ಸಾರಾಂಶ : "ಈ ಗ್ರಂಥವನ್ನು ಎಂಟು ಅಧ್ಯಾಯಗಳಾಗಿ ವಿಂಗಡಿಸಿ, ನಾಲವತ್ತು ಶಿರೋನಾಮುಗಳಲ್ಲಿ ವಿಭಜಿಸಿ ಅವರು ಬಸವಣ್ಣನವರ ಉದಾತ್ತ ನಡೆ ನುಡಿಗಳನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಶ್ರೀ ದೇಶಪಾಂಡೆಯವರು ಈ ಗ್ರಂಥದಲ್ಲಿ ಅವರ ದಿವ್ಯ ಜೀವನವನ್ನು ವೈವಿಧ್ಯತೆಯಿಂದ ರೂಪಿಸಿದ್ದಾರೆ."

—ಶ್ರೀ ಬಿ. ಡಿ. ಜತ್ತಿಯವರ 'ಮುನ್ನುಡಿ'ಯಿಂದ

೨೩೦

ಗ್ರಂಥ : ಶ್ರೀ ಬಸವಣ್ಣನವರ ಲಾವಣಿ

ಪ್ರಭೇದ : ಲಾವಣಿ

ಕರ್ತೃ : ನೀಲಕಂಠಯ್ಯ ತುರಾಬಿರಾದಾರ್ (ಬಿ)

ಆಕಾರ : ೧೮×೧೨ ಸೆ. ಮಿ.

ಪುಟ : ೭

ಮಿತಿ : ೧೯೩೮ ?

ಬೆಲೆ : ೦-೦-೬ ಪೈ.

**ಸಾರಾಂಶ :** ಲಾವಣಿಯಲ್ಲಿ ಬಸವಣ್ಣನವರನ್ನು ಕೀರ್ತಿಸಲಾಗಿದೆ.

---

**ಆಕರ :**

೧. ಶರಣ ಸಾಹಿತ್ಯ ಸಂಪುಟ ೧; ಸಂಚಿಕೆ ೫; ಪು. iv, ೧೯೩೮

೨೩೧

**ಗ್ರಂಥ :** **ಶ್ರೀ ಬಸವಣ್ಣನವರ ಲೀಲಾ-ಪದ್ಯಾವಲಿ**

**ಪ್ರಭೇದ :** ಹಾಡುಗಳು

**ಸಂಪಾದಕ :** ಹಿರೇಮಠ (ತೋಟಪ್ಪಯ್ಯ ಶಾಸ್ತ್ರಿ)

**ಸ್ಥಳ :** ಗದಗ

**ಮಿತಿ :** ೧೯೫೩ ?

**ಬೆಲೆ :** ೦-೧೦-೦ ಆಣೆ

**ಸಾರಾಂಶ :** ತಮ್ಮಲ್ಲಿ ದೊರೆಯುವ ಗ್ರಂಥಗಳ ಯಾದಿಯಲ್ಲಿ ಶ್ರೀ ಶಾಸ್ತ್ರಿಗಳು ಈ ಗ್ರಂಥದ ಹೆಸರನ್ನು ಸೇರಿಸಿರುವರು.

**ನೋಡು :** ಬಸವಣ್ಣನವರ ಲೀಲಾ

೨೩೨

**ಗ್ರಂಥ :** **ಶ್ರೀ ಬಸವಣ್ಣನವರ ವಚನಗಳು**

**ಪ್ರಭೇದ :** ವಚನ-ಟೀಕೆ **ಸಂಖ್ಯೆ :** ೧೨೯೪

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ, ಟೀಕಾಕಾರ :** ಮಹಾಂತೇಶಶಾಸ್ತ್ರಿ (ಎಚ್. ಟಿ.)

**ಆಕಾರ :** ೧೮×೧೨ ಸೆ. ಮಿ.

**ಪುಟ :** ೪೦೦

**ಸಾಲು :** ೨೬

ಅಕ್ಷರ : ೨೬

ಸ್ಥಳ : ಗದಗ

ಪ್ರಕಾಶಕ : ಪಿ.ಸಿ- ಶಾಬಾದಿಮಠ, ಬುಕ್ ಪಬ್ಲಿಶರ್ಸ್, ಆ್ಯಂಡ ಸೆಲರ್ಸ್

ಆವೃತ್ತಿ : ಪ್ರಥಮ

ಮಿತಿ : ೫-೧-೧೯೬೬

ಬೆಲೆ : ೨=೫೦ ರೂ.

ಸಾರಾಂಶ : ಬಸವಣ್ಣನವರ 'ಷಟ್‌ಸ್ಥಳದ ವಚನಗಳು' ಹಾಗು 'ಹೆಚ್ಚಿಗೆ ದೊರೆತ ವಚನಗಳು'— ಒಟ್ಟು ೧೯೨೪ ವಚನಗಳಿಗೆ ಭಾವಾರ್ಥವನ್ನು ಬರೆಯಲಾಗಿದೆ.

"ಬಸವಣ್ಣನವರು ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ವಚನ ರಚನೆ ಮಾಡಿದರು. ಆದರೆ ಅಲ್ಲಲ್ಲಿ ಹಳಗನ್ನಡ-ಸಂಸ್ಕೃತ ಶಬ್ದಗಳು ಸಾಹಿತ್ಯದ ಲಾಲಿತ್ಯಕ್ಕಾಗಿ ಸೇರಿಕೊಂಡಿವೆ. ಅವುಗಳನ್ನು ತಿಳಿಗನ್ನಡದಲ್ಲಿ ಪರಿವರ್ತಿಸಿಕೊಂಡು ಸಾಮಾನ್ಯ ವಾಕ್ಯಗಳಲ್ಲಿ ನಿವೇದಿಸುವದೇ ವಿಹಿತವೆಂದು ನಿಶ್ಚಯಿಸಿದೆವು."

—ಶ್ರೀ ಪಿ. ಸಿ. ಶಾಬಾದಿಮಠ ಅವರ 'ನಿವೇದನೆ'ಯಿಂದ

೨೩೩

ಗ್ರಂಥ : **ಶ್ರೀ ಬಸವಣ್ಣನವರ ವಚನ ಸಂಗ್ರಹ**

ಪ್ರಭೇದ : ವಚನ

ಕರ್ತೃ : ಬಸವಣ್ಣ

ಕಾಲ : ಸು. ೧೧೬೭

ಸಂಪಾದಕ : ಮಾಳವಾಡ (ಸಂಗಪ್ಪ ಸಂಗನಬಸಪ್ಪ)
ಜ. ೧೪-೧೧-೧೯೧೦

ಆಕಾರ : ೧೮×೧೨ ಸೆ.ಮಿ.

ಪುಟ : xxviii+೨೦೫=೨೩೩

ಸ್ಥಳ : ಧಾರವಾಡ

ಪ್ರಕಾಶಕ : ಪ್ರತಿಭಾ ಗ್ರಂಥ ಮಾಲೆ (ಸಾಹಿತ್ಯ ಅಕಾಡೆಮಿ ಪರವಾಗಿ)

ಆವೃತ್ತಿ : ಪ್ರಥಮ

ಮಿತಿ : ೧೯೬೬

ಬೆಲೆ : ೩=೦ ರೂ.

ಸಾರಾಂಶ : "ಸಕಲರಿಗೂ ಸರ್ವಮಂಗಲವಾದ ಸಾಮಾಜಿಕ ಸುಖ-ಶಾಂತಿಗೆ ತಳಹದಿಯಾಗುವ, ಬೆಳಕಿನ ಹಾದಿಯನ್ನು ಕಂಡುಕೊಳ್ಳುವದಕ್ಕೆ ನೆರವಾಗುವ ವಚನಗಳನ್ನು ಈ ಸಂಗ್ರಹದಲ್ಲಿ ಸೇರಿಸಿದೆ. ಇದೊಂದು ವಿಶಿಷ್ಟ ಮತೀಯ ಗ್ರಂಥವಲ್ಲ. ಆದುದರಿಂದ ಇಲ್ಲಿ ಆಯ್ದುಕೊಂಡ ವಚನಗಳನ್ನು ಹೊಸಬಗೆಯಿಂದಲೇ ವಿಭಾಗಿಸಲಾಗಿದೆ. ಮಾನವತ್ವದ ವಿಕಾಸದಿಂದ ದೇವತ್ವದೆಡೆಗೆ ಕರೆದೊಯ್ಯುವ ಬಸವಣ್ಣನವರ ಮಾರ್ಗವನ್ನು ಅರಿತುಕೊಳ್ಳುವ ಬಗೆಯಲ್ಲಿ ಇಲ್ಲಿಯ ೫೦೦ ವಚನಗಳನ್ನು ೨೦ ವಿಭಾಗಗಳಲ್ಲಿ ಸೇರಿಸಲಾಗಿದೆ."

—ಸಂಪಾದಕರ ಪೀಠಿಕೆ, ಪು. vii

ವಿಭಾಗಗಳ ಪರಿವಿಡಿ ಇಂತಿದೆ:

೧. ಆತ್ಮನಿವೇದನೆ-ಪರಿಶೀಲನೆ ೨. ಸದ್ಭಕ್ತಿ ೩. ನಿಷ್ಠೆ-ಶ್ರದ್ಧೆ ೪. ನಿರಹಂಕಾರ-ವಿನಯ ೫. ನಿಸ್ಪೃಹತೆ-ಆತ್ಮವಿಶ್ವಾಸ ೬. ಪರಿಶುದ್ಧ ನಡೆನುಡಿ ೭. ಕುಲ-ಶೀಲ ೮. ಕರ್ಮಠತನ-ಡಂಭಾಚಾರ ೯. ಲೋಕಾಚಾರ ವಿಡಂಬನೆ ೧೦. ಅಂತರಂಗ ಶುದ್ಧಿ ೧೧. ಮಾಯೆ - ಸಂಸಾರ ೧೨. ಮನದ ಮರ್ಕಟತನ - ಶುದ್ಧೀಕರಣ ೧೩ ಸಮರ್ಪಣ ಭಾವ ೧೪. ಶರಣ-ಶರಣ ವಾಣಿ ೧೫. ಪರಮಾತ್ಮ ಸ್ವರೂಪ ೧೬. ಧ್ಯಾನ-ಪೂಜೆ ೧೭. ಹರಕಾರುಣ್ಯ ೧೮. ನಿಜದ ನಿಲವು ೧೯. ಸಮತೆ-ಸಮರಸ ೨೦. ಅನುಭಾವ.

## ೨೩೪

**ಗ್ರಂಥ : ಶ್ರೀ ಬಸವಣ್ಣನವರ ವೀರಶೈವ ಸಮಾಜ**

ಪ್ರಭೇದ : ಧರ್ಮ–ಗುರುಶಿಷ್ಯರ ಸಂವಾದ

ಕರ್ತೃ : ನಾಗೇಶಶಾಸ್ತ್ರಿ (ವಾಯ್) ಜ. ಸು. ೧೯೦೦

ಆಕಾರ : ೨೧×೧೪ ಸೆ. ಮಿ.

ಪುಟ : ೨ + ೮ + ೭೭ = ೮೭

ಸಾಲು : ೨೭

ಅಕ್ಷರ : ೨೫

ಸ್ಥಳ : ಧಾರವಾಡ

ಪ್ರಕಾಶಕ : ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ

ಆವೃತ್ತಿ : ಪ್ರಥಮ

ಮಿತಿ : ೧೯೬೩

ಬೆಲೆ : ೧=೦೦ ರೂ.

ಮಾಲೆ: ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ೩೩

ಸಾರಾಂಶ: ಬಸವಣ್ಣನವರ ಜೀವನ ಚರಿತ್ರೆ, ಬಸವಣ್ಣನವರು ನಿರ್ಮಿಸಿದ ವೀರಶೈವ ಸಮಾಜ ಹಾಗು ಅದರ ನೀತಿ, ತಾತ್ವಿಕ ವಿಚಾರ, ಅಷ್ಟಾವರಣ– ಇವು ಗಳನ್ನು ಗುರುಶಿಷ್ಯರ ಪ್ರಶ್ನೋತ್ತರ ರೂಪದಲ್ಲಿ ವಿವರಿಸಿ ಹೇಳಿದೆ. 'ಅರಿದಡೆ ಶರಣ, ಮರೆದರೆ ಮಾನವ; ಮರೆಯದೇ ಪೂಜಿಸು ಕೂಡಲ ಸಂಗಯ್ಯನ' ಎಂಬುದೇ ಬಸವಣ್ಣನವರು ಮಾನವ ಕುಲಕ್ಕೆ ನೀಡಿದ ದಿವ್ಯಸಂದೇಶವೆಂದು ವಿವರಿಸಲಾಗಿದೆ.

ಪರಿಶಿಷ್ಟದಲ್ಲಿ ಇಂದಿನ ರಾಜಕೀಯ ವಿಚಾರವಾದಿಗಳು ಭಾರತೀಯ ಮತ-ಧರ್ಮದ ಮೇಲೆ ಮತ್ತು ಶಿವಶರಣ ಧರ್ಮದ ಮೇಲೆ ಮಾಡುವ ಆರೋಪಗಳಿಗೆ ಸಮಾಧಾನಕರ ಉತ್ತರಕೊಡಲು ಯತ್ನಿಸಿದೆ.

೨೩೫

**ಗ್ರಂಥ : ಶ್ರೀ ಬಸವಣ್ಣನವರ ಷಟ್‌ಸ್ಥಳದ ವಚನಗಳು** ಭಾ.೧

ಪ್ರಭೇದ : ವಚನ–ಟೀಕೆ

ಕರ್ತೃ : ಬಸವಣ್ಣ

ಕಾಲ : ಸು. ೧೧೬೭

ಸಂಪಾದಕ : ಯಾಳಗಿ ( ವಿರುಪಾಕ್ಷಪ್ಪ ಚೆನ್ನಪ್ಪ ) ಜ. ಸು. ೧೯೦೦

ಆಕಾರ : ೧೭×೧೨

ಪುಟ : viii + viii + vi + ೮ + ೧೫೪=೧೮೪

ಸಾಲು: ೨೪

ಅಕ್ಷರ : ೧೨–೨೬

ಸ್ಥಳ : ಧಾರವಾಡ

**ಪ್ರಕಾಶಕ:** ಪ್ರಬೋಧ ಪ್ರಕಾಶನ ಸಮಿತಿ, ಬಸವ ಕುಟೀರ

**ಆವೃತ್ತಿ:** ಪ್ರಥಮ

**ಮಿತಿ:** ೧೯೫೪

**ಬೆಲೆ:** ೨-೮-೦

**ಮಾಲೆ:** ಪ್ರಬೋಧ ಪ್ರಕಾಶನ ಸಮಿತಿ, ೨

**ಸಾರಾಂಶ:** ಇದರಲ್ಲಿ ೧೧೩ ವಚನಗಳಿಗೆ ಟೀಕೆಯನ್ನು ಕೊಟ್ಟಿದೆ. ಇದಕ್ಕೆ ಪ್ರೊ. ಆರ್. ಡಿ. ರಾನಡೆ ಅವರ ಇಂಗ್ಲಿಷ ಮುನ್ನುಡಿಯಿದೆ. ನಮ್ಮಲ್ಲಿರುವ ಟೀಕಾ ಗ್ರಂಥದ ಹಸ್ತಪ್ರತಿ ಮತ್ತು ಇದು-ಒಂದೇ ಆಗಿವೆ.

**ನೋಡು:** ೧. ಷಟುಸ್ಥಲದ ವಚನಗಳು
೨. ಬಸವೇಶ್ವರ ದೇವರ ವಚನ ಸಾರಾರ್ಥ
೩. ಬಸವನ ಷಟ್‍ಸ್ಥಲದ ಬೆಡಗಿನ ವಚನದ ಟೀಕೆ
೪. ಷಟ್‍ಸ್ಥಲದ ವಚನ

೨೩೭

**ಗ್ರಂಥ:** ಶ್ರೀ ಬಸವಣ್ಣನವರ ಷಟ್‍ಸ್ಥಳದ ವಚನಗಳು

**ಪ್ರಭೇದ:** ವಚನ **ಸಂಖ್ಯೆ:** ೯೬೧ + ೩೮೨ = ೧೩೪೩

**ಕರ್ತೃ:** ಬಸವಣ್ಣ

**ಕಾಲ:** ಸು. ೧೧೬೦

**ಸಂಪಾದಕ:** ಬಸವನಾಳ (ಶಿವಲಿಂಗಪ್ಪ ಶಿವಯೋಗಪ್ಪ)

**ಆಕಾರ:** ೨೦·೫ × ೧೩·೫ ಸೆ.ಮಿ.

**ಪುಟ:** viii + xlviii + ೧೬ + ೨೫೯ + ೧೪ + ೩೮ + ೧೨೮ = ೫೧೧

**ಸಾಲು:** ೨೨

**ಅಕ್ಷರ:** ೧೦–೨೫

**ಸ್ಥಳ:** ಧಾರವಾಡ

**ಪ್ರಕಾಶಕ:** ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ

ಆವೃತ್ತಿ : ಪ್ರಥಮ

ಮಿತಿ : ೨೬-೧-೧೯೬೨

ಬೆಲೆ : ೬=೦೦ ರೂ.

ಸಾರಾಂಶ : ಬಸವಣ್ಣನವರ ಷಟ್‌ಸ್ಥಳದ ಕಟ್ಟಿನ ವಚನಗಳನ್ನು ಸಂಸ್ಕರಿಸಿ ಶುದ್ಧರೂಪದಲ್ಲಿ ಪಾಠಾಂತರಗಳೊಂದಿಗೆ ಮುದ್ರಿಸಲಾಗಿದೆ. ಬಸವ ಚರಿತ್ರೆ ಹಾಗು ಪ್ರಸ್ತಾವನೆಗಳು ಬಹು ಬೆಲೆಯುಳ್ಳವಾಗಿವೆ. ವಚನಗಳ ಅಕಾರಾದಿಕೋಶವಿದೆ. ಕಠಿಣ ಶಬ್ದಗಳ ಅರ್ಥಕೋಶವಿದೆ. ಕೊನೆಯಲ್ಲಿ ಬಸವಣ್ಣನವರ ಹೆಚ್ಚಿಗೆ ದೊರೆತ ವಚನಗಳಿವೆ. ವಚನ ಸಾಹಿತ್ಯವನ್ನು ಸಂಸ್ಕರಿಸುವವರಿಗೆ ಇದೊಂದು ಏಕಮಾನ್ಯ ಆದರ್ಶ ಗ್ರಂಥ. ಶ್ರೀ ಬಸವನಾಳರ ಪರಿಷ್ಕರಣ ಪಾಂಡಿತ್ಯ ಪರಿಶ್ರಮಗಳು ಪುಟ ಪುಟಗಳಲ್ಲಿ ಎದ್ದು ತೋರುತ್ತವೆ.

ನೋಡು : ೧. ಶ್ರೀ ಬಸವಣ್ಣನವರ ಹೆಚ್ಚಿಗೆ ದೊರೆತ ವಚನಗಳು

೨೩೭

ಗ್ರಂಥ : ಶ್ರೀ ಬಸವಣ್ಣನವರ ಹೆಚ್ಚಿಗೆ ದೊರೆತ ವಚನಗಳು

ಪ್ರಭೇದ : ವಚನ

ಕರ್ತೃ : ಬಸವಣ್ಣ

ಕಾಲ : ಸು. ೧೯೬೭

ಸಂಪಾದಕ : ಬಸವನಾಳ (ಶಿವಲಿಂಗಪ್ಪ ಶಿವಯೋಗಪ್ಪ)
ಜ. ೧೮೯೩ ಮ. ೨೨—೧೨—೫೧

ಆಕಾರ : ೧೮×೧೨ ಸೆ.ಮಿ.

ಪುಟ : ೮+೧೨೮=೧೩೬

ಸಾಲು : ೨೪

ಅಕ್ಷರ : ೧೬—೨೫

ಸ್ಥಳ : ಧಾರವಾಡ

ಪ್ರಕಾಶಕ : ಲಿಂಗಾಯತ ವಿದ್ಯಾಭಿವೃದ್ಧಿ, ಸಾಹಿತ್ಯ ಸಮಿತಿ

ಆವೃತ್ತಿ : ಪ್ರಥಮ

**ಪ್ರಕಾಶಕ :** ಮಲ್ಲಾಬಾದಿ ಮಹಾಂತಪ್ಪ ಸಹೋದರರು,
ಪಂಪಾ ಸಾಹಿತ್ಯ ಪ್ರಕಟನಾಲಯ

**ಆವೃತ್ತಿ :** ವಿಸ್ತೃತ ದ್ವಿತೀಯ ಪ್ರಥಮ

**ಮಿತಿ :** ಬಸವಜಯಂತಿ ೧೯೬೧ ೧೯೫೪

**ಬೆಲೆ :** ಕ್ಯಾಲಿಕೋ ೪=೦೦ ರೂ.

**ಮಾಲೆ :** ಪ್ರೇಮದ ಬಳ್ಳಿಯ ಬಳಗ, ೫

**ಸಾರಾಂಶ :** ಇದರಲ್ಲಿ ಬಸವತತ್ತ್ವವನ್ನು ಪ್ರಕಟಪಡಿಸುವ ೧೧ ಲೇಖನಗಳಿವೆ. ಬಸವ ತತ್ವದ ಭಾಷೆ— ಶಿ. ಶಿ. ಬಸವನಾಳ; ಬಸವ ತತ್ವಪರಿಮಳ,–ಲಕ್ಷ್ಮಣರಾವ ಹೊಯಿಸಳ; ಬಸವತತ್ವದ ಸ್ವಾವಲಂಬಿ ಸಮಾಜ–ಅಮರಾನಂದ; ಅಕ್ಕಂದಿರ ಅಣ್ಣ–ಮಹಾಂತಮ್ಮ ಹಮ್ಮಿಗೆಕಲ್; ಕೂಡಲ ಸಂಗಮದೇವ– ದೇವೇಂದ್ರ ಕುಮಾರ ಹಕಾರಿ; ಬಸವತತ್ತ್ವದ ಆದರ್ಶ– ಗೌರಿಶಂಕರ ಮಹಾಸ್ವಾಮಿಗಳು— ಈ ವಿದ್ವನ್ಮಣಿಗಳ ಲೇಖನಗಳು ಬಸವಣ್ಣನವರ ಅಂತರಂಗ-ಬಹಿರಂಗ ಜೀವನವನ್ನು ತೆರೆದು ತೋರಿಸುತ್ತವೆ.

"ಈ ಗ್ರಂಥದಲ್ಲಿ ಅತಿ ಮುಖ್ಯವಾಗಿ ತತ್ವವಿಚಾರ, ಸಾಹಿತ್ಯವಿಚಾರ, ಸಾಮಾಜಿಕ ಹಾಗೂ ನೂತನ ತಾತ್ವಿಕ ವಿಮರ್ಶೆ ಸಂಶೋಧನೆಗಳಿಂದೊಡಗೂಡಿದ ವೈವಿಧ್ಯಮಯವಾದ ಸರಣಿಯ ಲೇಖನಗಳನ್ನು ಸಂಗ್ರಹಿಸಲಾಗಿದೆ."

— ಮಲ್ಲಾಬಾದಿಯವರ ಪ್ರಸ್ತಾವನೆಯಿಂದ, ಪು. xxiv

ಬಸವಣ್ಣನವರು, ಬಸವನಾಳರು, ಟಿ. ಎಚ್. ಎಂ. ಸದಾಶಿವಯ್ಯನವರು, ಇವರ ಭಾವಚಿತ್ರಗಳಿವೆ. ಇವಲ್ಲದೆ ಪ್ರಥಮ ಮುದ್ರಣದಲ್ಲಿ ಹರ್ಡೇಕರ ಮಂಜಪ್ಪನವರು, ಪಾವಟೆ ಸಿದ್ಧರಾಮಪ್ಪನವರು, ಬಿಳೇಅಂಗಡಿ ವೀರಪ್ಪನವರು, ಹಾಲಪ್ಪನವರ ಚೆನ್ನಬಸಪ್ಪನವರು, ಫ. ಗು. ಹಳಕಟ್ಟಿಯವರು ಬಳ್ಳಾರಿ ಬಸಪ್ಪನವರು, ಮಸಗಿ ಮರಿಶಾಂತಪ್ಪನವರು, ಮಲ್ಲಾಬಾದಿ ವೀರಭದ್ರಪ್ಪನವರು, ಅರಗದ ಲಕ್ಷ್ಮಣರಾವ್ ಹೊಯ್ಸಳರು, ಬಿ. ಎಂ. ಶ್ರೀಕಂಠಯ್ಯನವರು, ಮಾಸ್ತಿ ವೆಂಕಟೇಶ ಅಯ್ಯಂಗಾರರು, ಉತ್ತಂಗಿ ಚನ್ನಪ್ಪನವರು, ರಂಗನಾಥ ದಿವಾಕರರು, ಅ. ನ. ಕೃಷ್ಣರಾಯರು— ಇವರುಗಳ ಚಿತ್ರಗಳಿವೆ.

೨೪೦

**ಗ್ರಂಥ : ಶ್ರೀ ಬಸವ ದರ್ಶನ**

**ಪ್ರಭೇದ :** ಭಾಮಿನಿ ಷಟ್ಪದಿ **ನುಡಿ :** ೧೫೧

ಕರ್ತೃ: ಬ್ಯಾಳಿ (ಕಲ್ಯಾಣಪ್ಪ)
ಕಾಲ: ಜ. ೮-೧೦-೧೯೦೨
ಸಂಪಾದಕ: ಶ್ರೀ ಬಸವಲಿಂಗ ಸ್ವಾಮಿಗಳು, ಕಲ್ಲೂರು
ಆಕಾರ: ೨೨×೧೩ ಸೆ.ಮಿ.
ಪುಟ: ೧೮+೩೮=೫೦
ಸಾಲು: ೨೪
ಅಕ್ಷರ: ೧೨-೧೮
ಸ್ಥಳ: ಕಲ್ಲೂರು, ರಾಯಚೂರ ಜಿಲ್ಲೆ
ಪ್ರಕಾಶಕ: ಶ್ರೀ ಬಸವಲಿಂಗ ಸ್ವಾಮಿಗಳು
ಆವೃತ್ತಿ: ಪ್ರಥಮ
ಮಿತಿ: ೨೧-೧೦-೬೪
ಮಾಲೆ: ಶ್ರೀ ಶಿವಯೋಗಿ ಅಡವೀಶ್ವರ ಗ್ರಂಥಮಾಲೆ, ೬

ಸಾರಾಂಶ: ಇದೊಂದು ಸಂಕ್ಷಿಪ್ತ ಬಸವ ಪುರಾಣ.

"ಈ ಕಾವ್ಯದಲ್ಲಿ ಬಸವೇಶನ ನಡೆನುಡಿಗಳು ದರ್ಶಿತವಾಗಿರುವದರಿಂದ ಇದಕ್ಕೆ 'ಬಸವದರ್ಶನ' ಎಂಬ ನಾಮಕರಣವನ್ನು ಮಾಡಲಾಗಿದೆ. ಕಾವ್ಯದ ವಸ್ತು, ರಚನೆ, ಪಾತ್ರ ನಿರೂಪಣೆ, ಸನ್ನಿವೇಶಗಳಲ್ಲಿ ಅಲ್ಪಸ್ವಲ್ಪ ಮಾರ್ಪಾಟು ಮಾಡಿ ಜನರಿಗೆ ಅಭಿರುಚಿ ಹುಟ್ಟುವಂತೆ ನಾಟಕೀಯ ರೂಪವಾಗಿ ಈ ಲಘುಕಾವ್ಯವನ್ನು ರಚಿಸಲಾಗಿದೆ. ಯಾರಿಗೆ ಪದ್ಯಗಳ ಅರ್ಥವಾಗುವದಿಲ್ಲವೋ ಅಂಥವರಿಗೆ ಸುಲಭವಾಗಿ ತಿಳಿಯಲೆಂದು ಬಸವ ಚರಿತೆಯ ಕಥಾಸಾರವನ್ನು ಸರಳ ಭಾಷೆಯಲ್ಲಿ ಬರೆದು ಇದಕ್ಕೆ ಜೋಡಿಸಲಾಗಿದೆ."

—ಲೇಖಕರ 'ಪ್ರಸ್ತಾವನೆ'ಯಿಂದ

## ೨೪೧

## ಗ್ರಂಥ: ಶ್ರೀ ಬಸವ ಬೋಧಾಮೃತ

ಪ್ರಭೇದ: ವಚನ-ಟೀಕೆ
ಕರ್ತೃ: ಬಸವಣ್ಣ
ಕಾಲ: ಸು. ೧೧೬೭

**ಟೀಕಾಕಾರ:** ಹರ್ಡೇಕರ (ಮಂಜಪ್ಪ)
ಜ. ೧೮-೨-೧೮೮೫ ಮ. ೩-೧-೧೯೪೭

**ಸಾಲು:** ೨೩

**ಅಕ್ಷರ:** ೧೫-೨೫

**ಪ್ರಕಾಶಕ:** ಜಿ. ಎಚ್. ಚನ್ನಪ್ಪ, ಬುಕ್ ಸೇಲರ — ಧಾರವಾಡ ಮೃತ್ಯುಂಜಯ ಸ್ವಾಮಿಗಳು, ಮುರುಘಾಮಠ

**ಆವೃತ್ತಿ:** ಪ್ರಥಮ — ದ್ವಿತೀಯ

**ಮಿತಿ:** ೧೯೨೭ — ೧೯೬೨

**ಬೆಲೆ:** ೦-೬-೦ ಆಣೆ — ೦=೭೫ ಪೈಸೆ

**ಮಾಲೆ:** ದ್ವಿತೀಯ ಮುದ್ರಣ: ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ೨೯

**ಸಾರಾಂಶ:** "ಶ್ರೀ ಬಸವಣ್ಣನವರ........೧೦೮ ವಚನಗಳನ್ನು ಮಾತ್ರ ಈ ಚಿಕ್ಕ ಪುಸ್ತಕದಲ್ಲಿ ಅರ್ಥದೊಂದಿಗೆ ವಿವರಿಸಿದ್ದಾಗಿದೆ. ವಚನಶಾಸ್ತ್ರ ವಿಶಾರದರಾದ ಬಾಗಿಲುಕೋಟೆಯ ಶ್ರೀಯುತ ಕಿಣಗಿ ಬಸವಲಿಂಗಪ್ಪಣ್ಣನವರು ಅನೇಕ ವಚನಗಳ ಅರ್ಥವನ್ನು ವಿವರಿಸಿ ಹೇಳಿ, ನನ್ನ ಈ ಅಲ್ಪಪ್ರಯತ್ನಕ್ಕೆ ಕಾರಣರಾದುದರಿಂದ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ."

—ಲೇಖಕರ 'ಪೀಠಿಕೆ'ಯಿಂದ

ದ್ವಿತೀಯ ಮುದ್ರಣದಲ್ಲಿ ಬಸವಣ್ಣನವರ ವಚನಗಳನ್ನು ತಿದ್ದಿ ಡಾ. ಎಂ. ಎಸ್. ಸುಂಕಾಪುರ ಅವರು ಶುದ್ಧಗೊಳಿಸಿದ್ದಾರೆ.

ಶ್ರೀ ಅಥಣಿ ಮುರುಘೇಂದ್ರ ಶಿವಯೋಗಿಗಳ ಹಾಗು ಮಹಮನೆಯ ಮಹಾದಾಸೋಹಿ ಬಸವಣ್ಣನವರ ವರ್ಣಚಿತ್ರಗಳಿವೆ.

---

**ಆಕರ:**

೧. ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ, ಪು. ೩೯೭-೪೪೭ರಲ್ಲಿ ಪುನರ್ಮುದ್ರಣವಾಗಿದೆ

೨. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಭಾ. ೧, ಪು. ೧೦೫-೧೦೬

೨೪೨

ಗ್ರಂಥ: ಶ್ರೀ ಬಸವೇಶ ವಚನ ಸುಧಾ ಭಾ. ೧

ಸಂಪಾದಕ: ಹಿರೇಮಠ (ತೋಟಪ್ಪಯ್ಯ ಶಾಸ್ತ್ರಿ)

ಸ್ಥಳ: ಗದಗ

ಮಿತಿ: ೧೯೩೩ ?

ಬೆಲೆ: ೧–೧೦–೦ ರೂ.

ಸಾರಾಂಶ: ತಮ್ಮಲ್ಲಿ ದೊರೆಯುವ ಗ್ರಂಥಗಳ ಯಾದಿಯಲ್ಲಿ ಶ್ರೀ ಶಾಸ್ತ್ರಿಗಳು ಪ್ರಸಕ್ತ ಗ್ರಂಥವನ್ನು ಸೇರಿಸಿರುವರು.

೨೪೩

ಗ್ರಂಥ: ಶ್ರೀ ಬಸವೇಶ್ವರ ಅಷ್ಟೋತ್ತರ ಶತನಾಮಾವಳಿ

ಪ್ರಭೇದ: ನಾಮಾವಳಿ

ಕರ್ತೃ: ಇಳಕಲ್ಲ ಮಹಾಂತದೇವರು

ಕಾಲ: ಸು. ೧೧೭೫

ಆಕಾರ: ೧೭×೯ ಸೆ. ಮಿ.

ಪುಟ: ೧೦೨

ಸ್ಥಳ: ಶಿವಯೋಗ ಮಂದಿರ

ಮಿತಿ: ೧೯೪೯ ?

ಬೆಲೆ: ೦–೪–೦ ಆಣೆ

ಸಾರಾಂಶ: "ಇದು ಪಾರಾಯಣಕ್ಕೆ ಯೋಗ್ಯವಾಗಿದೆ. ಇದರಲ್ಲಿ ಗ್ರಂಥಕಾರರ ಧರ್ಮಶ್ರದ್ಧೆ ಪ್ರತಿ ಪುಟದಲ್ಲೂ ವ್ಯಕ್ತವಾಗಿದೆ."

—ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

---

ಆಕರ:

೧ ಶರಣ ಸಾಹಿತ್ಯ, ಸಂಪುಟ ೧೧, ಸಂಚಿಕೆ ೧೨, ಪು. ೪೮೦. ಮಾರ್ಚ ೧೯೪೯

೨೪೪

**ಗ್ರಂಥ :** ಶ್ರೀ ಬಸವೇಶ್ವರನ ೨೦ ಶೀಲಗಳು

**ಪ್ರಭೇದ :** ನಿಯಮಾವಳಿ

**ಟೀಕಾಕಾರ :** ಪಾವಟೆ (ಸಿದ್ಧರಾಮಪ್ಪ ಮಂಡಪ್ಪ)

**ಪುಟ :** ೧೨

**ಸಾಲು :** ೨೫

**ಅಕ್ಷರ :** ೨೫

**ಸ್ಥಳ :** ಹುಬ್ಬಳ್ಳಿ

**ಪ್ರಕಾಶಕ :** ಎ. ಆರ್. ಶಿವನಾಗಪ್ಪ, ಬುಕ್ ಸೇಲರ

**ಆವೃತ್ತಿ :** ಪ್ರಥಮ

**ಮಿತಿ :** ೧೯೪೯

**ಸಾರಾಂಶ :** ವೀರಶೈವ ಧರ್ಮದ ಪ್ರಕಾರ ಪ್ರತಿಯೊಬ್ಬ ವೀರಶೈವನು ಆಚರಿಸಬೇಕಾದ ೨೦ ನಡವಳಿಕೆಯ ನಿಯಮಗಳನ್ನು ಕನ್ನಡದಲ್ಲಿ ಕೊಟ್ಟು ಇಂಗ್ಲೀಷಿನಲ್ಲಿ ವಿವರಣೆ ಮಾಡಲಾಗಿದೆ. ಬಸವಣ್ಣನವರು ಈ ೨೦ ಶೀಲಗಳನ್ನು ತಮ್ಮ ನಿತ್ಯ ಜೀವನದಲ್ಲಿ ಪಾಲಿಸುತ್ತಿದ್ದರೆಂದು ಪ್ರತೀತಿ. ಇದಕ್ಕೆ Twenty rules of conduct based upon the teachings of Lord Basava ಎಂದು ಇಂಗ್ಲೀಷಿನಲ್ಲಿ ಶಿರೋನಾಮ ಕೊಡಲಾಗಿದೆ.

೨೪೫

**ಗ್ರಂಥ :** ಶ್ರೀ ಬಸವೇಶ್ವರನ ಕಾಲ

**ಪ್ರಭೇದ :** ಚರಿತ್ರೆ-ವಿಮರ್ಶೆ

**ಕರ್ತೃ :** ಚನ್ನಮಲ್ಲಿಕಾರ್ಜುನ

**ಕಾಲ :** ಜ. ಸು. ೧೯೦೦ ಮ. ೧೯೬೮

**ಆಕಾರ:** ೨೧×೧೩ ಸೆ. ಮಿ.

**ಪುಟ:** ೩೬+೧೬೦=೧೯೬

**ಸಾಲು:** ೩೦

**ಅಕ್ಷರ:** ೨೮

**ಸ್ಥಳ:** ಬ್ಯಾಡಿಗಿ (ಜಿ. ಧಾರವಾಡ)

**ಪ್ರಕಾಶನ:** ಚನ್ನಬಸವಸ್ವಾಮಿಗಳು, ಮುಪ್ಪಿನಸ್ವಾಮಿಮಠ

**ಆವೃತ್ತಿ:** ಪ್ರಥಮ

**ಮಿತಿ:** ೧೯೫೦

**ಬೆಲೆ:** ೨-೮-೦ ರೂ.

**ಸಾರಾಂಶ:** ಬಸವಣ್ಣನವರ ಜೀವನ ಚರಿತ್ರೆಯನ್ನು ಪುರಾಣ, ಇತಿಹಾಸ ಶಾಸನ– ಇತ್ಯಾದಿ ಆಧಾರಗಳ ಮೇಲೆ ಇದರಲ್ಲಿ ವಿವೇಚಿಸಲಾಗಿದೆ. ಮುಖ್ಯವಾಗಿ ಆರು ಪ್ರಕರಣಗಳಿವೆ: (೧) ಬಿಜ್ಜಳ ಹಾಗು ಬಸವೇಶ್ವರ– ಇವರ ಐಕ್ಯ (೨) ಬಸವೇಶ್ವರನ ದೀಕ್ಷೆ, ಮದುವೆ, ಉನ್ನತ ಪದವಿಗೇರಿದ ವಿಷಯಗಳನ್ನು ವಿಮರ್ಶಿಸಿದೆ. (೩) ಬಸವಣ್ಣನ ತಂದೆ, ಉಪನಯನ, ವಿದ್ಯಾಗುರು, ವಿದ್ಯಾಭ್ಯಾಸ ಮುಂತಾದ ಸಂಗತಿಗಳು ಚರ್ಚಿಸಲ್ಪಟ್ಟಿವೆ. (೪) ಬಸವಣ್ಣನವರ ಜನನ ಕಾಲ, ಜನನ ಸ್ಥಳ, ಲಿಂಗಧಾರಣೆ– ಇವುಗಳಿಗೆ ಮೀಸಲಾಗಿಡೆ. (೫) ಇತರ ವಿದ್ವಾಂಸರು ಬಸವಣ್ಣನವರ ಜನನ, ಜೀವನ, ಮಹತ್ಕಾರ್ಯ, ಮರಣ ಮುಂತಾದವುಗಳ ಬಗೆಗೆ ಬರೆದ ಲೇಖನಗಳನ್ನು ವಿಮರ್ಶೆ ಮಾಡಲಾಗಿದೆ. (೬) ಟಿಪ್ಪಣಿ ರೂಪದಲ್ಲಿ ಶಾಸನಾದಿಗಳನ್ನು ವಿವರಿಸಿದೆ.

"ಶ್ರೀ ಚೆನ್ನಮಲ್ಲಿಕಾರ್ಜುನ ಅವರು ಬರೆದ 'ಬಸವೇಶ್ವರನ ಕಾಲ' ಎಂಬ ಗ್ರಂಥವನ್ನು ಆದ್ಯಂತವಾಗಿ ಓದಿದ್ದೇನೆ. ಬಸವೇಶ್ವರನ ಜೀವಿತ ಕಾಲ, ತಾಯಿ-ತಂದೆಗಳು, ಅವರ ಶಿಕ್ಷಣ ಮುಂತಾದ ವಿಷಯಗಳ ಮೇಲೆ ಈ ಗ್ರಂಥದಲ್ಲಿ ಶ್ರೀ ಮಲ್ಲಿಕಾರ್ಜುನರು ಹೊಸ ಬೆಳಕು ಹಾಕಿದ್ದಾರೆಂದು ಹೇಳಲು ನನಗೆ ತುಂಬ ಸಂತೋಷವೆನಿಸುತ್ತದೆ....ಒಟ್ಟಿನಲ್ಲಿ ಈ ಗ್ರಂಥವು ಇತಿಹಾಸಕಾರರಿಗೂ ಸಂಶೋಧಕರಿಗೂ ಬಹು ಉಪಕಾರಿಯಾಗಿದೆ."

—ಪ್ರೊ. ಶಿ. ಶಿ. ಬಸವನಾಳರ ಅಭಿಪ್ರಾಯ, ಪು. ೨೧

## ೨೪೬

**ಗ್ರಂಥ :** **ಶ್ರೀ ಬಸವೇಶ್ವರನ ಚರಿತ್ರೆ**

**ಪ್ರಭೇದ :** ವಿಮರ್ಶೆ-ಚರಿತ್ರೆ

**ಕರ್ತೃ :** ಸಿಂದಗಿ (ಸಿದ್ಧಪ್ಪ ಮರಿಸಿದ್ಧಪ್ಪ)

**ಕಾಲ :** ಸು. ೧೯೦೦

**ಆಕಾರ :** ೨೧×೧೩ ಸೆ. ಮಿ.

**ಪುಟ :** ೬+xvi+೧೧೨=೧೩೪

**ಸಾಲು :** ೨೯

**ಅಕ್ಷರ :** ೨೮

**ಸ್ಥಳ :** ಬಳ್ಳಾರಿ

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧೯೩೭

**ಬೆಲೆ :** ೧-೦-೦ ರೂ.

**ಸಾರಾಂಶ :** "ಗ್ರಂಥದ ಸಾರಾಂಶ: — ಶ್ರೀ ಬಸವೇಶನು ರಾಮಕೃಷ್ಣಾದಿಗಳಂತೆ ನಂದೀಶನ ಅವತಾರಿಯು. ಬಾಗೇವಾಡಿಯಲ್ಲಿ ಕ್ರಿ. ಶ. ೧೧೨೭ರ ಆಶ್ವೀಜ ಬಹುಳ ೪ರಲ್ಲಿ ಹುಟ್ಟಿದನು. ಈತನನ್ನು ಪ್ರಾಜ್ಞರು ವೃಷಭನೆಂದು ಕರೆಯುತ್ತಿದ್ದರು. ರಾಮಕೃಷ್ಣಾಂಜನೇಯಾದಿ ಮಂತ್ರಗಳು ಪುನೀತವಿರುವಂತೆ ಈತನ ಮಂತ್ರವು ಪರಮ ಪುನೀತವು. ಬಸವನ ಗುರು ಸಂಗಮೇಶ್ವರನು ಸಹ ಪರಶಿವನ ಲೀಲಾಮೂರ್ತಿಯು. ಬಸವನಿಗೆ ಅಕ್ಕತಂಗಿಯರಿದ್ದೇಯಿಲ್ಲ. ನೀಲಮ್ಮನಿಗೆ ಮಕ್ಕಳಿದ್ದರೆಂಬುದು ಸುಳ್ಳು. ರಾಜಾದಾಯಗಳ ಮೇಲಿಂದ ಬಸವನು ರಾಜನೀತಿ ವಿಶಾರದನಿದ್ದನು. ಕೃಷ್ಣಮಲಾಪಹಾರಿ ಸಂಗಮವೇ ಐಕ್ಯಸ್ಥಾನವು. ವಿರಾಮಾಶನವನ್ನು ಪಡೆದು ಒಂದು ವರ್ಷ ಬಿಜ್ಜಳನ ಪೂರ್ವವೇ ಕ್ರಿ. ಶ. ೧೧೬೨ರಲ್ಲಿ ಐಕ್ಯನಾದನು. ಬಸವನು ಸಂಸ್ಕೃತದಲ್ಲಿ 'ವಚನ ಭೂಷಣಂ' ಎಂಬ ಗ್ರಂಥವನ್ನು ರಚಿಸಿರುತ್ತಾನೆ. ಕಲ್ಯಾಣದಲ್ಲಿ ೩೬ ಸಾವಿರ ಜಂಗಮರಿದ್ದರು. ಯಾವ ಅಹಿಂಸಾತ್ಮಕ ಕಾಯಕವಾದರೂ ನೀಚವಲ್ಲವೆಂಬ ಭಾವನೆಯ ಮೇಲೆ ಗುಣಕ್ರಿಯಾದಿಗಳಿಗೆ

ಮಹತ್ವವನ್ನು ಕೊಟ್ಟು ನೀಚಜನರಲ್ಲಿ ಸಹಾನುಭೂತಿಯನ್ನು ಕೋರಿ ಅಗ್ರವರ್ಣಿಗಳಾದ ಜೈನ ಬ್ರಾಹ್ಮಣಾದಿಗಳನ್ನು ಲಿಂಗಾಂಗಿಗಳನ್ನಾಗಿ ಮಾಡಿದನು."

—ಗ್ರಂಥಕರ್ತರ ಪ್ರಸ್ತಾವನೆ, ಪು. ೫

ಬಸವಣ್ಣನವರ ಆಯ್ದ ೧೯೩ ವಚನಗಳಿವೆ. ಬಿಜ್ಜಳನ ಚರಿತ್ರೆಯಿದೆ. ಬಾಗೇವಾಡಿ, ಕಲ್ಯಾಣ, ಕೂಡಲಸಂಗಮ ಕ್ಷೇತ್ರಗಳನ್ನು ಸಂದರ್ಶಿಸಿ ಐತಿಹಾಸಿಕ ದೃಷ್ಟಿಯಿಂದ ವರ್ಣಿಸಲಾಗಿದೆ. ಲೇಖಕರು ತಮ್ಮ ಪ್ರತಿಯೊಂದು ವಿಷಯ ವಿವೇಚನೆಯಲ್ಲಿ ಪ್ರಾಚೀನ ಹಾಗು ಅರ್ವಾಚೀನ ಕವಿ ಹಾಗು ವಿಮರ್ಶಕರ ಅಭಿಪ್ರಾಯಗಳನ್ನು ಬಳಸಿಕೊಂಡಿದ್ದಾರೆ.

೨೪೭

**ಗ್ರಂಥ: ಶ್ರೀ ಬಸವೇಶ್ವರನ ತತ್ವಗಳು**

**ಪ್ರಭೇದ:** ವಿಮರ್ಶಾತ್ಮಕ ಪ್ರಬಂಧಗಳು

**ಕರ್ತೃ:** ವಿವಿಧ ಲೇಖಕರು

**ಕಾಲ:** ಸು. ೧೯೦೦

**ಸಂಪಾದಕ:** ಹಳಕಟ್ಟಿ (ಫಕ್ಕೀರಪ್ಪ ಗುರುಬಸಪ್ಪ)
ಜ. ೨-೭-೧೮೮೦ ಮ. ೨೯-೬-೧೯೬೪

**ಆಕಾರ:** ೨೧×೧೩ ಸೆ. ಮಿ.

**ಪುಟ:** ೧೦೧

**ಸ್ಥಳ:** ವಿಜಾಪುರ

**ಪ್ರಕಾಶಕ:** ಸಂಪಾದಕರು

**ಆವೃತ್ತಿ:** ಪ್ರಥಮ

**ಮಿತಿ:** ೧೯೪೯

**ಬೆಲೆ:** ೧-೮-೦ ರೂ.

**ಮಾಲೆ:** ಶಿವಾನುಭವ ಗ್ರಂಥಮಾಲಾ, ௭೧

**ಸಾರಾಂಶ:** ಶ್ರೀಯುತರಾದ ಸಿದ್ಧರಾಮಪ್ಪ ಪಾವಟೆ, ಫ. ಗು. ಹಳಕಟ್ಟಿ, ಕಲ್ಯಾಣಪ್ಪ ಬ್ಯಾಳಿ, ಸ. ಹಾ. ಶಿವಮೂರ್ತಿ, ಬಸವಪ್ಪಾ ಜೀರಿಗೆ, ವೀರಪ್ಪ ಯಗಟಿ ವೀರಪ್ಪ ಬಿಳೇಅಂಗಡಿ- ಇವರು ಕ್ರಮವಾಗಿ ಬರೆದ-

೨೧೬

೧. ಬಸವೇಶ್ವರನ ತತ್ವಗಳು, ೨. ಬಸವೇಶ್ವರನ ನೈತಿಕ ವಿಚಾರಗಳು, ೩. ಬಸವನ ಭಕ್ತಿಯ ಬೆಳಕು, ೪. ಬಸವನ ಬಟ್ಟೆ, ೫. ಕನ್ನಡ ಸಾಹಿತ್ಯಕ್ಕೆ ಬಸವಣ್ಣನವರ ಕಾಣಿಕೆ, ೬. ಬಸವೇಶ್ವರನ ಶಿವಾನುಭವ ಮಂಟಪವು ಮತ್ತು ಅಲ್ಲಿಯ ಚರ್ಚೆಗಳು ೭. ಬಸವನು ವೇದಬಾಹಿರನೇ ?-- ಎಂಬ ಲೇಖನಗಳನ್ನು ಈ ಗ್ರಂಥದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಇವು 'ಶಿವಾನುಭವ' ಪತ್ರಿಕೆಯಲ್ಲಿ ಆಗಾಗ ಪ್ರಕಟವಾದವುಗಳು.

೨೪೪

**ಗ್ರಂಥ :** ಶ್ರೀ ಬಸವೇಶ್ವರನ ವಚನಗಳು

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಹಳಕಟ್ಟಿ (ಫಕ್ಕೀರಪ್ಪ ಗುರುಬಸಪ್ಪ)
ಜ. ೨-೭-೧೮೮೦ ಮ. ೨೯-೬-೧೯೬೪

**ಆಕಾರ :** ೨೧ × ೧೩ ಸೆ. ಮಿ.

**ಪುಟ :** ೧೪೨

**ಸ್ಥಳ :** ಬಿಜಾಪುರ

**ಪ್ರಕಾಶಕ :** ಸಂಪಾದಕ

**ಆವೃತ್ತಿ :** ಪ್ರಥಮ ತೃತೀಯ ಚತುರ್ಥ

**ಮಿತಿ :** ೧೯೨೬ ೧೯೩೪ ೧೯೪೦

**ಬೆಲೆ :** ೧-೦-೦ ರೂ. ೧-೪-೦ ರೂ. ೦೦=೭೩ ಪೈಸೆ.

**ಮಾಲೆ :** ಶಿವಾನುಭವ ಗ್ರಂಥಮಾಲಾ, ೧

**ಸಾರಾಂಶ :** ಬಸವಣ್ಣನವರ ಷಟ್‌ಸ್ಥಳದ ವಚನಗಳ ಸಂಗ್ರಹವಿದು. ಸುಂದರ ಕಾಗದದಲ್ಲಿ ಮುದ್ರಣವಾದ ಬಸವಣ್ಣನವರ ಪೂರ್ಣ ವಚನ ಗ್ರಂಥದಲ್ಲಿ ಇದೇ ಮೊದಲನೆಯದೆನ್ನಬಹುದು.

**ನೋಡು :** ೧. ಬಸವಣ್ಣನವರ ಷಟ್‌ಸ್ಥಳದ ವಚನಗಳು

**ವಿಮರ್ಶೆ :** ೧. ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ ಸಂಪುಟ ೧೫, ಪು. ೨೧೬

೨೪೯

ಗ್ರಂಥ : ಶ್ರೀ ಬಸವೇಶ್ವರನ ವಿಶ್ವಸಂದೇಶ

ಪ್ರಭೇದ : ಚರಿತ್ರೆ–ವಚನ

ಕರ್ತೃ : ಬಸವಣ್ಣ

ಕಾಲ : ಸು. ೧೧೬೭

ಸಂಪಾದಕ : ಹಿರೇಮಠ ( ಕೆ. ಯಂ. ರಾಜಶೇಖರಯ್ಯ )

ಆಕಾರ : ೧೮×೧೨ ಸೆ. ಮಿ.

ಪುಟ : ೧೬

ಸ್ಥಳ : ಬೆಂಗಳೂರು

ಪ್ರಕಾಶಕ : ಶಿವಶರಣ ತತ್ವಪ್ರಚಾರ ಪ್ರೇಮಿಗಳು

ಆವೃತ್ತಿ : ಪ್ರಥಮ

ಮಿತಿ : ೧೯೩೫

ಬೆಲೆ : ೦=೧೨ ಪೈ.

ಸಾರಾಂಶ : ಬಸವಣ್ಣನವರ ವಚನಗಳನ್ನು ಇದರಲ್ಲಿ ಸಂಗ್ರಹಿಸಿರುವವಾಗಿ ತಿಳಿದಿದೆ.

---

ಆಕರ :

೧. ಕಲಕತ್ತಾ ರಾಷ್ಟ್ರೀಯ ಗ್ರಂಥಭಂಡಾರದಲ್ಲಿದೆ.

೨೫೦

ಗ್ರಂಥ : ಶ್ರೀ ಬಸವೇಶ್ವರ ನಾಟಕ

ಪ್ರಭೇದ : ನಾಟಕ

ಕರ್ತೃ : ಬೆಳ್ಳಾವೆ (ನರಸಿಂಹ ಶಾಸ್ತ್ರಿ)

ಕಾಲ : ಸು. ೧೯೨೫

ಆಕಾರ : ೧೮×೧೨ ಸೆ. ಮಿ.

ಪುಟ : ೧೨೦

೨೧೮

**ಮಿತಿ :** ೧೯೫೦ ?

**ಬೆಲೆ :** ೧-೮-೦ ರೂ.

**ಸಾರಾಂಶ:** ಬಸವಣ್ಣನವರ ಚರಿತ್ರೆಯನ್ನಾಧರಿಸಿ ಬರೆಯಲ್ಪಟ್ಟ ನಾಟಕವಿದು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ನಾಟಕದಲ್ಲಿ ಕಂಡುಬರುವ ಕೆಲವು ದೋಷಗಳನ್ನು ತಮ್ಮ 'ಶರಣ ಸಾಹಿತ್ಯ' ಪತ್ರಿಕೆಯಲ್ಲಿ ಎತ್ತಿ ತೋರಿಸಿರುವರು.

---

**ಆಕರ :**

೧. ಶರಣ ಸಾಹಿತ್ಯ, ಸಂಪುಟ ೧೪, ಸಂಚಿಕೆ ೧, ಪು. ೪೭. ಎಪ್ರಿಲ್ ೧೯೫೧

೨೫೧

**ಗ್ರಂಥ :** ಶ್ರೀ ಬಸವೇಶ್ವರ ಮಹಾರಾಜಕೀ ಜಯ, ಶ್ರೀ ಬಸವೇಶ್ವರ ಜಯಂತಿ

**ಪ್ರಭೇದ :** ಭಾಮಿನಿ ಷಟ್ಪದಿ

**ಕರ್ತೃ :** ಸುಣಧೋಳಿ (ಮಲ್ಲಿನಾಥ) ಮತ್ತು ಕುರಗುಂದ (ಮಡಿವಾಳೇಶ್ವರಸುತ)

**ಕಾಲ :** ಸು. ೧೯೦೦

**ಆಕಾರ :** ೧೭·೫×೧೨ ಸೆ. ಮಿ.

**ಪುಟ :** ೧೨

**ಸಾಲು :** ೨೪

**ಅಕ್ಷರ :** ೧೨-೧೮

**ಸ್ಥಳ :** ಬೆಳಗಾಂವಿ

**ಪ್ರಕಾಶಕ :** ವ್ಹಿ. ಬಿ. ದೇಶಪಾಂಡೆ, ಮಾರುತಿಗಲ್ಲಿ ಮನೆ ನಂ. ೧೫೩೭

**ಆವೃತ್ತಿ :** ಪ್ರಥಮ

**ಮಿತಿ :** ಬಸವ ಜಯಂತಿ ೧೯೨೮

**ಮಾಲೆ :** ಆನಂದ ಮಾಲಾ, ೧

**ಸಾರಾಂಶ :** 'ಶ್ರೀ ಬಸವೇಶ್ವರ ಮಹಾರಾಜಕೀ ಜಯ'-ಇದರಲ್ಲಿಯ ಒಂದೊಂದು ವರ್ಣವು ಕ್ರಮವಾಗಿ ಪ್ರತಿಯೊಂದು ಷಟ್ಪದಿಯ ಪ್ರಾರಂಭದಲ್ಲಿ ಬರುವಂತೆ ಬಸವಣ್ಣನವರನ್ನು ವರ್ಣಿಸುವ ೧೩ ನುಡಿಗಳನ್ನು ಶ್ರೀ ಸುಣಧೋಳಿಯವರು 'ಕವಿ ಮಲ್ಲಿನಾಥ' ಎಂಬ ಕಾವ್ಯನಾಮದಲ್ಲಿ ಬರೆದಿರುವರು. ಇವೇ ಪದ್ಯಗಳು 'ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ' ಈ ಗ್ರಂಥದ ಅಂತ್ಯಭಾಗದಲ್ಲಿ 'ಮಲ್ಲಿನಾಥ'ರ ಹೆಸರಿನಲ್ಲಿ ಪ್ರಕಟವಾಗಿವೆ.

'ಶ್ರೀ ಬಸವೇಶ್ವರ ಜಯಂತಿ'-ಇದರಲ್ಲಿಯ ಒಂದೊಂದು ಅಕ್ಷರವು ಪ್ರತಿಯೊಂದು ಷಟ್ಪದಿಯ ಆದಿಯಲ್ಲಿ ಬರುವಂತೆ ೯ ನುಡಿಗಳನ್ನು ಬರೆದು ೧೦ನೆಯ ಪದ್ಯದಲ್ಲಿ ಮಂಗಲಮಾಡಲಾಗಿದೆ. ಇವು ಸಹ ಬಸವ ಮಹಿಮೆಯನ್ನು ಕುರಿತಾಗಿವೆ. ಇದನ್ನು ಮಡಿವಾಳೇಶ್ವರ ಸುತ ಕುರುಗುಂದ ಅವರು ಬರೆದಿದ್ದಾರೆ.

ಆಮೇಲೆ ಸುಣಧೋಳಿಯವರು ರಚಿಸಿದ ಮಂಗಲಪದವಿದೆ. ಅಂತ್ಯದಲ್ಲಿ ಬಸವಣ್ಣನವರ ೩೨ ವಚನಗಳಿವೆ.

೨೫೨

**ಗ್ರಂಥ :** **ಶ್ರೀ ಬಸವೇಶ್ವರರ ಚರಿತ್ರೆಯ ಮೇಲೆ ಹೊಸಬೆಳಕು**

**ಪ್ರಭೇದ :** ಸಂಶೋಧನಾತ್ಮಕ ಚರಿತ್ರೆ

**ಕರ್ತೃ :** ಪಾಟೀಲ (ಮಲ್ಲನಗೌಡಾ ಪಿ.)

**ಆಕಾರ :** ೨೨×೧೪ ಸೆ. ಮಿ.

**ಪುಟ :** vi + ೧೫೦ = ೧೫೬

**ಸಾಲು :** ೨೫

**ಅಕ್ಷರ :** ೨೫

**ಸ್ಥಳ :** ಬೆಳಗಾಂವಿ

**ಪ್ರಕಾಶಕ :** ಅಖಿಲ ಭಾರತ ವೀರಶೈವ ಸಂಘ

**ಆವೃತ್ತಿ :** ಪ್ರಥಮ

**ಮಿತಿ :** ೫-೩-೧೯೬೬

**ಬೆಲೆ :** ೨=೦೦ ರೂ.

**ಸಾರಾಂಶ :** ಇದರಲ್ಲಿ ಬಸವೇಶ್ವರರ ಜೀವನ ಚರಿತ್ರೆಯನ್ನು ಸಂಶೋಧನ ದೃಷ್ಟಿಯಿಂದ ಬರೆದ ಒಟ್ಟು ೧೨ ಪ್ರಕರಣಗಳು ಅಡಕವಾಗಿವೆ.

"ಬಸವಣ್ಣನವರ ಅಧಿಕೃತ ಜೀವನ ಚರಿತ್ರೆಯ ಅವಶ್ಯಕತೆ, ಅವರ ಬಗೆಗಿರುವ ವಾದಗ್ರಸ್ತ ಸಂಗತಿಗಳು, ಬಸವೇಶ್ವರ ಜನ್ಮಕಾಲ, ಜನ್ಮಸ್ಥಳ, ತಾಯ್ತಂದೆಗಳು, ಉಪನಯನ ನಿರಸನ, ಸಂಗಮ ಕ್ಷೇತ್ರ ನಿವಾಸ, ಕಪ್ಪಡಿಯಿಂದ ಕಲ್ಯಾಣಕ್ಕೆ ಹೋದ ಕಾಲ, ಅವರ ಆಂದೋಲನದ ನಿಜಸ್ವರೂಪ, ಮತ್ತು ತತ್ಪೂರ್ವಕಾಲದ ಧಾರ್ಮಿಕ, ಸಾಮಾಜಿಕ ಪರಿಸ್ಥಿತಿ,ಬಸವಣ್ಣನವರು ಬಿಜ್ಜಳನ ಪ್ರಧಾನ ಮಂತ್ರಿಗಳೇ ? ಬಿಜ್ಜಳನು ಜೈನನಲ್ಲ ಶೈವ, ಕಸಪಯ್ಯ ನಾಯಕನು ಬಸವೇಶ್ವರನಲ್ಲ, ಬಿಜ್ಜಳನ ಕೊಲೆ,ಅದಕ್ಕೆ ಕಾರಣರಾದವರು ಮತ್ತು ಕಾರಣಗಳು,ಬಿಜ್ಜಳನ ಕೊಲೆಯ ಹಾಗು ಬಸವಣ್ಣನವರು ಲಿಂಗೈಕ್ಯರಾದ ಕಾಲ ನಿರ್ಣಯ ಇತ್ಯಾದಿ ವಿಷಯಗಳಿದ್ದು ಈ ಎಲ್ಲ ಅಂಶಗಳು ವಿಸ್ತೃತವಾಗಿಯೂ, ಸಕ್ರಮವಾಗಿಯೂ ಪ್ರತಿಪಾದಿಸಲ್ಪಟ್ಟಿವೆ."

—ಶ್ರೀ ವಿ. ಶಿವಾನಂದರ ವಿಮರ್ಶೆ, 'ಪ್ರಪಂಚ' ೧೦-೪-೬೬

"ಬಸವಣ್ಣನವರ ಜೀವನ ಚರಿತ್ರೆಯೊಳಗಿನ ಕೆಲವು ಮುಖ್ಯ ಮತ್ತು ಅವರ ಚರಿತ್ರೆಯನ್ನು ರೂಪಿಸುವಂಥ ವಾದಗ್ರಸ್ತ ಸಂಗತಿಗಳನ್ನು ವಿವೇಚಿಸಿ, ಅವುಗಳ ಬಗ್ಗೆ ನನ್ನ ಅಭಿಪ್ರಾಯಗಳನ್ನು ಈ ಹೊತ್ತಿಗೆಯಲ್ಲಿ ವ್ಯಕ್ತಪಡಿಸಿದ್ದೇನೆ."

—ಲೇಖಕರ 'ವಿಜ್ಞಪ್ತಿ'ಯಿಂದ ಪು. ೧೪೦

೨೫೩

## ಗ್ರಂಥ : ಶ್ರೀ ಬಸವೇಶ್ವರರು

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಮೈಸೂರು ಸರಕಾರ

**ಸಾರಾಂಶ :** ಬಸವಣ್ಣನವರ ಎಂಟನೆಯ ಶತಮಾನೋತ್ಸವದ ಸವಿನೆನಪಿಗಾಗಿ ಬೆಂಗಳೂರಿನ 'ಬಸವ ಸಮಿತಿ' ಯವರ ಆಶ್ರಯದಲ್ಲಿ ಸಿದ್ಧಪಡಿಸಿದ ಈ ಗ್ರಂಥವನ್ನು ಮೈಸೂರು ಸರಕಾರದವರು ಪ್ರಕಟಮಾಡಲು ಒಪ್ಪಿಕೊಂಡಿರುವರು. ಡಿಸೆಂಬರ ೧೯೬೭ರ ವೇಳೆಗೆ ಬೆಳಕಿಗೆ ಬರುವ ನಿರೀಕ್ಷೆಯಿದೆ.

ಬಸವಣ್ಣನವರ ಜೀವನದ ವಿವಿಧ ಮುಖಗಳನ್ನು ಪ್ರಕಟಪಡಿಸುತ್ತದೆ.

೨೫೪

**ಗ್ರಂಥ:** ಶ್ರೀ ಬಸವೇಶ್ವರರು ಮತ್ತು ಅವರ ಸಮಕಾಲದವರು

**ಪ್ರಭೇದ:** ಚರಿತ್ರೆ

**ಕರ್ತೃ:** ಜಯರಾಮ್ (ಎ. ಆರ್.)

**ಅನುವಾದಕ:** ರಾಜರತ್ನಂ (ಜಿ. ಪಿ.) ಸು. ಜ. ೧೯೦೫

**ಆಕಾರ:** ೧೮·೫ × ೧೨·೫ ಸೆ. ಮಿ.

**ಪುಟ:** xii + ೧೨೮ = ೧೪೦

**ಸಾಲು:** ೨೮

**ಅಕ್ಷರ:** ೨೫

**ಸ್ಥಳ:** ಸಿದ್ಧಗಂಗಾ (ತುಮಕೂರ ಜಿಲ್ಲೆ)

**ಪ್ರಕಾಶಕ:** ಶ್ರೀ ಶಿವಕುಮಾರಸ್ವಾಮಿಗಳು, ಶ್ರೀ ಸಿದ್ಧಗಂಗಾಮಠ

**ಆವೃತ್ತಿ:** ಪ್ರಥಮ

**ಮಿತಿ:** ೧೯೫೨

**ಬೆಲೆ:** ೧=೦೦ ರೂ.

**ಸಾರಾಂಶ:** ತಮಿಳು ಭಾಷೆಯಲ್ಲಿರುವ 'ಬಸವ ಪುರಾಣಮ್' ಗ್ರಂಥದ ಆಧಾರದ ಮೇಲೆ ಬರೆಯಲ್ಪಟ್ಟ SRI BASAVESWAR AND HIS CONTEMPORARIES ಎಂಬ ಆಂಗ್ಲ ಗ್ರಂಥದ ಅನುವಾದವಿದು.

"ಶ್ರೀ ಬಸವೇಶ್ವರರ ಜೀವನ ಚರಿತ್ರೆಯನ್ನು ಸಂಗ್ರಹವಾಗಿ ಕೊಡಬೇಕೆಂದು ಈ ಪುಟಗಳಲ್ಲಿ ಪ್ರಯತ್ನಿಸಲಾಗಿದೆ... ಆ ಪುರಾಣದಲ್ಲಿ ಇರುವಂತೆಯೆ, ಅದೇ ಕ್ರಮದಲ್ಲಿ, ಭಕ್ತರ ಜೀವನಗಳನ್ನು ಇಲ್ಲಿ ಕೊಟ್ಟಿದೆ. ಶ್ರೀ ಬಸವೇಶ್ವರರ ಸಮಕಾಲದವರಲ್ಲಿ ಹೆಚ್ಚು ಪ್ರಸಿದ್ಧರಾದವರ ಬಹು ಮುಖ್ಯವಾದ ಅಥವಾ ಹೆಚ್ಚು ವಿಶಿಷ್ಟವಾದ ಲಕ್ಷಣವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದೆ. ಪ್ರಸ್ತಾಪಿಸಿರುವ ವ್ಯಕ್ತಿಯ ಆಧ್ಯಾತ್ಮಿಕ ಮಹತಿಯನ್ನೂ ಉನ್ನತಿಯನ್ನೂ ತೋರಿಸುವ ಕಿರುನೋಟಗಳನ್ನು ಇಲ್ಲಿ ಕಾಣಬಹುದು."

—ಶ್ರೀ ಎ.ಆರ್.ಜಯರಾಮ ಅವರ 'ಇಂಗ್ಲೀಷ ಮೂಲದ ಮುನ್ನುಡಿ'ಯಿಂದ

ಕೊನೆಯ ಅನುಬಂಧಗಳಲ್ಲಿ 'ಲಿಂಗ', 'ವಿಭೂತಿ', 'ರುದ್ರಾಕ್ಷಿ', ಮತ್ತು 'ಶ್ರೀ ಪಂಚಾಕ್ಷರ' ಇವುಗಳ ವಿಶೇಷಾರ್ಥವನ್ನು ವಿವರಿಸಿದೆ.

**ನೋಡು :** ೧. SRI BASAWESWRA AND HIS CONTEMPORARIES

೨೫೫

**ಗ್ರಂಥ :** ಶ್ರೀ ಬಸವೇಶ್ವರ ವಚನ ಪ್ರದೀಪ

**ಸ್ಥಳ :** ಬೆಂಗಳೂರು

**ಮಿತಿ :** ೧೧-೫-೧೯೬೭

**ಸಾರಾಂಶ :** ಈ ಗ್ರಂಥವನ್ನು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲ ಪತಿಗಳಾದ ಶ್ರೀ ವಿ. ಕೃ. ಗೋಕಾಕ ಅವರು ಬಸವ ಜಯಂತಿಯಂದು ಉದ್ಘಾಟನೆ-ಗೊಳಿಸಿದರು.

—ಸಂಯುಕ್ತ ಕರ್ನಾಟಕದ ಸುದ್ದಿ

೨೫೬

**ಗ್ರಂಥ :** ಶ್ರೀ ಬಸವೇಶ್ವರ ವಚನ ಸಂಗೀತ : ಸ್ವರ ಪ್ರಸ್ತಾರ ಸಹಿತ

**ಪ್ರಭೇದ :** ವಚನ-ಸಂಗೀತ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಯೋಜಕ :** ಶಿವಪ್ಪ (ಬಿ. ಎಂ.)

**ಆಕಾರ :** ೧೮×೧೨ ಸೆ. ಮಿ.

**ಪುಟ :** iii + ೩೫ = ೩೮

**ಸಾಲು :** ೨೦

**ಅಕ್ಷರ :** ೧೫

**ಸ್ಥಳ :** ಕಲ್ಯಾಣ ಭವನ, ಚಿಕ್ಕಪೇಟೆ ಬೆಂಗಳೂರು — ೨

**ಪ್ರಕಾಶಕ :** ಮಾ. ನಂ. ಶಿವಪ್ಪಸಹೋದರು

**ಆವೃತ್ತಿ :** ಪ್ರಥಮ

**ಮಿತಿ :** ೧೯೫೦

**ಬೆಲೆ :** ೧–೦–೦ ರೂ.

**ಮಾಲೆ :** ವೀರಶೈವ ಸಾಹಿತ್ಯ ಭಾಂಡಾರ ಗ್ರಂಥಮಾಲೆ, ೧೨

**ಸಾರಾಂಶ :** ಇದರಲ್ಲಿ ಬಸವಣ್ಣನವರ ೨೫ ವಚನಗಳಿಗೆ ಕರ್ನಾಟಕ ಸಂಗೀತದನುಸಾರ ಸ್ವರ ಸಂಯೋಜನೆ ಹಾಕಲಾಗಿದೆ.

"ಶ್ರೀಯುತರು ಈ ವಚನಗಳಿಗೆ ಸಂಗೀತಶಾಸ್ತ್ರ ನಿಯಮಗಳನ್ನನುಸರಿಸಿಯೂ, ಪ್ರತಿಯೊಬ್ಬ ಸಂಗೀತಗಾರರೂ ತಮ್ಮ ತಮ್ಮ ಮನೋಧರ್ಮಕ್ಕನುಗುಣವಾಗಿ ಸ್ವಲ್ಪ ಸ್ವಾತಂತ್ರ್ಯವಹಿಸಿ ಸ್ವರ ನಿರ್ದೇಶ ಮಾಡಲು ಅವಕಾಶವಿರುವಂತೆಯೂ, ಸ್ವರ ಜೋಡಣೆ ಮಾಡಿದ್ದಾರೆ. ಈ ರಾಗಗಳೆ ಕಡೆಯವು; ಈ ಸ್ವರ ಪ್ರಸ್ತಾರಗಳೇ ಖಚಿತವೆಂಬ ಹಟ ಅವರಿಗಿಲ್ಲ.... ವಚನಗಳ ಸಂಗೀತ ಸ್ವರೂಪವನ್ನು ಪ್ರಚುರಗೊಳಿಸಬೇಕೆಂಬುದೇ ಈ ಸಂಯೋಜನೆಯ ಪ್ರಕಟಣೆಯ ಉದ್ದೇಶ."

—ಮಾ. ನಂ. ಶಿವಪ್ಪನವರ 'ಅರಿಕೆ'ಯಿಂದ

೨೫ ವಚನಗಳಿಗೆ ೨೫ ವಿಧ ರಾಗಗಳನ್ನು ಹೇಳಿದೆ. ಪ್ರಾರಂಭದಲ್ಲಿ 'ನಾದ-ಲೋಲ ಭಕ್ತಿಯೋಗಾಚಾರ್ಯ ಶ್ರೀ ಬಸವೇಶ್ವರ'ರ ಭಾವಚಿತ್ರವಿದೆ.

೨೫೭

**ಗ್ರಂಥ :** **ಶ್ರೀ ಬಸವೇಶ್ವರ ಸಟೀಕಾ**

**ಬೆಲೆ :** ೧–೦–೦ ರೂ.

**ಸಾರಾಂಶ :** ಎ. ಆರ್. ಶಿವನಾಗಪ್ಪನವರು ತಮ್ಮ ವಾಗ್ವಿಲಾಸ ಬುಕ್ ಡಿಪೋದಲ್ಲಿ ಸಿಗತಕ್ಕ ಗ್ರಂಥಗಳ ಸೂಚಿಯನ್ನು ೧೯೨೭ ರಲ್ಲಿ ಪ್ರಕಟವಾಗಿರಬಹುದಾ-ದ 'ಶ್ರೀ ಜಗದ್ಗುರು ಸಿದ್ಧೇಶ್ವರ ಸ್ವಾಮಿಗಳವರ ಚರಿತ್ರೆ' ಎಂಬ ಗ್ರಂಥದ ಕೊನೆಯ ಪುಟದಲ್ಲಿ ಕೊಟ್ಟಿರುವರು. ಆದರಲ್ಲಿ ಈ ಗ್ರಂಥದ ನಾಮ ನಿರ್ದೇಶನ ಮಾಡಿದೆ. ವಚನಗಳಿಗೆ ಟೀಕೆ ಇರಬಹುದೇ ?

೨೫೮

**ಗ್ರಂಥ :** ಶ್ರೀ ಭಗವಾನ್ ಬಸವೇಶ್ವರ ಸಂದೇಶ

**ಪ್ರಭೇದ :** ಉಪದೇಶಾತ್ಮಕ ಪ್ರಬಂಧ

**ಕರ್ತೃ :** ಶ್ರೀ ಸಂಗನ ಬಸವ ಮಹಾಶಿವಯೋಗಿಗಳು

**ಕಾಲ :** ಜ. ಸು. ೧೯೦೦

**ಆಕಾರ :** ೧೮ × ೧೨ ಸೆ. ಮಿ.

**ಪುಟ :** ೨ + ೪ + ೫೫ = ೬೧

**ಸಾಲು :** ೨೪

**ಅಕ್ಷರ :** ೨೫

**ಸ್ಥಳ :** ಬಂಥನಾಳ

**ಪ್ರಕಾಶಕ :** ಶಿವಾನುಭವ ಮಂಟಪ

**ಆವೃತ್ತಿ :** ಪ್ರಥಮ

**ಮಿತಿ :** ೧೦-೩-೧೯೬೭

**ಬೆಲೆ :** ೦-೦ = ೬೦ ಪೈಸೆ.

**ಮಾಲೆ :** ಅನುಭಾವ ವಿಚಾರ ಮಂದಿರ ಕುಸುಮ, ೮

**ಸಾರಾಂಶ :** ವಚನಗಳನ್ನಾಧರಿಸಿ ಬಸವಣ್ಣನವರ ತತ್ವಬೋಧೆಯನ್ನು ವಿವರಿಸಲಾಗಿದೆ. ಗ್ರಂಥಕರ್ತೃಗಳು 'ಪ್ರಸ್ತಾವನೆ' ಯಲ್ಲಿ ಹೇಳಿದ ಮಾತುಗಳು ಇಡೀ ಗ್ರಂಥದ ಸಾರದಂತಿವೆ.

೨೫೯

**ಗ್ರಂಥ :** ಶ್ರೀ ಭಕ್ತಿ ಭಂಡಾರಿ ಬಸವಣ್ಣನವರ ಅಮೃತವಾಣಿ

**ಪ್ರಭೇದ :** ವಚನ-ಟಿಪ್ಪಣಿ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಟೀಕಾಕಾರ :** ವಾಲಿ (ಗಂಗಪ್ಪ ವೀರಪ್ಪ) ಜ. ೧೯೧೨

ಆಕಾರ: ೧೫×೯ ಸೆ ಮಿ.

ಪುಟ: ೪+೧೬=೨೦

ಸಾಲು: ೧೭

ಅಕ್ಷರ: ೭-೨೦

ಸ್ಥಳ: ಹುಬ್ಬಳ್ಳಿ

ಪ್ರಕಾಶಕ: ಶ್ರೀ ಅಂದಾನಪ್ಪ ವೀರಬಸಪ್ಪ ಕುಂದರಗಿ

ಆವೃತ್ತಿ: ಪ್ರಥಮ

ಮಿತಿ: ಬಸವ ಜಯಂತಿ ೨೮-೪-೧೯೬೦

ಸಾರಾಂಶ: ಇದರಲ್ಲಿ ಬಸವಣ್ಣನವರ ೧೬ ವಚನಗಳಿಗೆ ವಿವರಣೆಯಿದೆ. "ಒಂದೊಂದು ವಚನದ ಬೆಳಕನ್ನು ಎತ್ತಿ ತೋರುವಂತೆ ಆ ಆ ವಚನದ ಮೊದಲಲ್ಲಿ ಸಾರವತ್ತಾಗಿ ಹೇಳಿದ ಮಾತುಗಳು ಈ ಪುಸ್ತಕದ ವೈಶಿಷ್ಟ್ಯವನ್ನು ವ್ಯಕ್ತಗೊಳಿಸು-ವಂತಿವೆ."

— ಡಿ. ಎಸ್. ಕರ್ಕಿ ಅವರ 'ಮುನ್ನುಡಿ'ಯಿಂದ

ಬಸವಣ್ಣನವರ ಸುಂದರ ಭಾವಚಿತ್ರವಿದೆ.

೨೬೦

**ಗ್ರಂಥ: ಷಟ್‌ಸ್ಥಲದ ವಚನ**

**ಪ್ರಭೇದ:** ವಚನ-ಟೀಕೆ **ಸಂಖ್ಯೆ:** ೯೫೭

**ಕರ್ತೃ:** ಬಸವಣ್ಣ

**ಕಾಲ:** ಸು. ೧೧೬೭

**ಆಕಾರ:** ಕಾಗದ ೨೮×೧೫ ಸೆ. ಮಿ.

**ಪತ್ರ:** ೨೫೩ (೫೦೬ ಪುಟ)

**ಅಕ್ಷರ:** ೪೧

**ಸಾಲು:** ೧೦

**ಸಾರಾಂಶ:** ಬಸವಣ್ಣನವರ ೯೫೭ ಆದ್ಯಂತ ವಚನಗಳನ್ನು ಷಟ್‌ಸ್ಥಲಾ-ನುಕ್ರಮವಾಗಿ ಬರೆಯಲಾಗಿದೆ. ನಡುನಡುವೆ ಕಠಿಣ ವಚನಗಳಿಗೆ ಟೀಕೆಯನ್ನು

ಬರೆಯಲಾಗಿದೆ. ಶಬ್ದಶಃ ಅರ್ಥವನ್ನು ಹೇಳದೆ ಒಂದೊಂದು ವಾಕ್ಯಕ್ಕೆ ಅರ್ಥವನ್ನು ವಿವರಿಸಲಾಗಿದೆ. ಸುಲಭವಾದ ವಚನಗಳ ಕೊನೆಗೆ "ಕಾಣಬಂದ ಅರ್ಥ" ಎಂದು ಹೇಳಲಾಗಿದೆ. ಟೀಕೆ ಸಂಕ್ಷೇಪವಾಗಿದೆ. ಟೀಕಾಕಾರನಾರೋ ತಿಳಿಯದು. ಹಸ್ತ-ಪ್ರತಿಯ ಮಿತಿ ಶಾಲಿವಾಹನ ಶಕೆ ೧೭೬೪ ಎಂದಿದೆ.

**ಆದಿ :**

ಶ್ರೀ ಗುರು ಮುರಿಗೇಂದ್ರಾಣಿ ವೀರಾಘೋಽಯಂನಮಃ ಬಸವರಾಜ ದೇವರ ಷಟ್ಸ್ಥಲದ ವಚನ ‖ ಭಕ್ತಿ ಸ್ಥಲ ‖ ಪಿಂಡಸ್ಥಲ ‖ ಆದ್ಯರುವೇದ್ಯರು ಸಾಧ್ಯರು........

**ಅಂತ್ಯ :**

ಅಂತು ಸ್ಥಲ ೬ ಕ್ಕಂ ಮಿ ೩೬ ಕ್ಕಂ ಸೇರಿಸಿದ ವಚನ ೯೫೭ ‖ ಕ್ಕಂ ಮಂಗಳ ಮಹಾ ಶ್ರೀ ಶ್ರೀ ‖

**ಬಸವೇಶ್ವರನ ವಚನದೊಳಗೆ ಕಠಿಣವಾದ ಸಂಕ್ಷೇಪವಾದ ವಚನಕ್ಕೆ ಟಿಪ್ಪಣವಾಗಿ ಲಿಂಗಾಂಗ ಸಾಮರಸ್ಯವನ್ನು** ಬಲ್ಲ ಷಟ್‌ಸ್ಥಲ ಸಮ್ಯ ಜ್ಞಾನ-ಮಹಾನುಭಾವಿಗಳು ನಿರೂಪಿಸಿದುದು ಲಿಖಿಸಿ ಸಮಾಪ್ತಿಯಾಯಿತ್ತು । ಸಮಾಪ್ತ ಮಂಗಳ ಮಸ್ತು । ಶುಭಮಸ್ತು ಶೋಭನಮಸ್ತು । ಆಯುಷ್ಯಮಸ್ತು । ಶ್ರೀ ರಸ್ತು । ಯೀವಚನ ಪುಸ್ತಕ ಮುಗಿದದು ೧೭೬೪ ಶುಭಕೃತು ನಾಮ ಸಂವತ್ಸರ ಕಾರ್ತಿಕ ಬಹುಳ ತದಿಗಿ ರವಿವಾರದೊಳಗೆ ಸಮಾಪ್ತಿಯಾಯಿತ್ತು ।

**ನೋಡು :** ೧. ಷಟುಸ್ಥಲದ ವಚನಗಳು
೨. ಬಸವೇಶ್ವರ ದೇವರ ವಚನ ಸಾರಾರ್ಥ
೩. ಬಸವನ ಷಟ್ಸ್ಥಲದ ಬೆಡಗಿನ ವಚನದ ಟೀಕೆ
೪. ಶ್ರೀ ಬಸವಣ್ಣನವರ ಷಟ್‌ಸ್ಥಳದ ವಚನಗಳು
೫. ಸಟೀಕಾ ಬಸವಣ್ಣನವರ ವಚನಗಳು

---

**ಆಕರ:**

೧. ಬಸವ ಭಂಡಾರ ಟೀಕಾ ಗ್ರಂಥ ನಂ.೨
೨. Descriptive Catalogue of Manuscripts in the K. R. I-Dharwar vol. S. No. 65 Reg 1205. p. 126.
೩. ಕರ್ನಾಟಕ ಕವಿಚರಿತೆ ಭಾ. ೨, ಪು. ೩೯೭

೨೬೧

**ಗ್ರಂಥ : ಷಟ್ಸ್ಥಲದ ವಚನಗಳು**

**ಪ್ರಭೇದ :** ವಚನ–ಟೀಕೆ **ಸಂಖ್ಯೆ :** ೯೫೮

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಆಕಾರ :** ಕಾಗದ. ೩೨×೧೦

**ಪತ್ರ :** ೪೦೧ (೮೦೨ ಪುಟ)

**ಸಾಲು :** ೬ ರಿಂದ ೯

**ಅಕ್ಷರ :** ೭೦

**ಸಾರಾಂಶ :** ಇದರಲ್ಲಿ ವಚನಗಳು ಷಟ್‌ಸ್ಥಲಾನುಸಾರವಾಗಿವೆ. 'ಮೂಲ-ಸ್ಥಲಗಳು ಆರು ಅಂತರ ಸ್ಥಲಗಳು ಮೂವತ್ತಾರು ಅಂತು ನಲವತ್ತೆರಡು ಸ್ಥಲಗಳು ಸಂಪೂರ್ಣ' ಎಂದು ವಿಷಯಾನುಕ್ರಮಣಿಕೆಯ ಕೊನೆಯಲ್ಲಿ ಬರೆದಿದೆ. ಒಟ್ಟು ೯೫೮ ವಚನಗಳಿಗೆ ಟೀಕೆಯಿದೆ. ಒಂದೊಂದು ವಚನಕ್ಕೆ ಎರಡು, ಮೂರು ದೃಷ್ಟಿ-ಕೋನಗಳಿಂದ ಅರ್ಥಬರೆಯಲಾಗಿದೆ. ಟೀಕಾಕಾರನಾರೋ ತಿಳಿಯದು. ನಕಲು ಮಾಡಿದ್ದು ೧೯೧೩ ರಲ್ಲಿ.

**ಆದಿ :**

ಶ್ರೀ ಗುರು ಬಸವಲಿಂಗಾಯನಮಃ । ಶ್ರೀ ಬಸವರಾಜದೇವರು ನಿರೂ-
ಪಿಸಿದ ಷಟ್‌ಸ್ಥಲ ವಚನ ಬರಿಯುವದಕ್ಕೆ ಶುಭಮಸ್ತು ॥
ನಿರ್ವಿಘ್ನಮಸ್ತು । ಪ್ರಥಮದಲ್ಲಿ ಪಿಂಡಸ್ಥಲ ।
ಉದಕದೊಳಗೆ ಬೈಚಿಟ್ಟ ಬಯಕಿಯ ಕಿಚ್ಚಿನಸ್ತೆಯಿದ್ದಿತ್ತು ।
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು ।
ನಮ್ಮ ಕೂಡಲ ಸಂಗಮ ದೇವರ ನಿಲವು ಕಂನೆಯ ಸ್ನೇಹದಂತೆಯಿದ್ದಿತ್ತು

॥ ಟೀ ॥ ಆವುದಾನೊಂದು ಶಾಸ್ತ್ರವನೋದಬೇಕಾದರೂ ಮನದಲ್ಲಿ
ಶಿವಾನು ಭಾವವನು ಮಾಡಬೇಕಾದರೂ ಗುರು ನಮಸ್ಕಾರವೆ
ಮುಖ್ಯವೆಂದು ಆವುದಾನೊಂದು ಶಾಸ್ತ್ರಉದ್ಧಾರ ಮಾಡುತ್ತಿದ್ದಾರು.
ಅದೆಂತೆಂದಡೆ : ಶ್ರೀ ಷಡ್ಗುಣ್ಯೈಶ್ವರ್ಯ ಸಂಪತ್ಕರವನುಳ್ಳ
ಗುರು ಮುಕ್ತಿಪ್ರದಾಯಕನಾದ ಬಸವ ಬಕಾರವೇ ಭವ ಹರಗುರು,
ಸಕಾರವೇ ಸರ್ವಚೈತಾನ್ಯಾತ್ಮಕವಪ್ಪ ಲಿಂಗವು, ವಕಾರ ವಚಿಸುವದಕ್ಕೆ

ಕಾರಣ ಶಿವಾನುಭಾವ ಮೂರ್ತಿಯಪ್ಪ ಜಂಗಮವು. ಅಂತು ಗುರುಲಿಂಗ ಜಂಗಮ ಸ್ವರೂಪವಾದ ಲಿಂಗಾಯನಮಃ= ಲಯ ಗಮ ನಗಳಿಂಗಾಲಯವಾದ ಕಾರಣ ಅಂತಪ್ಪ ಬಸವಲಿಂಗೇಶ್ವರನೆಂಬ ಶ್ರೀ ಗುರುತತ್ವಕೋಸ್ತರ ನಮಸ್ಕಾರವು. ಬಸವರಾಜ ದೇವರು = ಜಗದಾರಾಧ್ಯ ಸಂಗನ ಬಸವೇಶ್ವರ ಸ್ವಾಮಿಗಳೆಂಬ ಮಹಾಜ್ಞಾನ ಗುರು ಮೂರ್ತಿಗಳು; ನಿರೂಪಿಸಿದ = ಬೋಧಿಸಿದ ಷಟ್‌ಸ್ಥಲದ ವಚನ ಷಡ್ವಿದಂಗಲಿಂಗ ಭಕ್ತಿಗಳ ಸ್ವರೂಪವನು ಹೇಳುವನ್ತ ವಾಕ್ಯಾನುಭಾವವು. ಪಿಂಡಸ್ಥಲ = ಪಿಂಡಸ್ಥಲಸ್ವರೂಪವನು ನಿರೂಪಿಸುತ್ತಿಹನು. ಪ್ರಥಮದಲ್ಲಿ = ಮೊಟ್ಟಮೊದಲೊಳಗೆ; ಉದಕದೊಳಗೆ = ಮುನ್ನೀರ ಮಧ್ಯದಲ್ಲಿ; ಬೈಚಿಟ್ಟ = ಪ್ರಳಯ ಕಾಲಕ್ಕಾಗಬೇಕೆಂದು ಮುಡುಗಿದ; ಬಯಕೆಯ = ಯಿಚ್ಛೆಯ

....................

ಅಂತ್ಯ :

ಬಸವೇಶ್ವರ ದೇವರು = ಜಗದಾರಾಧ್ಯ ಸಂಗನಬಸವೇಶ್ವರನೆಂಬ ಮಹಾಜ್ಞಾನ ಗುರುಮೂರ್ತಿಗಳು; ನಿರೂಪಿಸಿದ = ಉಪದೇಶಿಸಿದ; ಷಡುಸ್ತಲದ ವಚನ = ಷಡ್ವಿಧ ಲಿಂಗ ಭಕ್ತಿಗಳ ಸ್ವರೂಪವನು ಹೇಳುವನ್ಥ ವಾಕ್ಯಾನುಭಾವವು ಸಮಾಪ್ತ ॥ ಶ್ರೀ ॥ ಯಲ್ಲಾಭಕ್ತ ಮಹೇಶ್ವರರುಗಳು ಸ್ತೋತ್ರಮುಖದಲ್ಲಿಯೇ ಮುಕ್ತಾಯವಾಯಿತ್ತು. ಮಂಗಳ ಮಂಗಳ= ಯಂದರೆ ನಿರ್ಮಲವು; ಮಹಾ ಮಹಾ=ಯಂದರೆ ದೊಡ್ಡಿತ್ತಾದ; ಶ್ರೀ = ಯಂದರೆ ಜ್ಞಾನ ಮತ್ತು ಶ್ರೀ = ಯಂದರೆ ಐಶ್ವರ್ಯಮತ್ತು ಶ್ರೀ = ಯಂದರೆ ಪೂಜ್ಯ; ಯಿಂತಪ್ಪ ಜ್ಞಾನೈಶ್ವರ್ಯ ಪೂಜ್ಯವನ್ನುಳ್ಳ ಶಾಸ್ತ್ರವನು ಬರೆದು ಪಾಠವನು ಮಾಡಿಕೊಂಡು ಜ್ಞಾನಮೂರ್ತಿಗಳಿದ್ದೆಡಿಗೆ ಹೋಗಿ ದೀರ್ಘದಂಡ ಮುಂತಾದ ಭಕ್ತೋ ಪಚಾರಂಗಳಿಂದ ಈ ಶಾಸ್ತ್ರದ ಅರ್ಥಾನ್ವಯ ಅಭಿಪ್ರಾಯ ವರ್ಣಂ-ಗಳನು ಶ್ರೋತ್ರ ಮುಖದಲ್ಲಿ ಕೇಳಿ ಮನೋ ಮುಖದಲ್ಲಿ ಹಾರೈಸಿ ಹೃದಯ ಮುಖದಲಿಂಬುಗೊಂಡು ಅಂಗವ ಮಾಡಿಕೊಂಡು ಆಚರಿಸು-ವನ್ಥಾ ಶಿವಶರಣರೆಲ್ಲರು ನಿರತಿಶಯ ಜ್ಞಾನದ ನಿಜೈಶ್ವರ್ಯವನು ಪಡೆದು ಬಾಳುತ್ತಿಹರೆಂಬ ಶಾಸ್ತ್ರದ ಫಲ ಶೃತಿಯು ಸಮಾಪ್ತಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀನೃಪ ಶಾಲಿವಾಹನ ಶಕೆ-೧೮೩೪ ಆನಂದ ನಾಮ ಸಂವತ್ಸರ ಕಾರ್ತೀಕ ಶುಧ್ಧ ದ್ವಾದಶಿ ಶುಕ್ರವಾರ ಸಮಾಪ್ತ-ಮಾದುದು.

**ನೋಡು :** ೧. ಬಸವೇಶ್ವರ ದೇವರ ವಚನ ಸಾರಾರ್ಥ
೨. ಶ್ರೀ ಬಸವಣ್ಣನವರ ಷಟ್‌ಸ್ಥಲದ ವಚನಗಳು
೩. ಬಸವನ ಷಟ್‌ಸ್ಥಲದ ಬೆಡಗಿನ ವಚನದ ಟೀಕೆ
೪. ಸಟೀಕಾ ಬಸವಣ್ಣನವರ ವಚನಗಳು.
೫. ಷಟ್‌ಸ್ಥಲದ ವಚನ

---

ಆಕರ :

೧. ಬಸವ ಭಂಡಾರ ಟೀಕಾ ಗ್ರಂಥ ನಂ. ೧
೨. ಸಮಗ್ರವಚನ ವಾಙ್ಮಯ ಸಂಶೋಧನ ಸಂಸ್ಥೆ ಹಸ್ತಪ್ರತಿ ನಂ. ೧೮೫

## ೨೬೨

**ಗ್ರಂಥ :** ಸಚಿತ್ರ ಶ್ರೀ ಬಸವೇಶ್ವರ ಚರಿತ್ರ; ವಚನ ಸಹಿತ

**ಪ್ರಭೇದ :** ಚರಿತ್ರೆ-ವಚನ

**ಕರ್ತೃ :** ಹೊನ್ನಾಪುರಮಠ (ಗದಿಗೆಯ್ಯ ಹುಚ್ಚಯ್ಯ)

**ಕಾಲ :** ಜ. ೧೮೭೦ ಮ : ೭–೧–೧೯೩೩

**ಆಕಾರ :** ೧೮·೫×೧೨ ಸೆ. ಮಿ.

**ಪುಟ :** ೫೧

**ಸಾಲು :** ೨೬

**ಅಕ್ಷರ :** ೨೫

**ಸ್ಥಳ :** ಧಾರವಾಡ

**ಪ್ರಕಾಶಕ :** ಲೇಖಕ

**ಆವೃತ್ತಿ :** ಪ್ರಥಮ ದ್ವಿತೀಯ

**ಮಿತಿ :** ೪–೮–೧೯೨೯ ಎಪ್ರಿಲ್ ೧೯೩೨

**ಬೆಲೆ :** ೦–೬–೦ ಆಣೆ ೦–೬–೦ ಆಣೆ

**ಮಾಲೆ :** ಶ್ರೀ ವಾಗ್ದೇವಿ ಗ್ರಂಥಮಾಲೆ, ೬

**ಸಾರಾಂಶ :** "ಈ ಸಣ್ಣ ಚರಿತ್ರವನ್ನು ಬರೆಯುವ ಕೆಲಸದಲ್ಲಿ ನಾನು ಶ್ರೀಯುತ ಮಂಜಪ್ಪ ಹರ್ಡೇಕರರು ಬರೆದ ಶ್ರೀ ಬಸವ ಚರಿತ್ರೆಯನ್ನೂ, ರಾ. ಸಾ. ಹಳಕಟ್ಟಿ ಇನರು ಶಿವಾನುಭವ ಮಾಸಿಕ ಪುಸ್ತಕದಲ್ಲಿ ಸಂಗ್ರಹಿಸಿದ ಶ್ರೀ ಬಸವೇಶ್ವರನ ವಚನಗಳನ್ನು ವಿಶೇಷ ರೀತಿಯಿಂದ ಉಪಯೋಗ ಮಾಡಿಕೊಂಡಿದ್ದೇನೆ.

" ಈ ಚರಿತ್ರವನ್ನು ನಾನು ಮುಖ್ಯವಾಗಿ ಬಾಲ ವರ್ಗದ ಹಾಗೂ ಸ್ತ್ರೀಯರ ಸಲುವಾಗಿ ಬರೆದಿದ್ದರೂ ಅದನ್ನು ಜನಸಾಮಾನ್ಯರೂ ಸಹ ಓದಿ ಒಳ್ಳೇ ಲಾಭ ಮಾಡಿಕೊಳ್ಳಬಹುದೆಂದು ನನಗೆ ತುಂಬಾ ವಿಶ್ವಾಸವುಂಟು. ಆದರೆ ಇದರಲ್ಲಿ **'ವೀರಶೈವಮತ ತತ್ವಗಳು'** ಎಂಬುದೊಂದು ಗಹನವಿಷಯವು ಅಡಕವಾಗಿದ್ದು ಅದನ್ನು ತಿಳಿದುಕೊಳ್ಳುವದು ವೀರಶೈವಶಾಸ್ತ್ರವನ್ನು ಚನ್ನಾಗಿ ಓದಿಕೊಂಡ ದೊಡ್ಡ ಜನರಿಗೆ ಮಾತ್ರ ಸಾಧ್ಯವಿರುವದು."

—ಲೇಖಕರ 'ಪ್ರಸ್ತಾವನೆ'ಯಿಂದ

೧೪ನೆಯ ಪ್ರಕರಣದಲ್ಲಿ ರೈಸ್, ಫ್ಲೀಟ, ಬ್ರೌನ್, ವೇದಾಚಲಂ— ಇವರ ಹೇಳಿಕೆಗಳಿಂದ ವೀರಶೈವ ಮತವು ಬಹು ಪುರಾತನವಾದುದೆಂದು ಹೇಳಿದೆ. ಬಸವಣ್ಣ ನವರ ೧೧೫ ವಚನಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಆ ಕಾಲದ (೧೯೨೫) ವೀರಶೈವ ಸಮಾಜದ ಕೀಳು ಸ್ಥಿತಿಯನ್ನು ३೧ನೆಯ ಪುಟದಲ್ಲಿ ವಿವರಿಸಿದೆ. ಸಿಂಹಾ ಸನಾರೂಢ ಶ್ರೀ ಬಸವೇಶ್ವರರ ಒಂದು ಚಿತ್ರವಿದೆ.

"೧ನೇ ಆವೃತ್ತಿಯಲ್ಲಿ ಶ್ರೀ ಬಸವೇಶ್ವರರ ವಚನಗಳು (೧೧೫) ಇದ್ದವು. ಆದರೆ ಈ ಎರಡನೆಯ ಆವೃತ್ತಿಯಲ್ಲಿ ಕೆಲವು ಹೆಚ್ಚು ವಚನಗಳನ್ನು ಸೇರಿಸಿ ವಚನ ಗಳ ಒಟ್ಟು ಸಂಖ್ಯೆಯನ್ನು (೧೪೮) ಮಾಡಿರುತ್ತೇನೆ "

—ಗ್ರಂಥಕರ್ತರ 'ಪ್ರಸ್ತಾವನೆ'ಯಿಂದ

೨೬೩

**ಗ್ರಂಥ :** ಸಟೀಕ ವೃಷಭೇಂದ್ರ ವಿಜಯಂ

**ಪ್ರಭೇದ :** ಚಂಪೂ-ಟೀಕೆ

**ಕರ್ತೃ :** ಷಡಕ್ಷರದೇವ

**ಕಾಲ :** ೧೬೫೫

**ಸಂಪಾದಕ / ಟೀಕಾಕಾರ** : ಕರಿಬಸವಶಾಸ್ತ್ರೀ (ರುದ್ರಶಾಸ್ತ್ರಿ, ನಂಜನಗೂಡು) ಜ. ೧೮೭೨ ಮ. ೯-೫-೧೯೨೩

**ಪುಟ :** ೪+೯೫೯=೯೬೩

**ಸಾಲು :** ३೧

**ಅಕ್ಷರ :** ३೦

**ಸ್ಥಳ :** ಮೈಸೂರು

ಪರಿಶೋಧಿಸಿ ಶ್ರೀ ಶಿವಶರಣರ ಕೃಪಾಬಲದಿಂದ ಪ್ರತಿಪದ ಟೀಕೆಯಂ ಬರೆಯುವದ ಕ್ಕಾರಂಭಿಸಿ ಮೊದಲಿಂದ ೩೦ ಆಶ್ವಾಸಗಳವರಿಗೂ ಪ್ರತಿಯೊಂದು ಪದಗಳನ್ನೂ ಅನ್ವಯಕ್ರಮುವಾಗಿ ಹಿಂದೆಯೊಂದಾವರ್ತಿ ಬಂದಿದ್ದ ಸಾಧಾರಣ ಪದಗಳಿಗಲ್ಲದೆ ಉಳಿದ ಶಬ್ದಗಳೆಲ್ಲಕ್ಕೂ ಅರ್ಥಮಂ ಬರೆದು ಆದಿಯಿಂದ ಅದುವರಿವಿಗೆ ಸಾಂಗವಾಗಿ ಓದಿದ ವರಿಗೆ ತಕ್ಕಮಟ್ಟಿಗೆ ಅನ್ವಯಿಸುವ ಶಕ್ತಿಯುಂಟಾಗಬಹುದೆಂದಾಲೋಚಿಸಿ ಉಳಿದ ಹನ್ನೆರಡು ಅಶ್ವಾಸಗಳಿಗೆ ಕಠಿಣವಾದ ಶಬ್ದಗಳಿಗೆ ಮಾತ್ರ ಅರ್ಥವಂ ಬರೆದಿರುವೆ ನಲ್ಲದೆ ಕಠಿಣವಾಗಿದ್ದ ಕೆಲವು ಕಡೆಗಳಲ್ಲಿ ಫುಟ್‌ನೋಟಿನಲ್ಲಿ ಅವಯವಾರ್ಥವನ್ನೂ ಕೆಲವು ಕಡೆಯಲ್ಲಿ ತಾತ್ಪರ್ಯವನ್ನೂ ಕೆಲವು ಆಧಾರ ವಚನಗಳನ್ನೂ ವಿಸ್ತರಿಸಿ ಈ ಟೀಕೆಗೆ "ಸುಜನಾನಂದಿನಿ" ಎಂಬ ಹೆಸರನ್ನಿಟ್ಟಿರುತ್ತೇನೆ".

**ನೋಡು :** ೧. ಕನ್ನಡ ಬಸವೇಶ ವಿಜಯವು (ಕನ್ನಡ)
೨. ಬಸವರಾಜ ವಿಜಯಂ (ಕನ್ನಡ)
೩. ಸಟೀಕ ಬಸವೇಶ ವಿಜಯಃ (ಸಂಸ್ಕೃತ ಕನ್ನಡ)
೪. ವೃಷಭೇಂದ್ರ ವಿಜಯ (ಕನ್ನಡ)

---

ಆಕರ :

೧. ಸಿರಿಗನ್ನಡ ಗ್ರಂಥಕರ್ತರ ಚರಿತ್ರ ಕೋಶ, ಪು. ೧೫
೨. ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು, ಪು. ೧೨೦

೨೬೪

**ಗ್ರಂಥ :** ಸಟೀಕ ಬಸವೇಶ ವಿಜಯ

**ಪ್ರಭೇದ :** ಗದ್ಯಕಾವ್ಯ **ಅಧ್ಯಾಯ :** ೪೪

**ಕರ್ತೃ :** ಶಂಕರ ಕವಿ

**ಕಾಲ :** ಸು. ೧೫೦೦

**ಅನುವಾದಕ :** ಕರಿಬಸವಶಾಸ್ತ್ರಿ (ಪಿ. ಆರ್.)

**ಆಕಾರ :** ೧೮×೧೨ ಸೆ. ಮಿ.

**ಪುಟ :** ೩೯೦

**ಸ್ಥಳ :** ಮೈಸೂರು

**ಪ್ರಕಾಶಕ :** ಬಿ. ಎ. ಕೋದಂಡರಾಮಶೆಟ್ಟಿ

**ಆವೃತ್ತಿ :** ಪ್ರಥಮ

**ಮಿತಿ :** ೧೯೨೩

**ಬೆಲೆ :** ೩–೦–೦ ರೂ.

**ಸಾರಾಂಶ :** ಬಸವ ಚರಿತ್ರೆ.

ಶಂಕರಕವಿ ಕೃತ ಸಂಸ್ಕೃತ ಬಸವ ಪುರಾಣಕ್ಕೆ ಬರೆದ ಟೀಕೆ ಇದು. ಮೈಸೂರಿನಿಂದ ಪ್ರಕಟವಾಗುತ್ತಿದ್ದ 'ವೀರಶೈವ ಮತ ಪ್ರಕಾಶಿಕೆ' ಎಂಬ ಮಾಸಿಕ ಪತ್ರಿಕೆಯಲ್ಲಿ ೧೮೯೨ ರಿಂದ ೧೮೯೫ ರ ವರೆಗೆ ಮೂಲದೊಡನೆ ಇದು ಮುದ್ರಿತವಾಯಿತು. ತರುವಾಯ ಗ್ರಂಥರೂಪ ಪಡೆಯಿತು.

---

ಆಕರ :

೧. ಕರ್ನಾಟಕ ಕಾಲೇಜ ಕೇಂದ್ರ ಗ್ರಂಥಭಂಡಾರದಲ್ಲಿದೆ

೨. Catalogue of the Kannada, Badaga and Kurg in the library of the British Museum, No.14028. d 39. (vol.1-3) p. 151

೩. ಡಾ. ಶಿ. ಚ. ನಂದಿಮಠ : ಸಂಸ್ಕೃತ ಬಸವ ಪುರಾಣಗಳು, ವೀರಶೈವ, ಸಂಪುಟ ೫, ಸಂಚಿಕೆ ೩-೪, ಪು. ೯೧

೨೬೫

**ಗ್ರಂಥ :** ಸಟೀಕಾ ತಾತ್ಪರ್ಯ ಬಸವ ಭಾಷೆ

**ಪ್ರಭೇದ :** ಭಾಮಿನಿ ಷಟ್ಪದಿ-ಟೀಕೆ

**ಕರ್ತೃ :** ಹಿರೇಮಠ (ಮಹಾಲಿಂಗಯ್ಯಾ ವೀರಯ್ಯಾ)

**ಕಾಲ :** ಸು. ೧೯೦೦

**ಪರಿಶೋಧಕರು :** ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು

**ಆಕಾರ :** ೧೭×೧೨ ಸೆ. ಮಿ.

**ಪುಟ :** ೭ + ೪೦ = ೪೭

**ಸಾಲು :** ೨೦

**ಅಕ್ಷರ :** ೧೪–೨೪

**ಸ್ಥಳ :** ಶಿವಯೋಗ ಮಂದಿರ (ತಾ. ಬಾದಾಮಿ)

**ಪ್ರಕಾಶಕ :** ಶಿವಯೋಗ ಮಂದಿರ ಸಂಸ್ಥೆ

**ಆವೃತ್ತಿ :** ಪ್ರಥಮ

**ಮಿತಿ :** ೧೯೨೬

**ಬೆಲೆ :** ೦-೪-೦ ಆಣೆ

**ಸಾರಾಂಶ :** ಭೀಮಕವಿಕೃತ ಬಸವ ಪುರಾಣದ ಆರನೆಯ ಸಂಧಿ ೧-೭ ಪದ್ಯಗಳಲ್ಲಿ ಬರುವ ೩೪ ಭಾಷೆ (ಪ್ರತಿಜ್ಞೆ) ಗಳನ್ನು ಇದರಲ್ಲಿ ವಿವರಿಸಿ ಹೇಳಿದೆ. ಪ್ರತಿಜ್ಞೆಗಳ ಒಂದು ಪದ್ಯವನ್ನಿಲ್ಲಿ ಉದ್ಧರಿಸುತ್ತೇವೆ :

ನಿಚ್ಚಲುಂ ಶಿವರಾತ್ರೆಯಂ ಮಾ ।
ಳ್ಪಚ್ಚರಿಯೆನಿಪ **ಭಾಷೆ**; ಭಕ್ತರ ।
ನಚ್ಚ ಶಿವನೆಂದಿಪ್ಪ **ಭಾಷೆ**; ಶಿವೈಕ್ಯರೆಗ್ಗುಗಳ ।
ಎಚ್ಚರಿಸದಿಹ **ಭಾಷೆ**; ಶರಣರ ।
ಹೆಚ್ಚು ಕುಂದುಗಳಂ ನುಡಿಯದಿಹ ।
ಸಚ್ಚರಿತ್ರದ **ಭಾಷೆ**; + ಏನುವಂ ವಂಚಿಸದ **ಭಾಷೆ** ॥

ಸಿ. ಗ್ರ. ಚ. ಕೋಶದಲ್ಲಿ ಇದನ್ನು ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಬರೆದಿರುವದಾಗಿ ತಪ್ಪಾಗಿ ತಿಳಿಸಿದೆ.

---

ಆಕರ :

೧. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪು. ೧೯-೨೦

೨೬೭

**ಗ್ರಂಥ :** **ಸಟೀಕಾ ಬಸವಣ್ಣನವರ ವಚನಗಳು**

**ಪ್ರಭೇದ :** ವಚನ-ಟೀಕೆ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ :** ಶಾಂತರಸ ಮತ್ತು ಚೆನ್ನಬಸವಪ್ಪ

**ಆಕಾರ :** ೨೧×೧೪ ಸೆ. ಮಿ.

**ಪುಟ :** ೨ + ೮ = ೧೦

**ಸಾಲು :** ೩೦

**ಅಕ್ಷರ :** ೨೬

**ಸ್ಥಳ :** ರಾಯಚೂರು

**ಪ್ರಕಾಶಕ :** ಎಂ. ಸಿದ್ಧವೀರಯ್ಯ ಇತರರು, ಕಲ್ಯಾಣಜ್ಯೋತಿ ಪ್ರಕಾಶನ ಸಮಿತಿ

**ಆವೃತ್ತಿ :** ಪ್ರಥಮ

**ಮಿತಿ :** ಬಸವ ಜಯಂತಿ ೧೯೫೫

**ಸಾರಾಂಶ :** ಇದರಲ್ಲಿ ಬಸವಣ್ಣನವರ ೭ ವಚನಗಳಿಗೆ ಟೀಕೆಯಿದೆ. (ಶ್ರೀ ಬಸವನಾಳರ ಸಂಪಾದನೆಯ ೫೦೮, ೩೪೫, ೩೪೯, ೬೨, ೨೪೮, ೩೫೪ ನಂಬರಿನ ವಚನಗಳು) ಇದು ನಮ್ಮಲ್ಲಿರುವ 'ಷಟುಸ್ಥಲ ವಚನಗಳು' ಈ ಟೀಕೆಯ ಮತ್ತೊಂದು ಪ್ರತಿಯಾಗಿದೆ. ಟೀಕೆಯು ಸಮಗ್ರ ಪ್ರತಿ ಅಪ್ರಕಟಿತ.

"ಬಸವಣ್ಣನವರ ಸಟೀಕಾ ವಚನದ ಪ್ರತಿಗಳು ನಮಗೆ ದೊರಕಿವೆ. ವಚನಗಳಿಗೆ ಇಷ್ಟು ಸುಂದರನಾದ ಟೀಕು ಯಾರೂ ಬರೆದಿಲ್ಲವೆಂದೇ ಹೇಳಬೇಕು. ಕನ್ನಡ ಕಾವ್ಯಗಳಿಗೆ, ವೇದಾಂತ ಗ್ರಂಥಗಳಿಗೆ ಟೀಕು ಕೆಲವರು ಬರೆದಿದ್ದಾರೆ. ಅವರಲ್ಲಿ ಈ ಟೀಕಾಚಾರ್ಯ ಉನ್ನತಸ್ಥಾನಗಳಿಸಿರುವನೆಂಬುದರಲ್ಲಿ ಸಂದೇಹವಿಲ್ಲ."

—ಸಂಪಾದಕರ '**ನಮ್ಮ ಮಾತು**'ಗಳಿಂದ

**ನೋಡು :** ೧. ಷಟುಸ್ಥಲದ ವಚನಗಳು
೨. ಬಸವೇಶ್ವರ ದೇವರ ವಚನ ಸಾರಾರ್ಥ
೩. ಬಸವನ ಷಟ್ಸ್ಥಲದ ಬೆಡಗಿನ ವಚನದ ಟೀಕೆ
೪. ಶ್ರೀ ಬಸವಣ್ಣನವರ ಷಟ್‌ಸ್ಥಳದ ವಚನಗಳು
೫. ಷಟ್‌ಸ್ಥಲದ ವಚನ

೨೬೭

**ಗ್ರಂಥ : ಸಮಾಜೋದ್ಧಾರಕ ಬಸವಣ್ಣನವರು**

**ಪ್ರಭೇದ :** ಚರಿತ್ರೆ

**ಕರ್ತೃ :** ಹಾಲಪ್ಪ (ಗ. ಸ.)

**ಕಾಲ :** ಜ. ೧-೭-೧೯೨೨

**ಆಕಾರ :** ೧೮ × ೧೨ ಸೆ. ಮಿ.

**ಪುಟ :** iv + ೧೫೪ = ೧೫೮

**ಸ್ಥಳ :** ಮೈಸೂರು

**ಪ್ರಕಾಶಕ :** ಶಾರದಾ ಮಂದಿರ, ಎಚ್. ಎಂ. ಶಂಕರನಾರಾಯಣರಾವ್

**ಆವೃತ್ತಿ :** ಪ್ರಥಮ

**ಮಿತಿ :** ೧೯೫೭

**ಬೆಲೆ :** ೨=೦ ರೂ.

**ಮಾಲೆ :** ಕನ್ನಡ ಕವಿಕಾವ್ಯ ಮಾಲೆ, ೪೭

**ಸಾರಾಂಶ:** "ಮೊದಲನೆಯ ಪ್ರಕರಣದಲ್ಲಿ ಬಸವಣ್ಣನವರು ಜನಿಸುವಪಕ್ಕೆ ಮುಂಚೆ ಭಾರತದಲ್ಲಿದ್ದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಸ್ಥಿತಿಗತಿಗಳ ವಾಸ್ತವಿಕ ಚಿತ್ರವಿದೆ. 'ಹುಟ್ಟನಿಂದ ಮಂತ್ರಿಸಟ್ಟದ ವರೆಗೆ' ಮತ್ತು 'ಕೊನೆಯ ದಿನಗಳು' ಎಂಬೆರಡು ಪ್ರಕರಣಗಳಲ್ಲಿ ಬಸವಣ್ಣನವರ ಜೀವನ ಚರಿತ್ರೆಯ ಮುಖ್ಯಾಂಶಗಳನ್ನು ಕಾಣಬಹುದು. ಉಳಿದ ಭಾಗಗಳಲ್ಲಿ ಶ್ರೀ ಬಸವೇಶ್ವರರ ಕ್ರಾಂತಿಯ, ಅವರ ಸಾಧನೆಗಳ ಪರಿಚಯವಿದೆ."

— ಲೇಖಕರ 'ನಿವೇದನೆ'ಯಿಂದ

೨೩೮

**ಗ್ರಂಥ : ಸಂಗಮೇಶ್ವರ ಸ್ತುತಿ**

**ಪ್ರಭೇದ :** ಶಾರ್ದೂಲ ವೃತ್ತ **ಸಂಖ್ಯೆ :** ೯

**ಕರ್ತೃ :** ಬಸವ ಅಥವಾ ವೃಷಭೇಂದ್ರಾ

**ಕಾಲ :** ಸು. ೧೧೬೭

**ಆಕಾರ :** ಶ್ರೀತಾಲ. ೮ × ೨ ಇಂಚು

**ಪುಟ :** ೩

**ಸಾಲು :** ೮

**ಸಾರಾಂಶ :** D C K M ದಲ್ಲಿ ಹೀಗೆ ಹೇಳಿದೆ :

"ಮೊದಲಿನ ೮ ಪದ್ಯಗಳಲ್ಲಿ ಅಂತ್ಯದಲ್ಲಿ '**ಕೂಡಲ ಸಂಗಮೇಶ್ವರಾ!**' ಎಂಬ ಸಂಬೋಧನೆಯಿದೆ. ಕಡೆಯ ಪದ್ಯದಲ್ಲಿರುವ '**ರಕ್ಷಿಪ್ಪುದೆಂದಂ ವೃಷೇಂದ್ರ**' ಎಂಬ ಭಾಗವನ್ನು "**ರಕ್ಷಿಪ್ಪುದೆಂದಂ ವೃಷೇಂದ್ರಂ**" ಎಂದು ತಿದ್ದಿಕೊಂಡರೆ ಗ್ರಂಥಕರ್ತನ ಹೆಸರು **ವೃಷೇಂದ್ರ** ಅಥವಾ **ಬಸವ** ಎಂದಾಗುವದು". ಬಹುಶಃ ಕಲ್ಯಾಣ ಬಸವಣ್ಣ ಕೃತವಾಗಿರಬಹುದೇ ?

ಆದ್ಯಂತ್ಯಗಳ ಕೆಲವು ವೃತ್ತಗಳನ್ನಿಲ್ಲಿ ಉದ್ಧರಿಸುವೆವು :

**ಆದಿ :**

ಸ್ವಾಮಿ ಮದೀಯ ಮಾನಸವ ನೇದದಿನೇಶ್ವರ ಮಾಧವಾಜ ಸು-।
ತ್ರಾಮ ಕಿರೀಟಮಂಡಿತ ಪದಾಂಬುಜ ವಿಶ್ವಕುಟುಂಬರಕ್ಷ.... ॥
ದಾಮ ದಮಾಸುಧಾರಸ ಸಮಗ್ರ ಕಟಾಕ್ಷ! ಕಲಂಕದೂರ! ನಿ-।
ಷ್ಕಾಮ ಚಿದಂಗನಾರಮಣ ದೇಶಿಕ ಕೂಡಲ ಸಂಗಮೇಶ್ವರಾ ॥ ೧ ॥

ನಿರುಪಮ ನಿತ್ಯ ನಿಷ್ಕಳ ನಿರಾಕುಳ ನಿರ್ಭಯ ನೀಲಕಂಠ ನಿ ।
ರ್ಜರನುತ ನಿಷ್ಪ್ರಪಂಚ ನಿಗಮಾಗಮ ವಂದ್ಯ ನಿರೀಹ ನಿಹ್ರ್ನುತ ॥
ಸ್ಮರ ನಿರವದ್ಯ ನಿರ್ಮದ ನಿರರ್ಗಳ ನಿಶ್ಚಳ ನಿಸ್ತುಳ ಪ್ರಭಾ-।
ಕರ ನಿರುಪಾಧಿ ನಿರ್ಗುಣ ನಿರಾಮಯ ಕೂಡಲ ಸಂಗಮೇಶ್ವರಾ ॥ ೨ ॥

**ಅಂತ್ಯ :**

ಪುರುಷವರೇಣ್ಯ! ಪುಣ್ಯಮಯ ಪೂರ್ಣಪುರಂದರ ವಂದ್ಯ ವಿಶ್ವ ವಿ ।
ಸ್ತರಣ ವಿನೋದ ವಿಶ್ರುತ ವಿಹಾರ ವಿರಾಜಿತ ವೀರಶೈವ ಭಾ ।
ಸುರ ಭವದೂರ ಭರ್ಗ ಭಜಕ ವ್ರಜ ಭದ್ರದ ಭಕ್ತವಶ್ಯವಾ ।
ಗ್ವರ ವರದ ಪ್ರಸನ್ನ ಜಯಚಿನ್ಮಯ ಕೂಡಲ ಸಂಗಮೇಶ್ವರಾ ॥ ೮ ॥

ತರುಣಾದಿತ್ಯ ಪ್ರಕಾಶಾವರಣ ಶರಣ ಸಂದೋಹ ಮಂದಾರ ಚಂದ್ರಾ ।
ಭರಣಾಂಚ-ನ್ಮೌಲಿ ಚಂಚದ್ಗರಳಗಳ ಕಳಾಧುರ್ಯ ಗಂಭೀರ ಶೌರ್ಯಾ ।
ಧರ ಮತ್ಪ್ರಾಣೇಶ ಸಂಗಪ್ರಭುವೆ ವಿಭುವೆ **ರಕ್ಷಿಪ್ಪುದೆಂದಂ ವೃಷೇಂದ್ರಾ** ॥೯॥

---

ಆಕರ :

೧. Descriptive Catalogue of Kannada Manuscripts-Madras, vol. V; No. 862, p. 1183-84

೨೬೯

**ಗ್ರಂಥ :** **ಸಿಂಗಿರಾಜ ಪುರಾಣ**

**ಪ್ರಭೇದ :** ವಾರ್ಧಿಕ ಷಟ್ಪದಿ-ವಚನ **ಸಂಧಿ :** ೪೮ **ಪದ್ಯ :** ೧೯೦೭

**ಕರ್ತೃ :** ಸಿಂಗಿರಾಜ

**ಕಾಲ :** ಸು. ೧೫೦೦

**ಸಂಪಾದಕ :** ದೇವೀರಪ್ಪ (ಹೆಚ್) ಜ. ೬-೬-೧೯೧೩

**ಆಕಾರ :** ೨೧×೧೪ ಸೆ. ಮಿ.

**ಪುಟ :** LXXXII + ೪೮೧ = ೫೬೩

**ಸಾಲು :** ೨೭

**ಅಕ್ಷರ :** ೧೪-೨೧

**ಸ್ಥಳ :** ಮೈಸೂರು

**ಪ್ರಕಾಶಕ :** ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೦

**ಬೆಲೆ :** ೬-೦-೦ ರೂ.

**ಮಾಲೆ :** Oriental Research Institute Publications, Kannada Series, 27

**ಸಾರಾಂಶ :** " 'ಇದು....ಬಸವನುತಿಸಾರ', 'ಭರ್ಗನೆರಡನೆಯ ಮೂರ್ತಿ ವೃಷಭಾವತಾರನು ಬಸವ ನಾಮದಿಂ ಜನಿಸಿ ಸದ್ಭಕ್ತಿ ಪಥತೋಱಿ ಜಗವ ಪಾವನವ ಮಾಡಿ ಪರವೆರಸಿದ ಮಹಾರಹಸ್ಯಾವಳಿ', ಪ್ರಭುಸಂಪಾದನೆ, ಕ್ರಿಯಾಸಂಪಾದನೆ ಮೊದಲಾದ ವಚನ ಸಂಗ್ರಹಗಳನ್ನನುಸರಿಸಿ, ಪರಶಿವನ ಅಪರಾವತಾರನಾದ ಬಸವೇಶ್ವರನು ಲೋಕಕಲ್ಯಾಣಕ್ಕಾಗಿ ಭಕ್ತರಸೇವೆಗಾಗಿ ಮೆರೆದ **ಅರುವತ್ತುನಾಲ್ಕು ಪವಾಡ**ಗಳನ್ನು ನಿರೂಪಿಸಿರುವ ದಿವ್ಯಚರಿತ್ರೆ. ಬಸವೇಶ್ವರನು ಪರಶಿವನ ಅವತಾರವೆಂದು ಸ್ಪಷ್ಟಪಡಿಸುವುದೇ ಸಿಂಗಿರಾಜನ ಮುಖ್ಯದೃಷ್ಟಿ."

—ಎಚ್. ಆರ್. ರಂಗಸ್ವಾಮೈಯ್ಯಂಗಾರ್‌ರ ಪ್ರಸ್ತಾವನೆ ಪು. iv

ಪೀಠಿಕೆಯಲ್ಲಿ ಕವಿ, ಕಾಲ, ಕಥಾಸಾರ, ಬಸವ ಚರಿತ್ರೆಯ ಗ್ರಂಥಗಳಲ್ಲಿರುವ ಕಥಾ ವ್ಯತ್ಯಾಸ, ಕೃತಿ ವಿಚಾರ, ಸಿಂಗಿರಾಜನ ಬಸವಣ್ಣ, ಕಾವ್ಯ ವಿಮರ್ಶೆ – ಇತ್ಯಾದಿ ಸಂಗತಿಗಳನ್ನು ವಿದ್ವತ್ಪೂರ್ಣವಾಗಿ ಸಂಪಾದಕರು ವಿವೇಚಿಸಿದ್ದಾರೆ. ಪ್ರಕ್ಷಿಪ್ತವಿರಬಹುದಾದ ಪದ್ಯಗಳನ್ನು ಬೇರೆ ಬೇರೆ ಮೂಲ ಪ್ರತಿಗಳಿಂದ ಆಯ್ದು ನಾಲ್ಕು ಅನುಬಂಧಗಳಲ್ಲಿ ಕೊಡಲಾಗಿದೆ. ಈ ಕಾವ್ಯದಲ್ಲಿ ಮಧ್ಯೆ ಮಧ್ಯೆ ವಚನಗಳು, ಹಾಡುಗಳು ಬಂದಿವೆ. ಅವೆಲ್ಲವುಗಳ ಆಕರಗಳವನ್ನು ಕೊನೆಗೆ ಕೊಟ್ಟಿದೆ. ಇದರ ಇನ್ನೊಂದು ಹೆಸರು 'ಅಮಲ ಬಸವಚಾರಿತ್ರ' ಎಂದು. ಕೆಲವು ಹಸ್ತಪ್ರತಿಗಳಲ್ಲಿ 'ಬಸವ ಚಾರಿತ್ರದ ಸಿಂಗಿರಾಜ ಪುರಾಣ' ಎಂದೂ ಇದೆ.

---

ಆಕರ :

೧. ಕರ್ಣಾಟಕ ಕವಿಚರಿತೆ, ಭಾ. ೨; ಪು. ೧೪೪

೨. Descriptive Cata ogue of Manuscripts in K. R. I — Dharwar, vol. I., No. p. 6-9

೨೭೦

**ಗ್ರಂಥ : ಸಿಂಗಿರಾಜ ಪುರಾಣದ ಕಥೆ**

**ಪ್ರಭೇದ** : ಗದ್ಯ-ಚರಿತ್ರೆ

**ಕರ್ತೃ** : ಸಿಂಗಿರಾಜ

**ಕಾಲ** : ಸು. ೧೫೦೦

**ಗದ್ಯಾನುವಾದಕ** : ನಾಗಶರ್ಮ

**ಸಾರಾಂಶ** : ಎಂ. ಆರ್. ಶ್ರೀ ಅವರು **"ಸಿಂಗಿರಾಜ ಪುರಾಣದ ಕಥೆ** ಎಂಬುದಾಗಿ ದೊಡ್ಡ ಗದ್ಯ ಗ್ರಂಥವೊಂದು ಅಚ್ಚಾಗಿದೆ. ಇದು ನಾಗಶರ್ಮ ಎಂಬುವರು ಬರೆದದ್ದು. ಆದರೆ ಅವರು ಸಿಂಗಿರಾಜ ಪುರಾಣದಲ್ಲಿ ಇಲ್ಲದ ಅನೇಕ ವಿಷಯಗಳನ್ನು ಸೇರಿಸಿ ದೊಡ್ಡ ಪುರಾಣವನ್ನಾಗಿ ಮಾಡಿಬಿಟ್ಟಿದ್ದಾರೆ" ಎಂದು 'ಭಕ್ತಿಭಂಡಾರಿ ಬಸವಣ್ಣನವರು' ಗ್ರಂಥದಲ್ಲಿ ಹೇಳಿರುವರು.

---

ಆಕರ :

೧. ಭಕ್ತಿ ಭಂಡಾರಿ ಬಸವಣ್ಣನವರು, ಪು. ೩

## ೨೭೧

**ಗ್ರಂಥ :** ಸಿಂಗಿರಾಜ ಪುರಾಣ ವಿಜಯ

**ಪ್ರಭೇದ :** ಗದ್ಯ

**ಕರ್ತೃ :** ಸಿಂಗಿರಾಜ

**ಕಾಲ :** ೧೫೦೦

**ಗದ್ಯಾನುವಾದಕ :** ಬಸವಲಿಂಗಶಾಸ್ತ್ರಿ (ಎಂ.)

**ಸ್ಥಳ :** ಮೈಸೂರು

**ಮಿತಿ :** ೧೯೧೧

**ಸಾರಾಂಶ :** "ಈ ಪದ್ಯಕಾವ್ಯವನ್ನು ಕೈ|| ಮೈಸೂರಿನ ಎಂ. ಬಸವಲಿಂಗ ಶಾಸ್ತ್ರಿಗಳು ೧೯೧೧ ರಲ್ಲಿ 'ಸಿಂಗಿರಾಜ ಪುರಾಣ ವಿಜಯ' ವೆಂಬ ಹೆಸರಿನಿಂದ ಗದ್ಯ-ರೂಪದಲ್ಲಿ ಬರೆದಿದ್ದಾರೆ. ಈ ಗದ್ಯಾನುವಾದವು ಅತ್ಯಂತ ಹೃದಯಂಗಮವಾಗಿದೆ" ಎಂದು 'ಶೂಲಪಾಣಿ'ಯವರು ಹೇಳಿರುವರು.

ಶ್ರೀ ಎಚ್. ದೇವೀರಪ್ಪನವರು ಪ್ರಸ್ತುತ ಗ್ರಂಥದಲ್ಲಿ ಕವಿಯ ಬಗೆಗೆ ಹೇಳಿದ ಕಥೆಯೊಂದನ್ನು ಉದಾಹರಿಸುವ ಸಂದರ್ಭದಲ್ಲಿ "ಸಿಂಗಿರಾಜ ಪುರಾಣ ವಿಜಯ (ಸಿಂಗಿರಾಜ ಪುರಾಣದ ಗದ್ಯಾನುವಾದ) ವನ್ನು ಬರೆದಿರುವ ಕೈ. ವಾ. ಬಸವಲಿಂಗ ಶಾಸ್ತ್ರಿಗಳು ಸಿಂಗಿರಾಜನ ಬಗೆಗೆ ಒಂದು ಕಥೆ ಹೇಳಿರುತ್ತಾರೆ ಅದಕ್ಕೆ ಆಕರವಾವುದೋ ಗೊತ್ತಾಗುವದಿಲ್ಲ ಕಥೆಯ ಸಾರಾಂಶ ಹೀಗಿದೆ...." ಎಂದು ಬರೆದಿದ್ದಾರೆ.

---

ಆಕರ :

೧. ಶರಣ ಸಾಹಿತ್ಯ, ವಿಶೇಷ ಸಂಚಿಕೆ, ಪು. ೬೨ ದಿ. ೨೩-೪-೧೯೫೩

೨ ಸಿಂಗಿರಾಜ ಪುರಾಣ - ಪೀಠಿಕೆ, ಪು. x

## ೨೭೨

**ಗ್ರಂಥ :** ಹರಿಹರ ಮಹಾಕವಿಯ ಶ್ರೀ ಬಸವೇಶ್ವರ ದೇವರ ಚರಿತ್ರೆ

**ಪ್ರಭೇದ :** ಗದ್ಯಾನುವಾದ-ಕಾವ್ಯ-ವಿಮರ್ಶೆ

**ಕರ್ತೃ :** ಜವಳಿ (ಬಸವರಾಜ ಚೆನ್ನವೀರಪ್ಪ)

ಕಾಲ : ೧೦-೩-೧೯೩೧

ಆಕಾರ : ೧೮×೧೨ ಸೆ. ಮಿ.

ಪುಟ : XVII + ೧೫೬ = ೧೭೩

ಸ್ಥಳ : ಧಾರವಾಡ

ಪ್ರಕಾಶಕ : ಸಂಪಾಸಾಹಿತ್ಯ ಪ್ರಕಟನಾಲಯ

ಆವೃತ್ತಿ : ಪ್ರಥಮ

ಮಿತಿ : ಗಾಂಧೀಜಯಂತಿ. ೨-೧೦-೧೯೬೬

ಬೆಲೆ : ಕ್ಯಾಲಿಕೊ ೫=೦೦ ರೂ.

ಸಾರಾಂಶ : ಹರಿಹರ ಕವಿಯ 'ಬಸವರಾಜ ದೇವರ ರಗಳೆ'ಯ ಗದ್ಯಾನು-ವಾದ ಪ್ರಾರಂಭದಲ್ಲಿದೆ. ಇದರಲ್ಲಿ ಬಸವಣ್ಣನವರ ಕಥೆ, ಹಾಗು ಇತರ ಶರಣರ ವ್ಯಕ್ತಿ ಚಿತ್ರ, ಬಸವ ಭಕ್ತಿ, ಹರಿಹರ ಕವಿಯ ಭಾಷೆ, ವರ್ಣನೆ, ಅಲಂಕಾರ, ಶೈಲಿ, ಕಾವ್ಯಧರ್ಮ ಹಾಗು ಧರ್ಮ, ಚಾರಿತ್ರಿಕ ವಿಷಯ ಮೊದಲಾದ ವಿಷಯ ವಿವೇಚನೆ-ಯಿದೆ. 'ಕಲ್ಯಾಣವು ಮಂಗಳವಾಡವೆ?' 'ಹಂಪೆ ಮತ್ತು ಕಲ್ಯಾಣ' 'ಹನ್ನೆರಡನೆಯ ಶತಮಾನದ ಶಿವಶರಣರಲ್ಲಿ ಬಸವಣ್ಣನ ಸ್ಥಾನಮಾನ' 'ಶುದ್ಧಶೈವ' ದಿಂದ 'ವೀರ-ಶೈವ' ವಾದುದರ ಬಗೆ — ಇತ್ಯಾದಿ ವಿಚಾರಗಳ ಚರ್ಚೆ ಇದರಲ್ಲಿ ಅಡಕವಾಗಿದೆ.

೨೭೩

ಗ್ರಂಥ : **ಹೊಸ ಪದ್ಧತಿಯ ಬಸವೇಶ್ವರನ ವಚನಗಳು**

ಪ್ರಭೇದ : ವಚನ                ಸಂಖ್ಯೆ : ೯೫೭

ಕರ್ತೃ : ಬಸವಣ್ಣ

ಕಾಲ : ಸು. ೧೧೬೭

ಸಂಪಾದಕ : ಹಳಕಟ್ಟಿ (ಫಕ್ಕೀರಪ್ಪ ಗುರುಬಸಪ್ಪ)
ಜ. ೨-೭-೧೮೮೦   ಮ. ೨೯-೬-೧೯೬೪

ಆಕಾರ : ೨೧×೧೩ ಸೆ. ಮಿ.

ಪುಟ : ೧೩೫

ಸ್ಥಳ : ವಿಜಾಪುರ

**ಆವೃತ್ತಿ :** ಪ್ರಥಮ

**ಮಿತಿ :** ೧೯೫೦ ?

**ಬೆಲೆ :** ೨=೦೦ ರೂ.

**ಆಕರ :** ಶಿವಾನುಭವ ಗ್ರಂಥಮಾಲಾ, ೧

**ಸಾರಾಂಶ :** ಬಸವಣ್ಣನವರ ಷಟ್‌ಸ್ಥಲ ಕಟ್ಟಿನ ವಚನಗಳನ್ನೇ ಇದರಲ್ಲಿ ಭಿನ್ನರೀತಿಯಲ್ಲಿ ಹೆಣೆಯಲಾಗಿದೆ.

"ಮಹಾನುಭಾವರಾದ ಬಸವೇಶ್ವರನ ತತ್ವಗಳು ತೀವ್ರವಾಗಿ ಮತ್ತು ಸ್ಫುಟವಾಗಿ ತಿಳಿಯುವಂತೆ ವಿಷಯಗಳ ಸಂಗ್ರಹವು ಈಗಿನ ಗ್ರಂಥದಲ್ಲಿ ಮಾಡಲ್ಪಟ್ಟಿದ್ದಲ್ಲದೆ ಬಸವೇಶ್ವರನ ಎಲ್ಲ ವಚನಗಳು ವಿಷಯಾನುಸಾರವಾಗಿ ಇದರಲ್ಲಿ ಸೇರ್ಪಡೆ ಮಾಡಲ್ಪಟ್ಟವೆ. ಈ ವಿಷಯಗಳು ಧಾರ್ಮಿಕ, ನೈತಿಕ, ಸಾಮಾಜಿಕ ಹೀಗೆ ಅನೇಕ ವಿಧವಾಗಿವೆ. ಅವುಗಳ ಸಂಬಂಧವಾಗಿ ಬಸವೇಶ್ವರನ ವಿಚಾರಗಳೇನಿವೆಯೆಂಬುದನ್ನು ಈ ಗ್ರಂಥದ ಮೂಲಕ ವಾಚಕರು ಸುಲಭದಲ್ಲಿ ಅರಿತುಕೊಳ್ಳಬಹುದು."

—ಸಂಪಾದಕರ 'ಪ್ರಸ್ತಾವನೆ'ಯಿಂದ

೨೭೪

**ಗ್ರಂಥ : ಜಂಗಮು ಕಾಲಜ್ಞಾನಮು**

**ಪ್ರಭೇದ :** ಗದ್ಯ

**ಆಕಾರ :** ಕಾಗದ. ೧೨·೫ × ೭·೫ ಸೆ.ಮಿ.

**ಪತ್ರ :** ೪೯

**ಸಾಲು :** ೨೧

**ಸಾರಾಂಶ :** ಬಸವಣ್ಣನವರ ಚರಿತ್ರೆಯೂ ಇದರಲ್ಲಿ ಹೇಳಲ್ಪಟ್ಟಿದೆ. DCTM, ದಲ್ಲಿ ಹೀಗೆ ಬರೆದಿದೆ :

"It contains also an account of **Basaveswar**, Kampli Empire, Kumararama and the King of Vijayanagar."

—p. 2344

---

ಆಕರ :

೧. Descriptive Catalogue of Telugu Manuscripts-Madras, vol. IX, MS. No. 2090, p. 2344

೨೭೫

**ಗ್ರಂಥ : ಬಸವ ಕಲ್ಯಾಣ**

**ಪ್ರಭೇದ :** ಯಕ್ಷಗಾನ

**ಕರ್ತೃ :** ಅನುಮೋದನ ಸನ್ಯಾಸಿ

**ಕಾಲ :** ಸು. ೧೮೦೦

**ಸಾರಾಂಶ :** ಗ್ರಂಥದ ಬಗೆಗೆ 'ಬಸವತತ್ವ ರತ್ನಾಕರ'ದ ಕರ್ತೃಗಳು ಹೀಗೆ ಹೇಳಿರುವರು : "ಇದರಲ್ಲಿ ( ಕವಿ ) ಬಸವಣ್ಣನವರ ವರ್ಣನೆಯನ್ನು ವಿಶೇಷವಾಗಿ ಮಾಡಿರುತ್ತಾನೆ." ಅಪ್ರಕಟಿತ.

ಬಸವಣ್ಣನವರ ಜನನ ಮತ್ತು ಮದುವೆ- ಇವುಗಳಿಗೆ ಸಂಬಂಧಿಸಿದ ಘಟನೆಗಳ ವರ್ಣನೆಯನ್ನೊಳಗೊಂಡಿದೆಯೆಂದು 'ಶಿರೋನಾಮು'ದಿಂದ ಅನುಮಾನಿಸಲು ಸಾಧ್ಯವಿದೆಯೆಂದು ಶ್ರೀ ಬಂಡಾರು ತಮ್ಮಯ್ಯಗಾರರು ತಿಳಿಸಿರುವರು.

---

ಆಕರ:

೧. ಬಸವತತ್ವ ರತ್ನಾಕರ ಪು. ೬೧೦

೨೭೬

**ಗ್ರಂಥ :** ಬಸವ ಕಲ್ಯಾಣಂ

**ಪ್ರಭೇದ :** ಕಾವ್ಯ

**ಕರ್ತೃ :** ಕರ್ರಿ ಭೀಮಲಿಂಗ ಕವಿ

**ಕಾಲ :** ಸು. ೧೯೨೫

**ಪುಟ :** ೩೦

**ಸ್ಥಳ :** ನರಸಣ್ಣಪೇಟ (ಆಂಧ್ರ)

**ಬೆಲೆ :** ೦–೮–೦ ಆಣೆ

**ಸಾರಾಂಶ :** ಇದರಲ್ಲಿ ಬಸವಣ್ಣನವರ ಮದುವೆಯ ವಿವರವಿದೆಯಾಗಿ ಶ್ರೀ ಬಂಡಾರು ತಮ್ಮಯ್ಯನವರು ತಿಳಿಸಿರುವರು.

೨೭೭

**ಗ್ರಂಥ :** ಬಸವ ಚರಿತ್ರ

**ಕರ್ತೃ :** ಬಚ್ಚು ಸಿದ್ಧಕವಿ

**ಆಕಾರ :** ತಾಡವೋಲೆ. ೧೧¾ × ೧-¾ ಇಂಚು

**ಪುಟ :** ೩೬೬

**ಸಾಲು :** ೭

**ಸಾರಾಂಶ :** ಬಸವಣ್ಣನವರ ವರ್ಣನೆ ಇದರಲ್ಲಿದೆ. ಕಥಾನಿರೂಪಣೆ ಶೈಲಿಗಳಲ್ಲಿ ಪಾಲ್ಕುರಿಕಿ ಸೋಮನಾಥಕವಿಯ ಬಸವ ಪುರಾಣವನ್ನು ಹೋಲುತ್ತದೆ. ಅಪ್ರಕಟಿತ. ಕವಿಯು 'ಮರಿಬಸವ ಪುರಾಣ' ಎಂಬ ಮತ್ತೊಂದು ಕಾವ್ಯವನ್ನು ಬರೆದಿರುವನು.

---

ಆಕರ :


೧. Descriptive Catalogue of the Telugu Manuscripts–Madras, vol. iv, No. 963, p. 1272

೨. ಅದೇ vol. XIV, 26, p. 33

೩. Triennial Catalogue of Telugu Mss. vol. III, part III R. No. 556

೪. ಬಸವತತ್ತ್ವ ರತ್ನಾಕರ, ಪು. ೬೯೦–೬೯೧

೨೭೮

## ಗ್ರಂಥ : ಬಸವ ಚರಿತ್ರ

**ಪ್ರಭೇದ :** ಗದ್ಯ ಆಶ್ವಾಸ: ೭

**ಸಾರಾಂಶ :** ಗ್ರಂಥವು ಅಸಮಗ್ರವಿರುವದರಿಂದ ವಿಶೇಷವೇನೂ ತಿಳಿಯುವದಿಲ್ಲ. ಗದ್ಯದಲ್ಲಿದೆ. ಬಸವಣ್ಣನವರ ಜೀವನ ಚರಿತ್ರೆಗೆ ಸಂಬಂಧಿಸಿದ ಅನೇಕ ಸಂಗತಿಗಳನ್ನೊಳಗೊಂಡಿದೆ. ಇತರ ಶರಣರ ಚರಿತ್ರೆಗಳು ಸಹ ಇದರಲ್ಲಿ ಹೇಳಲ್ಪಟ್ಟಿವೆ. ಕರ್ತೃವಿನ ಬಗೆಗೆ ತಿಳಿದಿಲ್ಲ.

DCTM ದಲ್ಲಿ ಹೀಗೆ ಬರೆದಿದೆ:

"Folio 64 Commences the historic account of **Basaveswara** and many legends attributed to his life" —p. 33

"The remaining folios deal with **Basava** the famous Saivite and some stories of devotees like Siriyala, Bijjala Maddivalu Machayya, Kalahasti Kannaya, Mugdha Sangayya, etc. Neither the date of the record, nor the author nor the scribe can be found any where." —p. 41

ಇದು ಗದ್ಯದಲ್ಲಿದ್ದಂತೆ ತೋರುತ್ತದೆ. ಕೊನೆಯವಾಕ್ಯವು ಇಂತಿದೆ :

"ಇದಿ **ಬಸವಪುರಾಣ ಕಥಾಕ್ರಮು** ಸಂಪೂರ್ಣಮು **ಸಪ್ತಮಾಶ್ವಾಸಮು.**"

—ಪು. ೪೨

---

ಆಕರ :

೧. Descriptive Catalogue of Telugu Manuscripts- Madras, vol. XIV, Ms. No. 128, p. 33, Ms. No. 143, p. 41-42

೨೭೯

## ಗ್ರಂಥ : ಬಸವ ದಂಡನಾಯಕ ವೃತ್ತಾಂತಮು

**ಸಾರಾಂಶ :** ಇದರ ಹಸ್ತಪ್ರತಿಯು ಮದ್ರಾಸ ಪ್ರಾಚ್ಯಲಿಖಿತ ಪುಸ್ತಕ ಭಂಡಾರದಲ್ಲಿ ಇದೆ ಎಂದು 'ಬಸವತತ್ವ ರತ್ನಾಕರ'ದ ಕರ್ತೃಗಳು ಹೇಳಿರುವರು.

---

ಆಕರ :

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೩

೨. ಬಸವತತ್ವರತ್ನಾಕರ, ಪು. ೬೯೧

೩೯೨

**ಗ್ರಂಥ : Selected Sayings of Basava**

**ಪ್ರಭೇದ :** ವಚನ-ಅನುವಾದ **ಸಂಖ್ಯೆ :** ೨೨೬

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಅನುವಾದಕ :** ಬಾಗಿ (ಸಿ. ಎಸ್.)

**ಆಕಾರ :** ೧೮ × ೧೨ ಸೆ. ಮಿ.

**ಪುಟ :** x + ೮೨ = ೯೨

**ಸಾಲು :** ೨೮

**ಸ್ಥಳ :** ಬೆಳಗಾವಿ

**ಪ್ರಕಾಶಕ :** ಶ್ರೀ ವ್ಹಿ. ಸಿ. ಹೆದ್ದೂರಶೆಟ್ಟಿ, ಗೌರವ ಕಾರ್ಯದರ್ಶಿ, ವಚನ ಮಂಟಪ

**ಆವೃತಿ :** ಪ್ರಥಮ

**ಮಿತಿ :** ೧೯೫೨

**ಬೆಲೆ :** ೧=೦ ರೂ.

**ಸಾರಾಂಶ :** ಇದರಲ್ಲಿ Yearning, Purity, Holiness, Worship, Faith, Union, — ಈ ಆರು ಶಿರೋನಾಮಗಳಿಗೆ ಸಂಬಂಧಿಸಿದ ೨೨೬ ಬಸವಣ್ಣನವರ ವಚನಗಳ ಅನುವಾದವನ್ನು ಗೀತರೂಪದಲ್ಲಿ ಸಂಗ್ರಹಿಸಿದೆ.

ವಚನಗಳ ಅನುವಾದದ ವಿಷಯಕ್ಕೆ ಅನುವಾದಕರು ಹೇಳುವದು ಹೀಗೆ :

"To expect a translation to do in a foreign language what Basava did in his own eight hundred years ago, is perhaps too much to expect of a language, and still more of a translator. Languages are jealous, says a poet and have to be wooed assiduosly before they surrender their best treasures The wooers too, alas, have rarely the necessary gifts to make them good lovers. But in an understanding like the present one, not to have wooed would have been a worse failure than to have wooed an failed.

" A sincere attempt has been made in these renderings to produce as much of the sense and effect of the originals as was possible at a first venture. Suggestions for improvement would be highly appreciated and carried out in the next impression."

— From-Translator's note

೩೯೩

**ಗ್ರಂಥ : Shree Basaveshwara**

**ಪ್ರಭೇದ :** ಚರಿತ್ರೆ

**ಕರ್ತೃ :** ಪುರಾಣಿಕ (ಅನ್ನದಾನಯ್ಯ)

**ಕಾಲ :** ಸು. ೧೯೨೫

**ಆಕಾರ :** ೧೩·೫×೧೦·೫ ಸೆ. ಮಿ.

**ಪುಟ :** ೨ + ೧೨ = ೧೪

**ಸಾಲು :** ೨೦

**ಸ್ಥಳ :** ಬೆಂಗಳೂರು

**ಪ್ರಕಾಶಕ :** ಅನುಭವ ಮಂಟಪ, ಶ್ರೀ ಸರ್ಪಭೂಷಣಮಠ

**ಆವೃತ್ತಿ :** ಪ್ರಥಮ

**ಮಿತಿ :** ಬಸವ ಜಯಂತಿ, ೨೯–೪–೧೯೬೦

**ಸಾರಾಂಶ :** ಪ್ರಾರಂಭದ ೭ ಪುಟಗಳಲ್ಲಿ ಬಸವ ಚರಿತ್ರೆಯನ್ನೂ ಕೊನೆಗೆ ೧೧ ವಚನಗಳ ಅನುವಾದವನ್ನೂ ಕೊಡಲಾಗಿದೆ.

"The message of this Messiah of the 12th century is nothing but the message of Mahatma Gandhi with some terminological alterations here and there, so striking is the similarity between their social philosophies that one is apt to forget the vast gulf of eight hundred years that yawns between them."

—p. 1

೩೯೬

**ಗ್ರಂಥ :** **Shri Basaveswara**

**ಪ್ರಭೇದ :** ಚರಿತ್ರೆ

**ಕರ್ತೃ :** ಕೃಷ್ಣರಾಯ (ಆ. ನ.)

**ಕಾಲ :** ಸು. ೧೯೧೦

**ಸಾರಾಂಶ :** ನಮ್ಮ ಅವಲೋಕನಕ್ಕೆ ದೊರಕಿಲ್ಲ.

---

**ಆಕರ:**

೧. 'ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ' ಗ್ರಂಥದಲ್ಲಿ 'ಶ್ರೀ ಕೃಷ್ಣರಾಯರ ಇತರ ಗ್ರಂಥಗಳು' ಎಂಬ ಕೊನೆಯ ಪುಟದಲ್ಲಿ ಉಲ್ಲೇಖಿಸಲಾಗಿದೆ.

೩೯೭

**ಗ್ರಂಥ :** **Spirit of the Cosmos**

**ಪ್ರಭೇದ :** ವಚನ

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ, ಅನುವಾದಕ :** ಶಿವಮೂರ್ತಿಸ್ವಾಮಿ (ಎಸ್. ಆರ್.)

**ಆಕಾರ :** ೧೦×೮ ಸೆ. ಮಿ.

**ಪುಟ :** ೭೨

**ಸಾಲು :** ೮–೧೨

**ಸ್ಥಳ :** ದಿಲ್ಲಿ

**ಪ್ರಕಾಶಕ :** ಅನುವಾದಕರು

**ಆವೃತ್ತಿ :** ಪ್ರಥಮ

**ಮಿತಿ :** ೧೯೬೪

**ಬೆಲೆ :** ೦೦=೪೦ ಪೈಸೆ

**ಸಾರಾಂಶ:** ಶರಣರ ೧೭ ವಚನಗಳನ್ನು ಇಂಗ್ಲಿಷ್ ಭಾಷೆಯಲ್ಲಿಯೂ ೩೮ ವಚನಗಳನ್ನು ಹಿಂದೀ ಭಾಷೆಯಲ್ಲಿಯೂ ಅನುವಾದಿಸಿಕೊಡಲಾಗಿದೆ. ೧೭ಗಲ್ಲಿ ೧೩ ವಚನಗಳು ಹಾಗೂ ೩೮ರಲ್ಲಿ ೨೯ ವಚನಗಳು ಬಸವಣ್ಣನವರವಾಗಿವೆ.

ಇಲ್ಲಿ ಒಂದು ವಚನದ ಆಂಗ್ಲ ಅನುವಾದವನ್ನು ಕೊಡುವೆವು :

Lo, brothers !
Virtue and vice depend upon our will.
If 'sir' be said, is Heaven !
If abuses are used, is Hell !
'O Lord ! holy and victor
the devotee is !!
In these words surely Heaven is !
Kudala sangam deva'

ಇದರ ಹಿಂದೀ ಭಾಷಾಂತರ ಇಂತಿದೆ :

ದೇಖಿಯೆ ! ಭಾಯಿಯೊ ಪುಣ್ಯ ಔರ ಪಾಪ,
ಅಪನಿ ಇಚ್ಛಾಪರ ಹೀ ನಿರಭರ್ ಹೈ !
'ಸಜ್ಜನೋ !' ಕಹನಾ ಹೀ ಸ್ವರ್ಗ ಹೈ !
'ಅರೆ, ಅಬೆ' ಕಹನಾ ಹೀ ನರಕ ಹೈ !'
'ದೇವ, ಭಕ್ತ, ಪವಿತ್ರ ಔರ ವಿಜಯೀ ಹೈ !'
ಹೆ, ಕೂಡಲ ಸಂಗಮ ದೇವ !

ವಿನೋಬಾ ಭಾವೆಯವರು ೨೯-೪-೧೯೫೮ರಲ್ಲಿ ಭೂದಾನಯಜ್ಞ (ಮರಾಠಿ) ಪತ್ರಿಕೆಯಲ್ಲಿ ಬರೆದ ಅಭಿಪ್ರಾಯವನ್ನು ಪ್ರಸ್ತುತ ಗ್ರಂಥದಲ್ಲಿ ಹಾಕಿದುದನ್ನೇ ಎತ್ತಿ ಇಲ್ಲಿ ಕೊಡುತ್ತೇವೆ:

"The work of reform in the field of social and religious thought has been constantly going on in India. Many think that these reforms began after the arrival of the English and men like Raja Ram Mohan Roy and others began that movement. But that is not true. In Karnatak, as far back as eight centuries, Basaveshwar the Great had envisioned the utmost reforms, so we have been thinking of in the twentieth century. He coined a new word for bodily labour **Kayaka**. Bodily labour was the worship of God, to him. He declaired **Kayakave Kailasa** (Labour is Heaven). The meaning of productive labour is really heaven.

"He also placed before the people the ideal that there was no difference between man and woman. Similarly he rejected the authority of any sacred text to weigh heavily on the mind, including that of the Vedas. In sum, he taught those doctrines that are acceptable to the modern mind."

೩೯೬

**ಗ್ರಂಥ: Sri Basaveswara and his Contemporaries**

**ಕರ್ತೃ:** ಜಯರಾಮು (ಎ. ಆರ್.)

**ಕಾಲ:** ಸು. ೧೯೨೫

**ಆಕಾರ:** ೧೮×೧೨ ಸೆ. ಮಿ.

**ಪುಟ:** ೧೮೩

**ಸ್ಥಳ:** ಸಿದ್ಧಗಂಗಾ–ತುಮಕೂರು ಜಿಲ್ಲಾ

**ಪ್ರಕಾಶನ:** ಶ್ರೀ ಸಿದ್ಧಗಂಗಾಮಠ

**ಮಿತಿ:** ೧೯೫೦

**ಬೆಲೆ:** ೩=೦೦ ರೂ.

**ಸಾರಾಂಶ:** ಮುನ್ನುಡಿಯ ಇಂಗ್ಲಿಷ್ ಮೂಲದ ಕನ್ನಡ ಅನುವಾದದಲ್ಲಿ ಗ್ರಂಥದ ಬಗೆಗೆ ಹೀಗೆ ಹೇಳಿದೆ :

" ಈ ಪುಸ್ತಕವನ್ನು ಸಂಪೂರ್ಣವಾಗಿ ತಮಿಳು 'ವಸವ ಪುರಾಣಂ' ಗ್ರಂಥದ ಆಧಾರದಿಂದ ರಚಿಸಿದ್ದಾಗಿದೆ. ತಮಿಳು ಗ್ರಂಥದ ಕರ್ತೃವಿನ ವಿಷಯ ಏನೂ ಗೊತ್ತಿಲ್ಲ. ಭೀಮ ಕವಿಯ ಕನ್ನಡ ಬಸವ ಪುರಾಣದ ಆಧಾರದಿಂದ ಈ ತಮಿಳು ಪುರಾಣ ಆದಂತೆ ಕಾಣುತ್ತದೆ. ಕನ್ನಡದ್ದಾದರೂ ಪಾಲ್ಕುರಿಕಿ ಸೋಮನಾಥನು ಬರೆದ ತೆಲುಗು ಪುರಾಣದ ಆಧಾರದಿಂದ ಆದುದೆಂದು ಹೇಳುತ್ತಾರೆ. ತಮಿಳು ಪುರಾಣದ ಅಜ್ಞಾತ ಕವಿಯು ತನ್ನ ಗ್ರಂಥದ ಆದಿಯ ಪದ್ಯಗಳಲ್ಲಿ ಅದರ ಮೂಲ ವನ್ನು ಕುರಿತು ಹೇಳಿರುವ ಮಾತುಗಳಿಂದ ಇದು ಸ್ಪಷ್ಟವಾಗಿದೆ.

"ಪ್ರಕೃತದಲ್ಲಿ ತಮಿಳು ಪಾಠವನ್ನೇ ಅನುಸರಿಸಲಾಗಿದೆ; ಉಪಯುಕ್ತವಲ್ಲದ ಸ್ವಾರಸ್ಯವಲ್ಲದ ಅಮುಖ್ಯ ಭಾಗಗಳನ್ನು ಬಿಟ್ಟಿದೆ....."

—ಶ್ರೀ ಜಿ. ಪಿ. ರಾಜರತ್ನಂರಿಂದ

**ನೋಡು :** ೧. ಶ್ರೀ ಬಸವೇಶ್ವರರು ಮತ್ತು ಅವರ ಸಮಕಾಲದವರು (ಕನ್ನಡ)

೩೯೭

**ಗ್ರಂಥ : Thoughts of Basava : A book meant to revolutionize the world of religion**

**ಪ್ರಬೇಧ :** ವಚನ **ಸಂಖ್ಯೆ :** ೭೨

**ಕರ್ತೃ :** ಸಂಗನಾಳಮಠ (ಎನ್. ಕೆ.)

**ಕಾಲ :** ಸು. ೧೯೦೦

**ಪುಟ :** ೪ + ೮ + ೧೮ + ೯ = ೩೯

**ಸಾಲು :** ೨೦

**ಸ್ಥಳ :** ವಿಜಾಪುರ

**ಪ್ರಕಾಶಕ :** ಕರ್ತೃ

**ಆವೃತ್ತಿ :** ಪ್ರಥಮ

**ಮಿತಿ :** ೧-೮-೧೯೩೯

**ಬೆಲೆ :** ೦-೮-೦ ಆಣೆ

**ಸಾರಾಂಶ :** ಬಸವಣ್ಣನವರ ಮಹತ್ವದ ೭೨ ವಚನಗಳನ್ನು ಇಂಗ್ಲಿಷ್ ಭಾಷೆಯ ಸರಳ ರಗಳೆಯಲ್ಲಿ ಅನುವಾದಿಸಿಕೊಡಲಾಗಿದೆ. 'ದೇವರು ಒಬ್ಬನೆ', 'ಬಸವಣ್ಣನವರ ಅನುಭವದಲ್ಲಿ ದೇವರು' 'ಸುಳ್ಳು ದೇವತೆಗಳ ತೆಗಳಿಕೆ' 'ದೇವ ಸಾಕ್ಷಾತ್ಕಾರ' 'ಶರಣನಾರು ?' 'ಸಂಗಮನಾಥನಲ್ಲಿ ಬಸವಣ್ಣನವರ ಭಕ್ತಿ' 'ಸಂಗಮ ದೇವನಲ್ಲಿ ಸಮರ್ಪಣಭಾವ' 'ಜಾತೀಯತೆಯ ನಿರ್ಮೂಲನೆ' 'ನೀತಿ'—ಇತ್ಯಾದಿ ವಿಷಯಗಳಲ್ಲಿ ವಿಭಜಿಸಿ ವಚನಗಳನ್ನು ಭಾಷಾಂತರಿಸಿದೆ. ಆದಿಯಲ್ಲಿ ಲೇಖಕರ ಉತ್ತಮವಾದ ಪ್ರಸ್ತಾವನೆಯಿದೆ. ಅಂತ್ಯದಲ್ಲಿ ವಚನಗಳ ಸಾರವನ್ನು ತುಲನಾತ್ಮಕ ದೃಷ್ಟಿಯಿಂದ ವಿವೇಚಿಸಿ, ಹಿರಿಮೆಯನ್ನು ವಿವರಿಸಿದ್ದಾರೆ.

ಡಾಕ್ಟರ ಪಿ. ಜಿ. ಹಳಕಟ್ಟಿಯವರು ಗ್ರಂಥದ ಮುನ್ನುಡಿಯಲ್ಲಿ ಹೀಗೆ ಅಭಿಪ್ರಾಯ ಪಟ್ಟಿರುವರು :

"The Vachanas are short pithy sayings and display deep thought and meaning. They appeal to the mind very powerfully and are very impressive, being deeply spiritual. In fact they form a unique kind of literature in Kannada in as much as the like of them are not found in any other Indian literature.

"The sayings are very pure in thought and inculcate absolute morality and good behaviour in the devotee. The sayings indicate that the Lingayats are no haters of the world, nor of the daily avocations which one has to pursue to earn one's daily bread, but enjoin right behaviour in all the vicissitudes of life, which ultimately results in the full unfoldment of what is best and noble in man.

"The oneness of the almighty power the importance of the ethical system of the Lingayats,the hollow nature of the so called caste system, the metophysical principle of the Lingayats are all well expressed in the **'Thoughts of Basava'** and the selections made by Mr. N. K. Sanganalmath. His book vividly presents the broad features of Lingayats."

— Forward, p. 2-3

೩೯೮

**ಗ್ರಂಥ :** **Thus Spake Basava**

**ಪ್ರಭೇದ :** ವಚನ **ಸಂಖ್ಯೆ :** ೧೦೮

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಅನುವಾದಕ :** ಥಿಯೋಡರ್ (ಎ. ಸುಂದರರಾಜ) ಮತ್ತು (ಸು. ೧೯೧೦)
ಹಕಾರಿ (ದೇವೇಂದ್ರಕುಮಾರ) (೧೯೩೧)

**ಪುಟ :** ೮೬

**ಸ್ಥಳ :** ಬೆಂಗಳೂರು

ಪ್ರಕಾಶಕ : ಶ್ರೀ ಬಿ. ಡಿ. ಜತ್ತಿ. ಅಧ್ಯಕ್ಷರು, ಬಸವ ಸವಿ.ತಿ

ಆವೃತ್ತಿ : ಪ್ರಥಮ

ಮಿತಿ : ೧೯೬೬

ಬೆಲೆ : ೦ = ೫೦ ಪೈಸೆ

ಸಾರಾಂಶ : 'ಬಸವ ವಚನಾಮೃತ' ಸಂಗ್ರಹದಲ್ಲಿಯ ಬಸವಣ್ಣನವರ ೧೦೮ ವಚನಗಳನ್ನೇ ಅನುವಾದಿಸಲಾಗಿದೆ.

"ಅನುವಾದಕರ ಪ್ರಸ್ತಾವನೆ ಮತ್ತು ಪುಸ್ತಕದ ಕೊನೆಯಲ್ಲಿರುವ ವ್ಯಾಖ್ಯಾನ-ವಿವರಣೆ ಪಾಂಡಿತ್ಯಪೂರ್ಣವಾಗಿವೆ. ಭಾಷೆ ಹಾಗು ಕಾವ್ಯ ಸೌಂದರ್ಯದ ದೃಷ್ಟಿಯಿಂದ ಕನ್ನಡದ ಸಾಲುಗಳನ್ನು ಇಂಗ್ಲೀಷಿಗೆ ಅನುವಾದಿಸುವಾಗ ಸೂಕ್ತವಾದ ರೀತಿಯಲ್ಲಿ ಮಾರ್ಪಾಟು ಮಾಡಿಕೊಂಡು, ಅರ್ಥ ಲೋಪವಾಗದಂತೆ ಎಚ್ಚರಿಕೆ ವಹಿಸಿರುವದು ಪ್ರಶಂಸಾರ್ಹ. ಶ್ರೀ ಬಿ. ಡಿ. ಜತ್ತಿಯವರ ವಿಮರ್ಶಾತ್ಮಕ ಮುನ್ನುಡಿ ಈ ಪುಸ್ತಕದ ಉದ್ದೇಶ ಹಾಗು ಗುಣಗಳನ್ನು ಗ್ರಹಿಸಲು ಸಹಾಯಕವಾಗಿದೆ."

— ಸಂಯುಕ್ತಕರ್ನಾಟಕ ಪತ್ರಿಕೆಯ, ೧೯೬೬ ಆಗಸ್ಟ ೧೫ರ
ಸಂಚಿಕೆಯಲ್ಲಿ ಪ್ರಕಟವಾದ 'ವಿಮರ್ಶೆ'ಯಿಂದ

೩೯೯

**ಗ್ರಂಥ : Vacanas of Basavanna : A selection**

ಪ್ರಭೇದ : ವಚನ ಸಂಖ್ಯೆ : ೧೬೦

ಕಾಲ : ಸು. ೧೧೬೭

ಅನುವಾದಕರು : ಮೆನೆಜಿಸ್ (ಅರ್ಮ್ಯಾಂಡೊ) ಮತ್ತು ಅಂಗಡಿ (ಎಸ್. ಎಂ.)

ಆಕಾರ : ೧೮ × ೧೨ ಸೆ. ಮಿ.

ಪುಟ : ೪ + ೩ + ೧೬೦ = ೧೬೭

ಸಾಲು : ೭ – ೧೭

ಸ್ಥಳ : ಸಿರಿಗೆರೆ (ಚಿತ್ರದುರ್ಗ ಜಿಲ್ಲೆ)

ಪ್ರಕಾಶಕ : ಶ್ರೀ ಎಸ್. ಟಿ. ಶಾಂತವೀರಪ್ಪ, ಅಣ್ಣನ ಬಳಗ

ಆವೃತ್ತಿ : ಪ್ರಥಮ

ಮಿತಿ : ೧೯೬೫

ಬೆಲೆ : ೧=೦ ರೂ.

ಸಾರಾಂಶ : ಪ್ರೊ. ಬಸವನಾಳರು ಸಂಪಾದಿಸಿದ 'ಶ್ರೀ ಬಸವಣ್ಣನವರ ಷಟ್‌ಸ್ಥಳ ವಚನಗಳು' ಗ್ರಂಥದಲ್ಲಿಯ ೯೫೭ ವಚನಗಳ ಸಮಗ್ರ ಅನುವಾದವು ಸಿದ್ಧವಾಗಿದ್ದು ಅಚ್ಚಿನಲ್ಲಿದೆ. ಅಷ್ಟಶತಮಾನೋತ್ಸವದ ನೆನಪಿಗಾಗಿ ಡಿಶಂಬರ (೧೯೬೭) ತಿಂಗಳಲ್ಲಿ ಅದು ಪ್ರಕಟವಾಗುವ ನಿರೀಕ್ಷೆಯಿದೆ. ಆ ಸಮಗ್ರ ಗ್ರಂಥದಲ್ಲಿಯ ೧೬೦ ವಚನಗಳನ್ನು ಆಯ್ದು ಪ್ರಸ್ತುತ ಗ್ರಂಥದಲ್ಲಿ ಮುದ್ರಿಸಲಾಗಿದೆ.

"The task seemed will worth undertaking, for two reasons. In the first place, because the Vacanas of Basavanna, while inclulcating the most practical rules of conduct, reflect a spiritual personality of the highest order, which draws from one spontaneous reverence as well as love. Secondly, because his Vacanas have a unique literary quality which sets them apart from any other such utterances of mystics of both East and West.

"As far as we can gather from the Vacanas in the selection that follows, Basavanna was — like many other saints — that paradox one who was anxious to work within a faith, yet believed that faith was useless without works; one who would not neglect ritual, yet strongly held that ritual without humility and love and a pure heart was a mockery; one who taught worship of God, yet placed unconditional surrender to God above His worship; one who denounced the vanity of wor'dly good, yet believed they were good to be given away to God and his saints. He was a true mystic, a God-intoxicated man, filled with a possionate, almost carnal, aspiration for God; and yet he was a leader tenderly, almost pathetically, anxious to keep the community of saints together. He preached the most utter humility, the most perfect courtesy and yet did not spare any form of insincerity and sanctimonious fraud. He taught renunciation as well as courage, and, saw in suffering one way to redemption. God is the smith who shall hammer his soul to perfection. God is the musician who shall draw from his heart the music of the spheres.

"However, Basavanna's imagery does not always soar so high. He is addressing himself to the simple folk, unschooled in philosophy and literature. So his images are drawn from daily life and from common experience. We are never very far from the kitchen hearth, and can smell the dung-cakes burning and hear the clatter of the pots and pans. Homely images of milk and cream, of sugar and jaggery recur; we can hear the ox at the oil-mill; the washerman beating his clothes on the washing-stone. There is the snake and the snake-charmer; there are clay dolls, and the puppets dangle; birds and beasts the most familiar, the monkey and the dog preeminent among them. We are ever conscious of tanks and rivers and wells; and of the jungle, where the jackal, the tigher and the elephant loom. There are the homeliest of birds, too : the crow and the hen; but also the peacock and the swan. The bee hums in the champak flower, and the lotus blooms in the lake. The moon shines or is strangled in eclipse; a house burns, or a hay-stack. There are images rooted in legend, and others which smack of proverbial sayings. There are images drawn from the theatre or the market-place; from popular beliefs- like the talisman, the philosopher's stone and the secret fire in the sea. Single-minded, unswerving devotion to God finds a parallel in the fidelity of a wife. Humility is represented by the household drudge, sidling, shrinking and mumbling before his master. In the supreme rapture of divine love, the mystic is the spouse in the ecstasy of complete union."

—Preface, p. 1-3

"ಈ ಕಾರ್ಯ (ಅನುವಾದ) ವಹಿಸಲರ್ಹವಾಗಿದೆ. ಆದಕ್ಕೆ ಕಾರಣ ಎರಡು : ಒಂದು, ಬಸವಣ್ಣನವರ ವಚನಗಳು ನೈತಿಕ ಶೀಲದ ಅತ್ಯಂತ ವ್ಯವಹಾರಿಕವಾದ ಸೂತ್ರಗಳನ್ನು ಬೋಧಿಸುತ್ತಿದ್ದರೂ ನೈಜ ಗೌರವ, ಸಹಜ ಭಕ್ತಿಯನ್ನು ಸೆಳೆಯಬಲ್ಲ ಉನ್ನತ ದರ್ಜೆಯ ಆಧ್ಯಾತ್ಮಿಕ ಪ್ರಭೆಯನ್ನು ಪ್ರತಿಬಿಂಬಿಸುತ್ತವೆ. ಎರಡು, ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂತರ ನುಡಿಗಳಿಗೆ ತೀರ ಭಿನ್ನವಾದ ಸ್ಥಾನವನ್ನು ಅಲಂಕರಿಸಬಲ್ಲ ವಿಶಿಷ್ಟವಾದ ಸಾಹಿತ್ಯಿಕ ಲಕ್ಷಣವನ್ನು ಹೊಂದಿವೆ.

"ಈ ಸಂಗ್ರಹದಲ್ಲಿ ಪ್ರಕಟವಾದ ವಚನಗಳಲ್ಲಿ ನಮಗೆ ಗೋಚರಿಸಿವಂತೆ, ಬಸವಣ್ಣನೂ ಕೂಡ ಇನ್ನಿತರ ಶರಣರ ಹಾಗೆ ವಿಲಕ್ಷಣ ಪುರುಷ : ಒಂದು **ಪಂಥದ**

**ವಿಶಿಷ್ಟ ವರ್ತುಲದಲ್ಲಿಯೇ** ಕಾರ್ಯಮಾಡಬೇಕೆಂದು ಕಾತರಿಸಿದವ, ಆದರೂ ಕ್ರಿಯಾಶೂನ್ಯ ಪಂಥ ನಿರರ್ಥಕವೆಂದು ನಂಬಿದವ; ಧಾರ್ಮಿಕ ವಿಧಿಗಳನ್ನು ತ್ಯಜಿಸಲಾರ, ಆದರೂ ಭಕ್ತಿ, ವಿನಯ, ಪರಿಶುದ್ಧ ಹೃದಯಗಳಿಂದೊಡಗೂಡಿದ ವಿಧಿ ಧರ್ಮದ ವಿಡಂಬನೆ ಎಂಬ ಅಭಿಪ್ರಾಯಕ್ಕೆ ಗಟ್ಟಿಯಾಗಿ ಅಂಟಿಕೊಂಡವ; ಶಿವಪೂಜೆ ಅವಶ್ಯವೆಂದು ಬೋಧಿಸಿದ, ಆದರೂ ಶಿವಪೂಜೆಗಿಂತ ಶಿವಾರ್ಪಣಕ್ಕೆ ಹೆಚ್ಚಿನ ಬೆಲೆಯನ್ನಿತ್ತ; ಸಾಂಸಾರಿಕ ವಸ್ತು ಒಡವೆಗಳ ಅಭಿಮಾನವನ್ನು ಹಳಿದ, ಆದರೂ ಶಿವನಿಗೆ ಶಿವಶರಣರಿಗೆ ಅರ್ಪಿಸಲಿಕ್ಕೆ ಯೋಗ್ಯವಾದವುಗಳೆನ್ನುವ ನಿಷ್ಠೆ ಅವನದು. ನಿಜವಾದ ಅನುಭಾವಿ, ಶಿವನ ಮೋಹದಿಂದ ಮತ್ತನಾದ ಭಕ್ತ, ಶಿವನನ್ನು ಅರ್ಚಿಸಿ, ಮೋಹಿಸಿ, ಮರುಳಾಗಿ ಸೋತು ಸೆರೆಯಾದವ, ಶರಣರ ಮೇಳವನ್ನು ಕಾಯ್ದಿರಿಸಿ ಕೊಂಡಿರಬೇಕೆಂದು ತವಕಿಸಿದ ಅವರ ನೆಚ್ಚಿನ ನಾಯಕ. ಆತ ಅತ್ಯಂತ ಕಿಂಕಿಲ ಭಾವ, ಕಾರ್ಯದಾಸೋಹಗಳನ್ನು ಬೋಧಿಸಿದ; ಆದರೂ ಯಾವುದೇ ಭಾವನೆ ಡಾಂಬು-ಡಾಂಭಿಕತೆಗಳನ್ನು, ಕಪಟ-ವಂಚನೆಗಳನ್ನು ಖಂಡಿಸದಿರಲಿಲ್ಲ. ಧೈರ್ಯ ವೈರಾಗ್ಯಗಳನ್ನು ಬೋಧಿಸಿದರೂ ಅನುತಾಪದಲ್ಲಿಯೇ ಒಂದು ಬಗೆಯ ಮೋಕ್ಷವನ್ನು ಕಂಡ. ಶಿವ ಅವನ ಆತ್ಮವನ್ನು ಕಡಿದು ಬಡಿದು ಕಡಿವಾಣವ ಮಾಡಿ ಆ ಶಗಣರ ಪಾದಕ್ಕೊಂದು ತೊಡಿಗೆಯ ಮಾಡಿದ ವಿಶ್ವಕರ್ಮಿ. ಖುರದಲ್ಲಿ ಒತ್ತಿ ನಕ್ಷತ್ರ ಗಾನವನ್ನು ಹಾಡಿಸಿದ ವೈಣಿಕ.

"ಆದರೂ ಬಸವಣ್ಣನವರ ಪ್ರತಿಮಾಶಕ್ತಿ ಎಲ್ಲ ಕಾಲಕ್ಕೂ ಇದೇ ಎತ್ತರದಲ್ಲಿ ಹಾರುತ್ತದೆಂದಲ್ಲ. ಅವರ ನುಡಿ ಸಾಹಿತ್ಯ, ತತ್ವದರ್ಶನಗಳ ಸೋಂಕು ಸಹ ಇಲ್ಲದ ಸಾಮಾನ್ಯರನ್ನು ತಲ್ಪಬೇಕಾಗಿತ್ತು. ಆದ್ದರಿಂದ ಅವರ ಪ್ರತಿಮೆಗಳೆಲ್ಲ ಮೂಡಿಬಂದುದು ದಿನದ ಬದುಕಿನಿಂದ, ಸಾಮಾನ್ಯ ಅನುಭವದಿಂದ. ನಾವು ಯಾವಾಗ್ಯೂ ಅಡಿಗೆ ಮನೆಯಿಂದ ದೂರ ತೆರಳಬೇಕಾಗಿಲ್ಲ; ಹೊತ್ತಿದ ಕುಳ್ಳಿನ ಹೊಗೆ ನಾಶಿಕವನ್ನು ತಲ್ಪುತ್ತಿದ್ದರೆ, ಕಂಚು ತಾಮ್ರದ ಪಾತ್ರೆಗಳ ಸಪ್ಪಳ ಕಿವಿಗೆ ಬೀಳುತ್ತದೆ. ಹಾಲು, ಕೆನೆ, ಬೆಲ್ಲ, ಸಕ್ಕರೆಯ ಬಳಕೆಯ ಪ್ರತಿಮೆಗಳು ಪುನಃ ಪುನಃ ಬರುತ್ತವೆ. ಗಾಣದೆತ್ತಿನ ಗೊರಕೆ, ಮಡಿವಾಳ ಬಟ್ಟೆಗಳನ್ನು ಬಡಿಯುವ ಪೆಟ್ಟುಗಳು ಕೇಳ ಬರುತ್ತವೆ. ಅಲ್ಲಿ ಹಾವು, ಹಾವಾಡಿಗರ ಮೋಡಿ ಇದೆ. ಗೊಂಬೆ ಗೊಂಬೆಗಳ ಆಟವಿದೆ. ಖಗ ಮೃಗಗಳ ನೆಗೆದಾಟವಿದೆ. ಮೃಗಗಳಲ್ಲಿ ಮಂಗ ನಾಯಿಗಳಿಗೆ ಪ್ರಾಮುಖ್ಯತೆಯಿದೆ. ಕೆರೆ, ಹೊಳೆ, ಬಾವಿ ನನ್ನ ಸ್ಮೃತಿಪಟಲದಿಂದ ದೂರಾಗುವದಿಲ್ಲ. ಕೋಳಿ ಕಾಗೆಗಳಂಥ ಬಳಕೆಯ ಹಕ್ಕಿಗಳಿವೆ. ಜೊತೆಗೆ ಹಂಸ ನವಿಲುಗಳು ಇಲ್ಲದಿಲ್ಲ. ಸರೋವರದಲ್ಲಿ ಕಮಲ ಅರಳುತ್ತದೆ, ಅದರ ಪರಿಮಳಕ್ಕೆಳಸಿದ ತುಂಬಿ ಝೇಂಕರಿಸುತ್ತದೆ. ಚಂದ್ರ ಬೆಳಗುತ್ತಾನೆ, ಇಲ್ಲವೆ ರಾಹುವಿನ ಗ್ರಹಣದಲ್ಲಿ ಸಿಕ್ಕಿ ಸೆರೆಯಾಗಿದ್ದಾನೆ. ಮನೆಯೋ, ಬಣವೆಯೋ ಉರಿಯುತ್ತಿದೆ. ಕೆಲವು ಪುರಾಣ, ದಂತ ಕಥೆಗಳಿಂದೊಗೆದ ಪ್ರತಿಮೆ-

ಗಳಾದರೆ ಇನ್ನು ಕೆಲವು ನಾಣ್ಣುಡಿಯ ಬೆಡಗನ್ನು ಪಡೆದಿವೆ. ಮತ್ತೆ ಕೆಲವು ಸಂತೆಯ ಗೊಂದಲದಿಂದ, ನಾಟ್ಯಮಂದಿರದಿಂದ, ಲೌಕಿಕ ನಂಬಿಗೆಗಳಿಂದ ರೂಪುದಾಳಿನಿಂತಿವೆ.—ತಾಯತ, ಪರುಷ, ಸಮುದ್ರದಲ್ಲಿ ಬೈಚಿಟ್ಟ, ಬಯಕೆಯ ಕಿಚ್ಚು, ಇತ್ಯಾದಿ. ಅಚಲವಾದ, ಏಕಾಗ್ರವಾದ ದೈವೀನಿಷ್ಠೆ ಪತಿವ್ರತೆಯ ಪ್ರೇಮಕ್ಕೆ ಸರಿದೊರೆಯೆನಿಸಿದೆ. ದೈವ ಕಿಂಕಿಲಭಾವ ಒಡೆಯನ ಪಕ್ಕದಲ್ಲಿ ಹುದುಗಿ, ಅಳುಕಿ ಮುದುಡಿಯಾಗಿನಿಂತ ತೊತ್ತಿನ ಪರಿದೊತ್ತಿನ ದಾಸ್ಯಕ್ಕೆ ಎಣೆ. ದೈವೀ ಭಕ್ತಿಯ ಭಾವೋನ್ಮಾದದಲ್ಲಿರುವ ಶರಣ ಸಾಮರಸ್ಯದ ಸಮಾಧಿಯಲ್ಲಿ ಸೆರೆಗೊಂಡ ಸತಿ."

೪೦೦

ಗ್ರಂಥ: **Who is The Founder of The Virasaiva or Lingayat Religion ?**

ಕರ್ತೃ: ಜೀರಗೆ (ಬಸವಲಿಂಗಪ್ಪ)

ಕಾಲ: ಸು. ೧೯೦೦

ಅನುವಾದಕ: ಜೀರಗೆ (ಕೆ. ಬಸವಲಿಂಗಪ್ಪ)

ಆಕಾರ: ೧೮ × ೧೨ ಸೆ. ಮಿ.

ಪುಟ: ೩೩

ಸಾಲು: ೩೨

ಸ್ಥಳ: ಬೆಂಗಳೂರು

ಪ್ರಕಾಶಕ: ಅನುವಾದಕ

ಆವೃತ್ತಿ: ಪ್ರಥಮ

ಮಿತಿ: ೧೯೩೫

ಬೆಲೆ: ೦-೮-೦ ಆಣೆ

**ಸಾರಾಂಶ:** ಬಸವಣ್ಣನವರು ವೀರಶೈವ ಧರ್ಮ ಸಂಸ್ಥಾಪಕರೆಂದು ಶಿಲಾಲೇಖ, ಪುರಾಣ, ವಚನ-ಇತ್ಯಾದಿ ಆಧಾರಗಳನ್ನು ಕೊಟ್ಟು ಸಿದ್ಧಪಡಿಸಲು ಯತ್ನಿಸಲಾಗಿದೆ. ವೀರಶೈವ ಧರ್ಮದ ತಿರುಳು ಬಸವಾದಿ ಶರಣರ ವಚನಾದಿ ಕೃತಿಗಳಲ್ಲಿ ಅಡಗಿದೆಯೇ ಹೊರತು ಇತರ ಗ್ರಂಥಗಳಲ್ಲಿ ಅಷ್ಟು ಸ್ಪಷ್ಟವಾಗಿಲ್ಲವೆಂದು ವಾದಿಸಲಾಗಿದೆ.

ಬಸವಲಿಂಗಪ್ಪನವರ ಭಾವಚಿತ್ರವಿದೆ. ಅಂತ್ಯದಲ್ಲಿ ಶಬ್ದಸೂಚಿಯಿದೆ. ಕರ್ತೃಗಳು ಗ್ರಂಥದ ಕೊನೆಗೆ ಹೇಳಿದ ಮಾತುಗಳು ಹೀಗಿವೆ:

"Conclusions have to be drawn from the tenets proclaimed in the Vachanas by Basava and his colleagues as to the true doctrines of Virasaivism or Lingayetism and not from some later scholars who have deviated from the paths of Basava and colleagues.

"Basava is an original man and has proclaimed his own doctrines and has founded his own schism and has handed down his own scripture."

-p. 28

**ನೋಡು :** ೧. ಶಿವನು ವೀರಶೈವ ಮತದ ಮೊದಲನೇ ಸ್ಥಾಪಕನು.
ಬಸವೇಶನು ವೀರಶೈವ ಮತದ ಎರಡನೇ ಸ್ಥಾಪಕನು.
(ಕನ್ನಡ)

೪೦೧

**ಗ್ರಂಥ : Reveries de Basava**

**ಪ್ರಭೇದ :** ವಚನ **ಸಂಖ್ಯೆ :** ೮೫

**ಕರ್ತೃ :** ಬಸವ

**ಕಾಲ :** ಸು. ೧೧೬೭

**ಅನುವಾದಕ :** ಘಟ್ರಡ್ಯಾಳ (ಮಹೇಶ ಎಚ್)

**ಆಕಾರ :** ೧೮ × ೧೨ ಸೆ. ಮಿ.

**ಪುಟ :** ೯೫

**ಸಾಲು :** ೨೦

**ಸ್ಥಳ :** ಪ್ಯಾರಿಸ್

**ಪ್ರಕಾಶಕ :** ಲೇಖಕ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೦ ?

**ಸಾರಾಂಶ :** ಇದರಲ್ಲಿಯ ಬಸವಣ್ಣನವರ ವಚನಗಳನ್ನು ಮೊದಲು ಕನ್ನಡದಿಂದ ಇಂಗ್ಲಿಷ್ ಭಾಷೆಗೆ ಅನುವಾದಿಸಿದವರು ಪ್ರೊ. ಎಸ್. ಎಸ್. ಬಸವನಾಳ ಮತ್ತು ಪ್ರೊ. ಕೆ. ಆರ್. ಶ್ರೀನಿವಾಸ ಅಯ್ಯಂಗಾರ–ಇವರು. ಇಂಗ್ಲಿಷ್ ಅನುವಾದವನ್ನೇ ಮೂಲದಲ್ಲಿಟ್ಟುಕೊಂಡು ಫ್ರೆಂಚ ಭಾಷೆಗೆ ಅನುವಾದಿಸಲಾಗಿದೆ. ಮೂಲ ಇಂಗ್ಲಿಷ್ ಗ್ರಂಥದಲ್ಲಿ ೮೦ ಬಸವಣ್ಣನವರ ಅನುವಾದಿತ ವಚನಗಳಿವೆ. ಆದರೆ ಪ್ರಸ್ತುತ ಗ್ರಂಥದಲ್ಲಿ ೮೫ ವಚನಗಳಿವೆ.

ಪ್ರಸ್ತಾವನೆಯ ಅನಂತರ ಮೂಲಗ್ರಂಥದಲ್ಲಿಲ್ಲದ ನವಕಲ್ಯಾಣಮಠದ ಕುಮಾರ ಸ್ವಾಮಿಗಳವರು ಬರೆದ ವೀರಶೈವ ವೆಲ್ಟನ್ ಶಾಂಗ್ (La Weltan Schauung Du Viracivaisme) ಎಂಬ ಇಂಗ್ಲಿಷ್ ಲೇಖನದ ಫ್ರೆಂಚ್ ಅನುವಾದವನ್ನು ಜೋಡಿಸಲಾಗಿದೆ.

ಅಕ್ಕಮಹಾದೇವಿಯ ೬ ವಚನಗಳ ಅನುವಾದವನ್ನು ಕೊಡಲಾಗಿದೆ. ಮೂಲ ಇಂಗ್ಲಿಷ್ ಅನುವಾದದಲ್ಲಿ ಸಹ ೬ ವಚನಗಳಿವೆ.

ಗ್ರಂಥಗಳ ಅಂತ್ಯದಲ್ಲಿ **'ಅನುಬಂಧ'**ವಿದ್ದು ಆದರಲ್ಲಿ ಕೆಲವು ವಿಷಯಗಳ ವಿವರಣೆಯಿದೆ.

**ನೋಡು :** ೧. Musings of Basava (ಇಂಗ್ಲಿಷ್)

೪೦೨

**ಗ್ರಂಥ :** ತ್ರಿವಿಧ ಕ್ರಾಂತಿ ಮೂರ್ತಿ ಬಸವಣ್ಣ

**ಪ್ರಭೇದ :** ಚರಿತ್ರೆ

**ಕರ್ತೃ :** ವೃಷಭೇಂದ್ರ ಸ್ವಾಮಿ (ಎಸ್. ಎಂ.)

**ಕಾಲ :** ಜ. ೧-೯-೧೯೩೮

**ಸಾರಾಂಶ :** ಬಸವಣ್ಣನವರ ಮಾನವೀಯ ಹೋರಾಟದ ಜೀವನ, ಧಾರ್ಮಿಕ ಕ್ರಾಂತಿ, ಸಾಮಾಜಿಕ ಕ್ರಾಂತಿ, ಸಾಹಿತ್ಯಿಕ ಕ್ರಾಂತಿ ಇವುಗಳ ವಿವೇಚನೆ ಇದೆ. ಕೊನೆಯಲ್ಲಿ ಆಧುನಿಕ ವೈಜ್ಞಾನಿಕ ಯುಗದ ಮಾನವ ಜನಾಂಗಕ್ಕೆ ಬಸವಣ್ಣನವರು ನೀಡಿದ ಸಂದೇಶವಿದೆ.

ಅಚ್ಚಿನಲ್ಲಿದ್ದು ಕ್ರೌನ ಆಕಾರದಲ್ಲಿ ೧೫೦ ಪುಟಗಳಾಗುವ ನಿರೀಕ್ಷೆಯಿದೆ.

೪೦೩

**ಗ್ರಂಥ :** ಬಸವ ಕವಚ ಮಂತ್ರ

**ಕರ್ತೃ :** ?

**ಕಾಲ :** ಸು. ೧೬೦೦

**ಸಾರಾಂಶ :** ಬಸವಣ್ಣನವರನ್ನು ಕುರಿತು ರಚಿತವಾದ ಗ್ರಂಥಗಳ ಸೂಚಿಯಲ್ಲಿ ಶ್ರೀ ಸಿಂದಿಗಿ ಸಿದ್ಧಪ್ಪನವರು ಪ್ರಸ್ತುತ ಗ್ರಂಥದ ನಾಮನಿರ್ದೇಶ ಮಾಡಿರುವರು.

---

**ಆಕರ :**

೧. ಶ್ರೀ ಬಸವೇಶ್ವರನ ಚರಿತ್ರೆ, ಪು. ೯೫

೪೦೪

**ಗ್ರಂಥ :** ಬಸವಣ್ಣನವರ ದೇವರು

**ಕರ್ತೃ :** ಹುರಳಿ (ಗ. ಶಿ.)

**ಕಾಲ :** ಜ. ೧೯೦೫ ಮ. ೨-೧೨-೧೯೬೦

**ಸಂಪಾದಕ :** ಶ್ರೀ ಚಂದ್ರಶೇಖರ ಗದಿಗೆಪ್ಪ ಹುರಳಿ,

**ಪುಟ :** ೯೦

**ಸ್ಥಳ :** ಧಾರವಾಡ

**ಪ್ರಕಾಶಕ :** ಇಂದೂ ಪ್ರಕಾಶನ

**ಸಾರಾಂಶ :** ಲಿಂಗೈಕ್ಯ ಶ್ರೀ ಗ. ಶಿ. ಹುರಳಿ ಅವರು ತಮ್ಮ ವಾರಪತ್ರಿಕೆಯಾದ 'ಅಂಕುಶ' ದಲ್ಲಿ ವರುಷ ವರುಷವೂ ಬಸವ ಜಯಂತಿಯ ಸಮಯಕ್ಕೆ ಬರೆದು ಪ್ರಕಟಿಸಿದ ೮ ಲೇಖನಗಳನ್ನು ಇದರಲ್ಲಿ ಸಂಗ್ರಹಿಸಿಕೊಡಲಾಗಿದೆ. ಇನ್ನೂ ಅಚ್ಚಿನಲ್ಲಿದೆ.

೪೦೫

**ಗ್ರಂಥ :** **ಬಸವ ಗೀತಾಂಜಲಿ**

**ಪ್ರಭೇದ :** ಕವನಗಳು

**ಕರ್ತೃ :** ಸದಾಶಿವಯ್ಯ (ಟಿ. ಎಚ್. ಎಂ.)

**ಕಾಲ :** ಜ. ಸು. ೧೯೦೫ ಮ. ೮–೧೨–೧೯೬೩

**ಆಕಾರ :** ೧೮ × ೧೨ ಸೆ. ಮಿ.

**ಪುಟ :** ೩೬ ?

**ಸ್ಥಳ :** ಹರಪನಹಳ್ಳಿ

**ಪ್ರಕಾಶಕ :** ವೀರಶೈವ ತರುಣ ಸಂಘ

**ಮಿತಿ :** ೧೯೩೪ ?

**ಸಾರಾಂಶ :** ಬಸವಣ್ಣನವರ ವ್ಯಕ್ತಿತ್ವದ ಹಿರಿಮೆಯನ್ನು ಪ್ರಕಟಪಡಿಸುವ ಕವನಸಂಗ್ರಹವಿದಾಗಿದೆಯೆಂದು ತಿಳಿದು ಬಂದಿದೆ. ನಮ್ಮ ಅವಲೋಕನಕ್ಕೆ ಸಿಕ್ಕಿಲ್ಲ.

೪೦೬

**ಗ್ರಂಥ :** **ಬಸವ ತತ್ವದರ್ಶನ**

**ಪ್ರಭೇದ :** ವಿವಿಧ ಲೇಖಕರು

**ಸಂಪಾದಕ :** ಜತ್ತಿ (ದಾನಪ್ಪ)

**ಆಕಾರ:** ೧೨ × ೧೩ ಸೆ. ಮಿ.

**ಪುಟ :** ೮೧

**ಸ್ಥಳ :** ತಿಕೋಟಾ (ವಿಜಾಪುರ ಜಿಲ್ಹಾ)

**ಪ್ರಕಾಶಕ :** ಜತ್ತಿ (ದಾನಪ್ಪ)

**ಮಿತಿ :** ಬಸವ ಜಯಂತಿ, ೧೯೬೭

**ಬೆಲೆ :** ರೂ. ೧ = ೫೦ ಪೈಸೆ

**ಸಾರಾಂಶ :** ಇದರಲ್ಲಿ ವಿದ್ವಾಂಸರಿಂದ ಬಸವಣ್ಣನವರನ್ನು ಕುರಿತು ಬರೆಯಲ್ಪಟ್ಟ ೧೨ ಲೇಖನಗಳನ್ನು ಸಂಗ್ರಹಿಸಲಾಗಿದೆ :

೧. ಜಗದ್ವಂದ್ಯ ಬಸವಣ್ಣನವರು – ಶ್ರೀ ಸಂಗನ ಬಸವ ಶಿವಯೋಗಿಗಳು ೨. ಅನುತುಂಬಿ – ಶ್ರೀ ಮೃತ್ಯುಂಜಯ ಸ್ವಾಮಿಗಳು, ಕಿರೀಟಮಠ ೩. ಯುಗಪ್ರವರ್ತಕ ಬಸವಣ್ಣನವರು – ಶ್ರೀ ಸ್ವಾದು ೪. ಬಸವ ಪಥ – ಶ್ರೀ ಶಂ. ಗು. ೫. ಬಸವಣ್ಣನವರ ವಚನಗಳಲ್ಲಿ ಬಾಳೆ – ಶ್ರೀ ಶಾಂತರಸ ೭. ಅನುಭಾವಿ ಬಸವಣ್ಣನವರು – ಶ್ರೀ ಬಿ. ಎಚ್. ಶ್ರೀಧರ ೮. ಬದುಕಿನ ರೂವಾರಿ ಬಸವಣ್ಣ– ಶ್ರೀ ಅಬ್ಬಿಗೇರಿ ವಿರುಪಾಕ್ಷಪ್ಪ ೯. ಬಸವನ ಸಂದೇಶ – ಶ್ರೀ ಜಯದೇವ ಕುಮಾರ ೧೦. ಸಮಾಜ ಸುಧಾರಕ ಬಸವಣ್ಣನವರು – ಶ್ರೀಮತಿ ಸರಸ್ವತಿದೇವಿ ಗೌಡರ ೧೧. 'ಕೂಡಲಸಂಗಮು'ದ ರಹಸ್ಯವೇನು ? – ಶ್ರೀ ಈಶ್ವರಚಂದ್ರ ಚಿಂತಾಮಣಿ ೧೨. ಬಸವತತ್ವದರ್ಶನ–ಶ್ರೀ ದಾನಪ್ಪ ಜತ್ತಿ.

ಬಸವಣ್ಣನವರ ೮ನೆಯ ಶತಮಾನೋತ್ಸವದ ಅಂಗವಾಗಿ ಪ್ರಕಟವಾಗಿದೆ.

೪೦೭

**ಗ್ರಂಥ : ಬಸವರಾಜ ದೇವರು**

**ಪ್ರಭೇದ :** ಚರಿತ್ರೆ

**ಕರ್ತೃ :** ಶಿರಹಟ್ಟಿ (ಲಕ್ಕಪ್ಪ ಅ.)

**ಕಾಲ :** ಸು. ೧೯೦೦

**ಆಕಾರ :** ೧೮×೧೨ ಸೆ. ಮಿ.

**ಪುಟ :** ೨೭+೩೩೭=೩೬೪

**ಸ್ಥಳ :** ಬಸವನಬಾಗೇವಾಡಿ

**ಪ್ರಕಾಶಕ :** ಶ್ರೀ ಶಿವಯೋಗೀಶ್ವರಸ್ಮಾರಕ ಬಸವೇಶ್ವರ ಲಿಂಗಾಯತ ಜಾಗ್ರುತ ಸಂಸ್ಥೆ ಪರವಾಗಿ ಶ್ರೀ ಮಹಾಲಿಂಗಪ್ಪ ಚನ್ನಮಲ್ಲಪ್ಪ ಕೋರಿ

**ಆವೃತ್ತಿ :** ಪ್ರಥಮ

**ಮಿತಿ :** ಬಸವಜಯಂತಿ, ೧೧-೫-೧೯೬೭

**ಬೆಲೆ :** ೫=೦೦ ರೂ.

**ಸಾರಾಂಶ :** ಬಸವಣ್ಣನವರ ಜೀವನ ಚರಿತ್ರೆಯನ್ನು ತಿಳಿಸುವ ಐತಿಹಾಸಿಕ ಅಂಶಗಳನ್ನೊಳಗೊಂಡ ಕಾದಂಬರಿರೂಪದ ಗ್ರಂಥವಿದು. ಶ್ರೀ ಬಿ. ಪುಟ್ಟಸ್ವಾಮಿ ಯವರು ಬರೆದ ಆರು ಕಾದಂಬರಿಗಳಲ್ಲಿಯ ಕಥೆಯ ಛಾಯೆಯನ್ನು ಇದರಲ್ಲಿ ಕಾಣಬಹುದು. ಬಹುಸಂಖ್ಯಾಕರಾದ ಜನಸಾಮಾನ್ಯರು ಸುಲಭದಲ್ಲಿ ಓದಿ ಬಸವಣ್ಣ ನವರ ಜೀವನವನ್ನು ಅರಿತುಕೊಳ್ಳಬೇಕೆಂಬ ಉದ್ದೇಶದಿಂದ ಈ ಗ್ರಂಥ ರಚನೆ ಮಾಡಿರುವದಾಗಿ ಲೇಖಕರು ಹೇಳಿರುವರು. ಗ್ರಂಥದೊಳಗೆ ಅಡಕವಾದ ಪ್ರಕರಣಗಳ ಶಿರೋನಾಮಗಳು ಇಂತಿವೆ :

೧. ಬಸವಯುಗದ ಪೂರ್ವದಲ್ಲಿ, ೨. ಬಾಲಕ ಬಸವಣ್ಣ, ೩. ಸಂಗಮದಲ್ಲಿ ಸಾಧನೆ, ೪. ಜೀವನದ ಧ್ಯೇಯ, ೫. ಗೃಹಸ್ಥ ಜೀವನದ ಪವಿತ್ರ ರೂಪ, ೬. ಆರ್ಥಿಕ ಯೋಜನೆಯ ಪುನರ್ಘಟನೆ, ೭. ವಿಕಾಸ ಮತ್ತು ಉನ್ನತಿ, ೮. ರಾಜಕಾರಣದ ರಂಗ, ೯. ಸಂಕ್ರಾಂತಿ ಸಮಯ, ೧೦. ಅನುಭವ ಮಂಟಪ, ೧೧. ಶೂನ್ಯ ಸಿಂಹಾಸನಾಧಿಕಾರಿ ಅಲ್ಲಮ ಪ್ರಭು, ೧೨. ದ್ವೇಷದ ಬಳ್ಳಿಗೆ ನೀರೆರೆದ ಘಟನೆಗಳು, ೧೩. ಚಾಲುಕ್ಯ ವಂಶೀಯರ ಒಳಸಂಚು, ೧೪. ವರ್ಣಧರ್ಮದ ವಿವೇಚನೆ, ೧೫. ಅಶಾಂತಿ ಮೂಡಿತು, ೧೬. ಮೃತ್ಯುವಿಲಾಸ, ೧೭. ಸಂಗಮದಲ್ಲಿ, ೧೮. ಆ ಮೇಲೆ, ೧೯. ಅಣ್ಣನವರ ಜೀವನ ವಿಮರ್ಶೆ. **ಅನುಬಂಧಗಳು.** ೧. ಪ್ರಮಾಣ ವಿಚಾರ, ೨. ಕಾಲಸೂಚಿ, ೩. ಕಲ್ಯಾಣದ ಚಾಲುಕ್ಯರ ವಂಶಾವಳಿ.

೪೦೮

**ಗ್ರಂಥ :** ಬಸವರಾಜ ವಿಜಯ ಅಥವಾ ಬಸವ ಪುರಾಣ

**ಪ್ರಬೇಧ :** ಗದ್ಯ

**ಕರ್ತೃ :** ಕರ್ಪೂರ (ಕೃಷ್ಣಮೂರ್ತಿ)

**ಕಾಲ:** ಸು. ೧೯೨೫

**ಆಕಾರ:** ೧೭×೧೩ ಸೆ. ಮಿ.

**ಪುಟ:** ii + ४೭೯ = ४೮೧

**ಸಾಲು:** ೨೫

**ಸ್ಥಳ:** ಹುಬ್ಬಳ್ಳಿ

**ಪ್ರಕಾಶಕ:** ಎ. ಎಂ. ಕರಡಿ ಬುಕ್‌ಸೆಲ್ಲರ್

**ಆವೃತ್ತಿ:** ಪ್ರಥಮ

**ಮಿತಿ:** ೧೯೬೬

**ಬೆಲೆ:** ರೂ. ೫ = ೫೦ ಪೈಸೆ

**ಸಾರಾಂಶ:** "ಪ್ರಸ್ತುತ 'ಬಸವರಾಜ ವಿಜಯು' ಗ್ರಂಥದಲ್ಲಿ ಕೇವಲ ಬಸವಣ್ಣನವರ ಜೀವನ ಚರಿತ್ರೆಯಷ್ಟೇ ಚಿತ್ರಿಸಲಾಗಿಲ್ಲ. ಅವರ ಜೀವನ ತರಂಗದೆಲೆಗಳನ್ನು ವಿಂಗಡಿಸಿ ಅವುಗಳನ್ನು ಒಂದೆಡೆ ಸಂಕಲಿಸಿ ದೇವನೊಲಿಸುವ ದಾರಿಯನ್ನು ಎತ್ತಿ ತೋರಿಸಲಾಗಿದೆ. ಜೊತೆಗೆ ಅವರು ಮಾನವರಿಗೆ ನೀಡಿದ ಆಧ್ಯಾತ್ಮಿಕ ಮೌಲ್ಯದ ಮಾತುಗಳನ್ನು ಮನಸ್ಸಿಗೆ ಹಿಡಿಸುವಂತೆ ನಿರೂಪಿಸಲಾಗಿದೆ. ಅಲ್ಲಲ್ಲಿ ಅವರ ನಡೆನುಡಿಗಳು ಜೀವನದಲ್ಲಿ ಹಾಸುಹೊಕ್ಕಾಗಿ ನಲಿವು ಒಲವಿನ ಗೆಲುವಿಗೆ ಕಾರಣವೆಂಬುದನ್ನು ಸ್ಪಷ್ಟಗೊಳಿಸಲಾಗಿದೆ."

—ಲೇಖಕರ ನನ್ನ ನುಡಿಯಿಂದ

ಇದು '**ಬಸವ ಪುರಾಣ**'ದ ಸರಳಗನ್ನಡ ಅನುವಾದವಾಗಿದ್ದರೂ ಬಸವಣ್ಣನವರನ್ನು ಕುರಿತು ರಚಿತವಾದ ಇನ್ನಿತರ ಕಾವ್ಯ-ಚರಿತ್ರೆಗಳಿಂದ ವಿಷಯ ಸಂಗ್ರಹಿಸಿದಂತೆ ತೋರುತ್ತದೆ.

**ನೋಡು:** ೧. ಬಸವರಾಜ ವಿಜಯ (ಕನ್ನಡ)
೨ ಕನ್ನಡ ಬಸವೇಶ ವಿಜಯವು (ಕನ್ನಡ)
೩. ಸಟೀಕ ವೃಷಭೇಂದ್ರ ವಿಜಯ (ಕನ್ನಡ)
४. ಸಟೀಕ ವೃಷಭೇಂದ್ರ ವಿಜಯಃ (ಸಂಸ್ಕೃತ-ಕನ್ನಡ)
೫. ಸಟೀಕ ಬಸವೇಶ ವಿಜಯಃ (ಸಂಸ್ಕೃತ-ಕನ್ನಡ)

೪೧೯

**ಗ್ರಂಥ:** ಬಸವಣ್ಣನವರ ವಚನಗಳು

**ಪ್ರಭೇದ:** ವಚನ **ಸಂಖ್ಯೆ:** ೯೬೩

**ಕರ್ತೃ:** ಬಸವಣ್ಣ

**ಕಾಲ:** ಸು. ೧೧೬೭

**ಸಂಪಾದಕ:** ಪುರಿಶಂಕರದೇವರು (ಬ)

**ಆಕಾರ:** ೨೧ × ೧೩. ಸೆ. ಮಿ.

**ಪುಟ:** ೧೨೦

**ಸ್ಥಳ:** ಬಳ್ಳಾರಿ (ಮುದ್ರಣ : ಮದ್ರಾಸ)

**ಪ್ರಕಾಶಕ:** ಎಸ್. ಕೋನೇರಿ ಶೆಟ್ರು

**ಮಿತಿ:** ೧೮೪೯

**ಸಾರಾಂಶ:** ಇದು ನಂ. ೬೪ರಲ್ಲಿ ವರ್ಣಿಸಿದ ಗ್ರಂಥ. ಇದೀಗ ನಮ್ಮ ಅವಲೋಕನಕ್ಕೆ ಬಿದ್ದುದರಿಂದಲೂ, ಮುದ್ರಣ ದೃಷ್ಟಿಯಿಂದ ಮಹತ್ವದೆನಿಸಿದ್ದರಿಂದಲೂ ನಾವಿಲ್ಲಿ ಪುನಃ ವಿವರಿಸಿರುವೆವು. ಗ್ರಂಥದ ಮುಖಪುಟದಲ್ಲಿ ಬರೆದ ಭಾಗವನ್ನಿಲ್ಲಿ ಉದ್ಧರಿಸುವೆವು:

"ಎಲ್ಲಾ ನಿಗಮಂಗಳು, ಎಲ್ಲಾ ಆಗಮಂಗಳು, ಎಲ್ಲಾ ಶಿವಪುರಾಣಂಗಳು, ಎಲ್ಲಾ ಸ್ಮೃತಿಗಳು, ಎಲ್ಲಾ ಶಾಸ್ತ್ರಂಗಳು ಸಾರಾಸಾರವಾಗಿ ಅತಿಸಾರವೆನಿಸಿದ ಉಪನಿಷತ್ತುಗಳ ರಹಸ್ಯ, ವೀರಮಾಹೇಶ್ವರರ ಗುಟ್ಟು, ಅನುಭವ ಸಿದ್ಧಾಂತ ವೆಸಿಸಿಕೊಂಡಿರುವ, ಉತ್ತಮ ವೀರಶೈವ ಸಿದ್ಧಾಂತದಲ್ಲಿ ಷಟ್‌ಸ್ಥಲ ವಿವರಣವನ್ನು ಕುರಿತು **ಬಸವಣ್ಣನವರ ವಚನಗಳು** ಸಾಂಪ್ರದಾಯವಾದ ಹಳೇ ಪುಸ್ತಕಗಳ ವಹಿಗಳ ಮೇರೆಗೆ ಬ|| ಪುರಿಶಂಕರದ್ಯಾವರಿಂದ ಪರಿಶೋಧಿಸಿ ಪರಿಷ್ಕರಿಸಲ್ಪಟ್ಟದೆ. ಬಳ್ಳಾರಿ ಪುಸ್ತಕ ವ್ಯಾಪಾರಿಗಳಾದ ಮ | ರಾ | ಎಸ್. ಕೋನೇರಿಶೆಟ್ರುವರಿಂದ ಗ್ರಂಥರತ್ನಾಕರ ಮುದ್ರಾಕ್ಷರ ಶಾಲೆಯಲ್ಲಿ ಛಾಪಾಮಾಡಲ್ಪಟ್ಟಿತು. ಮದ್ರಾಸ ೧೮೪೯ ಸಂ. ||

---

**ಆಕರ:**

೧. **ವಚನ ವಾಙ್ಮಯ ಪ್ರಕಟನಾ ಯೋಜನೆಯ (ಕನ್ನಡ ವಿಭಾಗ, ಕನಾಟಕ ವಿಶ್ವವಿದ್ಯಾನಿಲಯದ) ಗ್ರಂಥ ಭಂಡಾಗದಲ್ಲಿದೆ.**

೪೧೦

ಗ್ರಂಥ : ಬಸವ ಪುರಾಣವು

ಪ್ರಭೇದ : ಭಾಮಿನಿ ಷಟ್ಪದಿ

ಕರ್ತೃ : ಭೀಮ ಕವಿ

ಕಾಲ : ಸು. ೧೧೬೯

ಆಕಾರ : ೨೧ × ೧೩ ಸೆ. ಮಿ.

ಪುಟ : ೪೨೮ + ೩ = ೪೩೧

ಸ್ಥಳ : ಬೆಂಗಳೂರು

ಪ್ರಕಾಶಕ : ಕೋ. ಭಾಸ್ಕರಯ್ಯ

ಮಿತಿ : ೧೮೮೫

ಸಾರಾಂಶ : ಇದು ಹಿಂದೆ ನಂ. ೯೪-೯೭ರಲ್ಲಿ ಹೇಳಿದ ಗ್ರಂಥವು. ಮುದ್ರಣ ದೃಷ್ಟಿಯಿಂದ ಮಹತ್ವದ್ದಾಗಿರುವದರಿಂದ ನಾವಿಲ್ಲಿ ಎತ್ತಿಕೊಂಡಿರುವೆವು. ಇದೀಗ ನಮ್ಮ ಅವಲೋಕನಕ್ಕೆ ದೊರಕಿದೆ.

ನೋಡು : ೧. ಬಸವ ಪುರಾಣ (ಕನ್ನಡ)

---

ಆಕರ :

೧. ವಚನ ವಾಙ್ಮಯ ಪ್ರಕಟನಾ ಯೋಜನೆಯ (ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ) ಗ್ರಂಥಭಂಡಾರದಲ್ಲಿದೆ.

೪೧೧

ಗ್ರಂಥ : ವಿಶ್ವಜ್ಯೋತಿ ಬಸವಣ್ಣನವರು

ಪ್ರಭೇದ : ನಾಟಕ

ಕರ್ತೃ : ಗುಗ್ರಿ (ನೀ. ವಿ.)

ಕಾಲ : ಸು. ೧೯೨೫

**ಆಕಾರ :** ೧೮ × ೧೨ ಸೆ. ಮಿ.

**ಪುಟ :** ೭ + ೩ + ೧೪೦ = ೧೫೦

**ಸ್ಥಳ :** ಹುಬ್ಬಳ್ಳಿ

**ಪ್ರಕಾಶಕ :** ಶ್ರೀ ಗುರುಬಸವ ಮಂಟಪ ಟ್ರಷ್ಟ ಕಮೀಟಿ

**ಆವೃತ್ತಿ :** ಪ್ರಥಮ

**ಮಿತಿ :** ೧೯೬೪

**ಬೆಲೆ :** ರೂ. ೧ = ೭೫ ಪೈಸೆ

**ಮಾಲೆ :** ಗುರುಬಸವ ಮಂಟಪ ಗ್ರಂಥಮಾಲಾ, ೭

**ಸಾರಾಂಶ :** "ಬಸವಣ್ಣನವರು ಬೋಧಿಸಿದ ಮಾನವ ಕಲ್ಯಾಣದ ತತ್ವಗಳನ್ನು ಮಾತ್ರ ಎತ್ತಿಕೊಂಡು ನಾಟಕವನ್ನು ಹೆಣೆದಿರುವೆನು. ಈ ನಾಟಕದ ಪ್ರಾರಂಭದಲ್ಲಿ ಬರುವ ಅವರ ಪಾತ್ರವು ಕೂಡಲ ಸಂಗಮದಲ್ಲಿ ಮಂಗಲಕರ ಲಿಂಗ ಪೂಜೆಯೊಂದಿಗೆ ಆರಂಭವಾಗುತ್ತದೆ. ಮುಂದೆ ಅವರ ಗುರುಗಳೊಡನೆ ಸಂಭಾಷಣೆ ಸುರುವಾಗುತ್ತದೆ. ಇಲ್ಲಿ ಬರುವ ಜಾತವೇದಿಗಳೆಂಬ ಅವರ ಗುರುಗಳನ್ನು ತತ್ವಗಳನ್ನು ಮಥಿಸುವದಕ್ಕಾಗಿ ಹಿಂದಿನವರು ಉಪಯೋಗಿಸಿದ 'ಜಾತವೇದಿ' ಎಂಬ ನಾಮವನ್ನೇ ಬಳಸಿಕೊಂಡಿರುವನೇ ವಿನಾ ಅದೊಂದು ಐತಿಹಾಸಿಕ ಸತ್ಯವೆಂದು ನನ್ನ ವಿಚಾರವಿಲ್ಲ.... ಕೊನೆಯದಾಗಿ ಶ್ರೀ ಬಸವಣ್ಣನವರು ಕಲ್ಯಾಣದ ಕ್ರಾಂತಿಯ ನಂತರ ಕಲ್ಯಾಣದಿಂದ ಕೂಡಲಸಂಗಮಕ್ಕೆ ಬರುವಾಗ ದುಃಖಿತರಾಗಿ ಚಿಂತೆಯಿಂದ ಸೋತವರಂತೆ ಬರುತ್ತಿರುವ ಚಿತ್ರವನ್ನು ಬಹಳ ಜನರು ಚಿತ್ರಿಸುತ್ತಾರೆ. ಬಸವಣ್ಣ-ನವರಂಥ ಮಹಾ ಆದರ್ಶ ಪುರುಷರನ್ನು ಹಾಗೆ ಕಾಣುವದು ಸಮಂಜಸವಾಗಲಾರದು.....ಸ್ವರ್ಗ–ಮರ್ತ್ಯ, ಇಹ–ಪರ, ಜೀವನ–ಮರಣಗಳೆಂಬ ದ್ವಂದ್ವಗಳನ್ನು ನೀಗಿ ನಿಂದ ವಿಶ್ವ ಸ್ವರೂಪ ವಿಶ್ವ ಜ್ಯೋತಿ ಬಸವಣ್ಣನವರು. ಇಂಥ ಮಹಾ ನಿಲವಿನ ಮಹಾತ್ಮಾ ಬಸವಣ್ಣನವರ ಮಹಾ ಲಿಂಗದೊಳಗಾಗುವ ಸಮಯದಲ್ಲಿ ಯಾವ ಅನುಭವ ಸ್ಥಿತಿಯಲ್ಲಿದ್ದರೆನ್ನುವದು ನನ್ನಂಥವನ ಅರಿವಿಗೆ ಸಿಲುಕದ ಸಂಗತಿಯಾದರೂ ನನ್ನ ಭಾವಕ್ಕೆ ಹೊಳೆದುದರ ಮಟ್ಟಿಗೆ ಹೆಣೆಯಲು ಯತ್ನಿಸಿದ್ದೇನೆ."

—ಲೇಖಕರ 'ಮುನ್ನುಡಿ'ಯಿಂದ

"ಈ ನಾಟಕದ ಕಥಾವಸ್ತು ಬಸವಣ್ಣನವರನ್ನು ಸುತ್ತುಗಟ್ಟಿದ ಶರಣರ ಜೀವನವಾಗಿದೆ. ವಚನಗಳ ಸಿದ್ಧಾಂತವು ಈ ಕೃತಿಗೆ ಹಿನ್ನೆಲೆಯಾಗಿದ್ದು ಅದು ಈ

ಕೃತಿಯ ಬೆನ್ನೆಲುಬು ಆಗಿದೆ. ಸಮಯ ಸನ್ನಿವೇಶಗಳಿಗೆ ತಕ್ಕಂತೆ ಇದರಲ್ಲಿ ಅನೇಕ ವಚನಗಳು, ವಚನ ಭಾಗಗಳು ಅಥವಾ ಅವುಗಳ ಭಾವವು ಸೇರ್ಪಡೆಯಾಗಿದ್ದು ಅವು ಈ ನಾಟಕಕ್ಕೆ ಒಂದು ಶೋಭೆಯನ್ನು ತಂದು ಕೊಟ್ಟಿರುತ್ತವೆ. ಜನ ಮನ ರಂಜನೆಯೊಂದೇ ಈ ನಾಟಕದ ಉದ್ದೇಶವಲ್ಲ. ಅದು ದೃಶ್ಯಕಾವ್ಯವಾಗಿರುವದರಿಂದ ಕಾವ್ಯದ ಹಲಕೆಲವು ಅಂಶಗಳನ್ನು ಒಳಗೊಂಡು ಬೋಧಪ್ರದವಾಗಿರಬೇಕು. ಇದನ್ನು ಸಾಧಿಸಲು ಗ್ರಂಥಕಾರರು ತಕ್ಕಮಟ್ಟಿಗೆ ಪ್ರಯತ್ನ ಪಟ್ಟಿದ್ದಾರೆ."

—ಶ್ರೀ ಪ್ರಭು ಬಸವಪ್ಪ ಹರ್ತಿ ಅವರ 'ಪ್ರಸ್ತಾವನೆ'ಯಿಂದ

## ೪೧೨

**ಗ್ರಂಥ :** ಶ್ರೀ ಬಸವೇಶ್ವರ ವಚನ ಪ್ರದೀಪಿಕೆ

**ಪ್ರಭೇದ :** ವಚನ–ಟೀಕೆ **ಸಂಖ್ಯೆ :** ೨೫೪

**ಕರ್ತೃ :** ಬಸವಣ್ಣ

**ಕಾಲ :** ಸು. ೧೧೬೭

**ಸಂಪಾದಕ / ಟೀಕಾಕಾರ** — ನಂಜಪ್ಪ (ಮಾ. ನಂ.)

**ಆಕಾರ :** ೧೮×೧೨ ಸೆ. ಮಿ.

**ಪುಟ :** ೨೨೮

**ಸ್ಥಳ :** ಚಿಕ್ಕಪೇಟೆ ಬೆಂಗಳೂರು

**ಪ್ರಕಾಶಕ :** ಶ್ರೀ ಮಾ. ನಂ. ಶಿವಪ್ಪ ಸಹೋದರರು, ಕಲ್ಯಾಣ ಸಾಹಿತ್ಯ ಭಂಡಾರ

**ಆವೃತ್ತಿ :** ಪ್ರಥಮ

**ಮಿತಿ :** ೧೧-೫-೬೭

**ಬೆಲೆ :** ೩=೦೦ ರೂ.

**ಮಾಲೆ :** ಕಲ್ಯಾಣ ಸಾಹಿತ್ಯ ಭಾಂಡಾರ ಗ್ರಂಥಮಾಲಾ, ೨೧

**ಸಾರಾಂಶ :** "ಈ ಗ್ರಂಥದಲ್ಲಿ ೫೫೪ ವಚನಗಳನ್ನು ಸಂಗ್ರಹಿಸಲಾಗಿದೆ. ಮೂಲತಃ ವಚನಗಳೇ ಸರಳ ಮತ್ತು ಸುಲಲಿತ. ಗ್ರಂಥಕರ್ತರು 'ಭಾವಚಂದ್ರಿಕೆ' ಎಂಬ ವಿವರಣೆಯನ್ನು ಕೊಟ್ಟು ಅವುಗಳನ್ನು ಮತ್ತಷ್ಟು ಸರಳಗೊಳಿಸಿದ್ದಾರೆ. ಭಕ್ತಿಯೋಗ ಸಾಧಕರಿಗೆ ನಿತ್ಯ ಪಠಿಸಲು ಈ ವಚನ ಪ್ರದೀಪಿಕೆ ಉತ್ತಮ ಗ್ರಂಥವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ."

—ಶ್ರೀ ಬಿ. ಡಿ. ಜತ್ತಿ ಅವರ 'ಮುನ್ನುಡಿ'ಯಿಂದ

೪೧೩

**ಗ್ರಂಥ : ಬಸವತತ್ತ್ವ ಪರಿಮಳ** ಹಿಂದೀ

**ಪ್ರಭೇದ :** ಪ್ರಬಂಧಗಳು

**ಕರ್ತೃ :** ವಿವಿಧ ಲೇಖಕರು

**ಸಂಪಾದಕ :** ಮಲ್ಲಾಬಾದಿ (ವೀರಭದ್ರಪ್ಪ)

**ಅನುವಾದಕ :** ರಾಜೇಶ್ವರಯ್ಯ (ಎಂ.)

**ಪುಟ :** ೧೨೦

**ಸ್ಥಳ :** ಕೃಷ್ಣಮೂರ್ತಿ ಪುರಂ, ಮೈಸೂರು

**ಪ್ರಕಾಶಕ :** ಅನುವಾದಕ

**ಆವೃತ್ತಿ :** ಪ್ರಥಮ

**ಮಿತಿ :** ಬಸವ ಜಯಂತಿ, ೧೧–೫–೧೯೬೭

**ಸಾರಾಂಶ :** ಕನ್ನಡ 'ಬಸವತತ್ತ್ವ ಪರಿಮಳ'ದ ಪ್ರಥಮ ಆವೃತ್ತಿಯ ಅನುವಾದವಿದು.

೪೧೪

**ಗ್ರಂಥ : ಮಹಾತ್ಮಾ ಬಸವೇಶ್ವರ** ಹಿಂದೀ-ಇಂಗ್ಲಿಷ್

**ಪ್ರಭೇದ :** ಪ್ರಬಂಧಗಳು

**ಕರ್ತೃ :** ವಿವಿಧ ಲೇಖಕರು

**ಪುಟ :** ೫೦

**ಸ್ಥಳ :** ಉದ್ಗೀರ (ಉಸ್ಮಾನಾಬಾದ ಜಿಲ್ಹಾ)

**ಪ್ರಕಾಶಕ :** ರಾಚಯ್ಯ ಸ್ವಾಮಿ ಹುಂಡೇಕಾರ

(ಸಂಗ್ರಾಮ ವಾಚನಾಲಯದ ಪರವಾಗಿ)

**ಆವೃತ್ತಿ :** ಪ್ರಥಮ

**ಮಿತಿ :** ಬಸವ ಜಯಂತಿ, ೧೯೬೩

**ಬೆಲೆ :** ೦೦ = ೨೫ ಪೈಸೆ

**ಸಾರಾಂಶ :** ಬಸವಣ್ಣನವರನ್ನು ಕುರಿತಾದ ಮೂರು ಪ್ರಬಂಧಗಳಿವೆ: ೧. ವಿಶ್ವಸಂತ ಬಸವೇಶ್ವರ – ಶಂಕರರಾವ್ ಕಪ್ಪಿಕೇರಿ ೨. ಯೋಗಪ್ರವರ್ತಕ – ಪ್ರಭುದೇವಸ್ವಾಮಿ ೩. Basava and Socialism – ಕುಮಾರ ಸ್ವಾಮೀಜಿ.

೪೧೫

**ಗ್ರಂಥ : ಬಸವಣ್ಣ**

**ಪ್ರಭೇದ :** ಜಾನಪದ ಗೀತೆಗಳ ರೂಪಕ

**ಕರ್ತೃ :** ಪಾಟೀಲ (ರಾಯನಗೌಡಾ)

**ಕಾಲ :** ಸು. ೧೯೧೫

**ಪುಟ :** ೨೨

**ಸಾರಾಂಶ :** ಇದೊಂದು ರೆಡಿಯೋ ರೂಪಕ. ಇದರಲ್ಲಿ ಬಸವಣ್ಣನವರನ್ನು ಕುರಿತಾದ ಬೀಸುವಕಲ್ಲಿನ ಪದಗಳು, ರೈತ ಭಲಾರಿ, ಸಾಂಗತ್ಯ ಪದ್ಯಗಳು, ಬಯಲಾಟ ಪದಗಳು, ಲಾವಣಿಗಳು–ಮುಂತಾದ ಜಾನಪದ ಗೀತಗಳನ್ನು ಸಂಗ್ರಹಿಸಿ ಕೊಡಲಾಗಿದೆಯೆಂದು ಕರ್ತೃಗಳು ಬರೆದು ತಿಳಿಸಿರುವರು. ವಚನಗಳಷ್ಟೇ ಸಮುತೂಕದಲ್ಲಿರುವ ಗೀತಗಳಿವಾಗಿವೆಯೆಂದೂ ಅಭಿಪ್ರಾಯಪಟ್ಟಿರುವರು. ಅಚ್ಚಿನಲ್ಲಿದ್ದು ಶೀಘ್ರದಲ್ಲಿ ಬೆಳಕು ಕಾಣಲಿದೆ.



# ಸಂದರ್ಭ ಗ್ರಂಥಸೂಚಿ

## ಕನ್ನಡ


೧. **ನರಸಿಂಹಾಚಾರ್ಯ (ಆರ್).**

ಕರ್ನಾಟಕ ಕವಿಚರಿತೆ. ಭಾ. ೧–೩

ಭಾ. ೧. ಪ್ರಾಚೀನಕಾಲದಿಂದ ೧೪ನೆಯ ಶತಮಾನ.

ಭಾ. ೨. ೧೫ನೆಯ ಶತಮಾನದಿಂದ ೧೭ನೆಯ ಶತಮಾನದ ಕೊನೆ.

ಬೆಂಗಳೂರು, ೧೯೨೪, ೧೯೧೯ ಮತ್ತು ೧೯೨೯

೨. **ಮುಗಳಿ (ರಂ. ಶ್ರೀ).**

ಕನ್ನಡ ಸಾಹಿತ್ಯ ಚರಿತ್ರೆ

ಮೈಸೂರು, ಉಷಾ ಸಾಹಿತ್ಯಮಾಲೆ, ೧೯೫೩.

೩. **ಸಾಂಗಲಿ (ವೆಂಕಟೇಶ).**

ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ.

ಭಾ. ೧. ೧೮೫೦ ರಿಂದ ೧೯೨೦.

ಮೈಸೂರು, ಉಷಾ ಸಾಹಿತ್ಯಮಾಲೆ, ೧೯೬೦.

೪. **ಬಳ್ಳಾರಿ (ಗುರುಸಿದ್ಧಪ್ಪ ಬಸವಪ್ಪ)**

ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು.

ಗದಗ, ೧೯೬೦.

೫. **ಹಿರೇಮಠ (ಚಂದ್ರಶೇಖರ ಶಾಸ್ತ್ರಿ)**

ಬಸವ ತತ್ವ ರತ್ನಾಕರ.

ಮೈಸೂರು, ಶಿ. ವಿಶ್ವನಾಥ ಮತ್ತು ಶಿ. ರಾಜಶೇಖರ, ೧೯೬೧.

೭. **ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ** (ಮದರಾಸು).
ಇಂದಿನ ಕನ್ನಡ ಬರಹಗಾರರು.
ಮದರಾಸು, ೧೯೬೨.

೭. **ಪ್ರಾಚ್ಯವಿದ್ಯಾ ಸಂಶೋಧನಾಲಯ** (ಮೈಸೂರು).
ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ. **ಸಂ**: ಹೆಚ್. ದೇವೀರಪ್ಪ.
ಭಾ. ೧. ಅ—ಚಾ.
ಭಾ. ೨. ಚಿ—ಪ.
ಭಾ. ೩. ಬ—ಲೋ.
ಭಾ. ೪. ವ—ಹೊ.
ಮೈಸೂರು, ೧೯೬೨—೧೯೬೩.

೮. **ಹಾಲಪ್ಪ** (ಗ. ಸ.), **ಸಂ.**
ರಾಷ್ಟ್ರಧರ್ಮದ್ರಷ್ಟಾರ ಹರ್ಡೇಕರ ಮಂಜಪ್ಪ.
ಧಾರವಾಡ, ಹರ್ಡೇಕರ ಮಂಜಪ್ಪ ಸ್ಮಾರಕ ಗ್ರಂಥಮಾಲೆ, ೧೯೬೬.

. **ಶಿವಾನಂದ** (ವಿ).
ಸೀಮಾಪುರುಷ ಷಡಕ್ಷರದೇವ: ಕವಿ-ಕಾವ್ಯ-ವಿಮರ್ಶೆ.
ಧಾರವಾಡ, ಸಮಾಜ ಪುಸ್ತಕಾಲಯ, ೧೯೬೬.

೧೦. **ಸಿಂದಿಗಿ** (ಸಿದ್ಧಪ್ಪ ಮರಿಸಿದ್ಧಪ್ಪ).
ಶ್ರೀ ಬಸವೇಶ್ವರನ ಚರಿತ್ರೆ.
ಬಳ್ಳಾರಿ, ೧೯೨೫.

೧೧. **ತಿಪ್ಪೇರುದ್ರಸ್ವಾಮಿ** (ಹೆಚ್), **ಸಂ.**
ಪ್ರಸಾದ.
ಮೈಸೂರು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ೧೯೬೪.

## ಇಂಗ್ಲಿಷ್


1. **British Museum Library** (London).

   Catalogue of the **Kannada, Badag** and **Kurga** books in the library of the British Museum. Ed. by L.D. Barnett. London, Trustees of British Museum, 1910.

2. **Rice** (E. P.).

   History of Kanarese literature, Ed. 2. Calcutta, Association Press, 1921.

3. **Government Oriental Manuscripts Library** (Madras).

   Descriptive catalogue of the **Kanarese** Manuscripts in the Government Oriental manuscripts Library, Madras. vol. 1-6. Madras, 1935-1952.

4. **Government Oriental Manuscripts Library** (Madras).

   Descriptive catalogue of the **Sanskrit** manuscripts in the Government Oriental Manuscripts Library, Madras. vol. 1-29. Madras, 1901-1939.

5. **Government Oriental Manuscripts Library** (Madras).

   Alphabetical Index of **Kanarese** Manuscripts in the Government Oriental Manuscripts Library, Madras. Ed. by S. Kuppuswamy Sastri. Madras, 1923.

6. **Government Oriental Manuscripts Library** (Madras).

   Descriptive catalogue of **Telugu** manuscripts in the Government Oriental Manuscripts Library, Madras. vol. 1—15. 1915-1958.

7. **Kannada Research Institute** (Karnatak University Dharwar).

   Descriptive catalogue of manuscripts in the Kannada Research Institute, Dharwar. vol. 1—6. 1953-1965.

8. **Sanskrit Academy** ( Osmania University) (Hyderabad).

   Catalogue of the **Sanskrit** manuscripts in the Osmania University Library. Hyderabad, 1964.

9. **Osmania University Library** (Hyderabad).
Descriptive catalogue of **Kannada** manuscripts in the Osmania University Library. Hyderabad, 1966.

10. **Chenehiah** (P) and **Bhujangarao Raobahadur** (Raja M).
History of **Telugu** literature.
(Heritage of India series)
Calcutta, Association Press, 1935.

11. **Bombay** (State).
Gazetteer of Bombay State : Dharwar District, Rev. Ed.
Bombay, 1959.

## ತೆಲುಗು

೧. **ಬಂಡಾರು** (ತಮ್ಮಯ್ಯ), **ಸಂ.**
ಪಾಲಕುರಿಕಿ ಸೋಮನಾಥ ಕವಿ ಲಘುಕೃತುಲು.
ದೇವರಪಲ್ಲಿ (ಆಂಧ್ರ), ಚಿಮಿರಾಲ ಚಂದ್ರಶೇಖರಯ್ಯಗಾರು, ೧೯೬೨.

## ಪತ್ರಿಕೆಗಳು

೧. **ಶಿವಾನುಭವ,** ವಿಜಾಪುರ
೨. **ಶರಣ ಸಾಹಿತ್ಯ,** ಬೆಂಗಳೂರು
೩. **ಜಯ ಕರ್ನಾಟಕ,** ಧಾರವಾಡ
೪. **ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ,** ಬೆಂಗಳೂರು
೫. **ವೀರಶೈವ,** ಧಾರವಾಡ
೬. ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ **ಸಾಹಿತ್ಯ ಸಮಿತಿ ಪತ್ರಿಕೆ,** ಧಾರವಾಡ

# ಉಪಕೃತ

೧. ಡಾ. ಆರ್. ಸಿ. ಹಿರೇಮಠ, ಎಂ. ಎ., ಪಿ. ಎಚ್‌ಡಿ. ಮುಖ್ಯಪ್ರಾಧ್ಯಾಪಕರು, ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಡಾ. ಪಿ. ಬಿ. ದೇಸಾಯಿ ಎಂ. ಎ., ಡಿ. ಲಿಟ್. ಡಾರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.

೩. ಶ್ರೀ ಗ. ಸ. ಹಾಲಪ್ಪ, ಎಂ. ಎ. ಮುಖ್ಯಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಶ್ರೀ ಎಸ್. ಎಸ್. ಮಾಳವಾಡ, ಎಂ. ಎ. 'ಪ್ರಶಾಂತ' ಅತ್ತಿಕೊಳ್ಳ, ಧಾರವಾಡ.

೫. ಡಾ. ಟಿ. ಜಿ. ಕಲಘಟಗಿ, ಎಂ. ಎ. ಪಿ. ಎಚ್‌ಡಿ. ಪ್ರಿನ್ಸಿಪಾಲ, ಕರ್ನಾಟಕ ಕಾಲೇಜ, ಧಾರವಾಡ.

೬. ಶ್ರೀ ಎಂ. ವೃಷಭೇಂದ್ರಸ್ವಾಮಿ, ಎಂ. ಎ. ಪ್ರಾಧ್ಯಾಪಕರು, ಕನ್ನಡವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭. ಶ್ರೀ ಮಲ್ಲಿನಾಥ ಕಲಬುರ್ಗಿ, ಎಂ. ಎ. ಕನ್ನಡವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮. ಶ್ರೀ. ಕೆ. ಎಸ್. ದೇಶಪಾಂಡೆ, ಎಂ. ಎ. ಡಿಪ್. ಲಿಬ್. ಗ್ರಂಥಭಂಡಾರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೯. ಶ್ರೀ ಎಂ. ಆರ್. ಕುಂಭಾರ, ಎಂ. ಎ., ಎಂ. ಲಿಬ್. ಎಸ್‌ಸಿ. ಗ್ರಂಥಭಂಡಾರಿ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦. ಶ್ರೀ ಎನ್. ಡಿ. ಬಗರಿ, ಬಿ. ಎ., ಡಿ. ಕಾಮ್. ಡಿಪ್. ಲಿಬ್. ಎಸ್‌ಸಿ. ಮೈಸೂರುರಾಜ್ಯ ಗ್ರಂಥಭಂಡಾರಗಳ ಅಧಿಕಾರಿ, ಬೆಂಗಳೂರು.

೧೧. ಶ್ರೀ ಆರ್. ಆರ್. ಅತಗೂರ, ಎಂ. ಎ., ಡಿಪ್. ಲಿಬ್. ಗ್ರಂಥಭಂಡಾರಿ, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೨. ಶ್ರೀ ವೀ. ರು. ಕೊಪ್ಪಳ, ಎಂ. ಎ., ಬಿ. ಟಿ. ವಚನ ವಾಙ್ಮಯ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೩. ಶ್ರೀ ವಿರುಪಾಕ್ಷಪ್ಪ ಯಾಳಗಿ, ಬಿ. ಎ. ನಿವೃತ್ತ ಅಸಿಸ್ಟಂಟ ಕಮಿಶನರ್, ಹೊಸಯಲ್ಲಾಪುರ, ಧಾರವಾಡ.

೧೪. **ಶ್ರೀ ವೀರಣ್ಣ ಐಹೊಳ್ಳಿ,** ಎಂ. ಎ. ಆಯ್. ಎ. ಎಸ್. ವಿದ್ಯಾರ್ಥಿ, ಅಬೂ, ರಾಜಸ್ತಾನ.

೧೫. **ಶ್ರೀ ವ್ಹಿ. ಬಾಲಕೃಷ್ಣ,** ಎಂ, ಎ., ಮುಖ್ಯಾಧ್ಯಾಪಕ ಉರ್ದು ಮತ್ತು ಪರ್ಶಿಯನ್ ವಿಭಾಗ, ಕರ್ನಾಟಕ ಕಾಲೇಜ, ಧಾರವಾಡ.

೧೬. **ಶ್ರೀ ವೀರಭದ್ರಪ್ಪ ಮುಲ್ಲಾಬಾದಿ,** ಪ್ರಚಾರಾಧಿಕಾರಿ, ಲಿಂಗಾಯತ ವಿದ್ಯಾ-ಭಿವೃದ್ಧಿಸಂಸ್ಥೆ, ಧಾರವಾಡ.

೧೭ **ಶ್ರೀ ಪಂಚಾಕ್ಷರಿ ಹಿರೇಮಠ,** ತಾರಾಪ್ರಕಾಶನ, ಧಾರವಾಡ.

೧೮. **ಶ್ರೀ ಎಸ್. ವ್ಹಿ. ಕಲ್ಮಠ,** ಎಂ. ಎ. ಬಿ.ಟಿ. ವಚನ ವಾಙ್ಮಯ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯. **ಶ್ರೀ ಸಾಯಿನಾಥ ಜ್ಯೋತಿ,** ಬಿ. ಎಸ್‌ಸಿ. ಬಿ. ಲಿಬ್. ಎಸ್‌ಸಿ. ಸಹಾಯಕ ಗ್ರಂಥಭಂಡಾರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೦. **ಶ್ರೀ ಎಸ್. ವ್ಹಿ. ಅಂಗಡಿ.** ಬಿ. ಈ., ಕಂಟ್ರಾಕ್ಟರ್, ಭೂಸಾವಳ, ಮಹಾರಾಷ್ಟ್ರ.

೨೧. **ಸೌ. ಶಾಂತಾದೇವಿ ಎಸ್, ಗುಂಜಾಳ,** ಬಿ. ಎ., ಬಿ. ಈಡಿ. ಅಧ್ಯಾಪಕಿ, ಶ್ರೀಮತಿ ಜಯದೇವಿತಾಯಿ ಲಿಗಾಡೆ ಗರ್ಲ್ಸ ಹಾಯ್‌ಸ್ಕೂಲ್, ಧಾರವಾಡ.

೨೨. **ಶ್ರೀ ರಾಯನಗೌಡಾ ಪಾಟೀಲ,** ತಲ್ಲೂರು, ಜಿ. ಬೆಳಗಾವಿ.

೨೩. **ಶ್ರೀ ಹೆಚ್. ಹೊಂಬೇಗೌಡ,** ಬಿ. ಎ. ಬಿ ಲಿಬ್. ಎಸ್‌ಸಿ. ಗ್ರಂಥಭಂಡಾರಿ, ಸಾರ್ವಜನಿಕ ಗ್ರಂಥಭಂಡಾರ, ಮೈಸೂರು.

೨೪. **ಪ್ರಿನ್ಸಿಪಾಲರು,** ಸಂಸ್ಕೃತ ಕಾಲೇಜ, ಮೈಸೂರು.

೨೫. **ಗ್ರಂಥ ಭಂಡಾರಿ,** ಅರಮನೆಯ ಸರಸ್ವತಿ ಗ್ರಂಥಭಂಡಾರ, ಸಂಸ್ಕೃತ ಕಾಲೇಜ, ಮೈಸೂರು.

೨೬. **ಶ್ರೀ ಎಸ್. ಬಿ. ಸಂಕನವಾಡೆ,** ಬಿ. ಎಸ್‌ಸಿ. ಸಂಪಾದಕ: ಜ್ಞಾನಪ್ರಸಾದ (ಮರಾಠಿ), ಕೊಲ್ಹಾಪುರ.

೨೭. **ಶ್ರೀ ಎಲ್. ಬಸವರಾಜು,** ಎಂ. ಎ. ಪ್ರಾಧ್ಯಾಪಕ, ಕನ್ನಡ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೮. ಶ್ರೀ. ಎಸ್ ಶಿವಣ್ಣ, ಸಂಶೋಧಕ ವಿದ್ಯಾರ್ಥಿ, ಕನ್ನಡ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೯. ಶ್ರೀ ಬಿ. ಎನ್. ಚಂದ್ರಯ್ಯ, ಎಂ. ಎ., ಪ್ರಾಧ್ಯಾಪಕ, ಕನ್ನಡ ವಿಭಾಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೦. ಶ್ರೀ ಬಸವರಾಜಶಾಸ್ತ್ರಿ, ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆ, ಮೈಸೂರು.

೩೧. ಶ್ರೀ ಎಸ್. ಬಸವಾರಾಧ್ಯ, ಸಂಪಾದಕ: ಕನ್ನಡ-ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೨. ಶ್ರೀ ವೆಂಕಟೇಶ ಸಾಂಗ್ಲಿ, ಬಿ. ಎ. ಬೆಂಗಳೂರು.

೩೩. ಶ್ರೀ ಆರ್. ಶಿವಣ್ಣ, ಬಿ. ಎ. ಡಿಪ್ ಲಿಬ್ ಎಸ್‌ಸಿ. ಪ್ರಾಧ್ಯಾಪಕ, ಸರಕಾರಿ ಗ್ರಂಥಾಲಯ ವಿಜ್ಞಾನ ತರಬೇತಿ ಕೇಂದ್ರ, ಮಲ್ಲೇಶ್ವರಂ, ಬೆಂಗಳೂರು.

೩೪. ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿ, ಸಂಪಾದಕರು, ಶರಣ ಸಾಹಿತ್ಯ,

೩೫. ಶ್ರೀ ಅನ್ನದಾನಯ್ಯ ಪುರಾಣಿಕ, ಬಿ. ಎ. ಎಲ್ ಎಲ್ ಬಿ. ಅಡ್ವೋಕೇಟ, ಬೆಂಗಳೂರು.

೩೬. ಡಾಯರೆಕ್ಟರ್, ಪ್ರಾಚ್ಯ ವಿದ್ಯಾ ಸಂಶೋಧನ ಗ್ರಂಥಭಂಡಾರ, ಮದ್ರಾಸು.

೩೭. ಶ್ರೀ ಟಿ. ವ್ಹಿ. ವೆಂಕಟರಮಣಯ್ಯ, ಬಿ. ಎ., ಡಿ. ಲಿಬ್. ಎಸ್‌ಸಿ. ಸಹ ಸಂಪಾದಕ, 'ರಾಷ್ಟ್ರೀಯ ಗ್ರಂಥಸೂಚಿ' ರಾಷ್ಟ್ರೀಯ ಗ್ರಂಥಭಂಡಾರ, ಕಲಕತ್ತಾ.

೩೮. ಶ್ರೀ ಸಂಗಮನಾಥ ಹಂಡಿ, ಎಂ. ಎ. ಪ್ರಾಧ್ಯಾಪಕ, ಕಾಮರ್ಸ ಕಾಲೇಜ, ವಿಜಾಪುರ.

೩೯. ಶ್ರೀ ಉಮಾಪತಿ ಶಾಸ್ತ್ರಿಗಳು, ಎಂ. ಎ. ಪ್ರಾಧ್ಯಾಪಕ, ಬಸವೇಶ್ವರ ಕಾಲೇಜು, ಬಾಗಲಕೋಟೆ.

೪೦. ಶ್ರೀ ಬಸವರಾಜ ರಾಯಚೋಟಿ, ಎಂ. ಎ., ಎಲ್‌ಎಲ್. ಎಂ. ಅಡ್ವೋಕೇಟ, ರಾಯಚೂರು.

೪೧. ಶ್ರೀ ಶಾಂತರಸ, ಎಂ. ಎ. ಜಿ. ಟಿ. ರಾಯಚೂರು.

೪೨. ಶ್ರೀ ನಾಗೇಶ್ವರರಾವ, ವಿಜಯವಾಡ, ಆಂಧ್ರ.

೪೩. **ಶ್ರೀ ಎಸ್. ಎಸ್. ಮೊಗಲೇವಾರ,** ಎಂ. ಎ. ಬಿ. ಟಿ. ಪ್ರಿನ್ಸಿಪಾಲ
ಜವಲಾರ ಎನ್. ಹಾಯಸ್ಕೂಲ, ನಾಗಪುರ.

೪೪. **ಶ್ರೀ ಎಸ್. ಸೋಮಸುಂದರಮ್,** ಎಂ. ಎ. ಬಿ. ಟಿ. ಹೆಡ್‌ಮಾಸ್ತರ
ರವಿ ಸೀತಾಚಿ ಹಾಯಸ್ಕೂಲ್, ಅಣ್ಣಮಲಾಯಿ ನಗರ, ತಮಿಳುನಾಡು.

೪೫. **ಶ್ರೀ ಭಂಡಾರು ತಮ್ಮಯ್ಯಗಾರು,** ಅಧ್ಯಕ್ಷ, ಆಂಧ್ರ ಸಾಹಿತ್ಯ
ಪರಿಷತ್ತು, ಕಾಕಿನಾಡ, ಆಂಧ್ರ.

೪೬. **ಶ್ರೀ ಪಿ. ಡಿ. ಪಾಲ್ಕಂಡವಾರ್,** ಕಾರ್ಯದರ್ಶಿ ಬಸವೇಶ್ವರ ಫಿಲಾಸಫಿಕಲ್
ಆ್ಯಂಡ ಕಲ್ಚರಲ್ ಸೊಸಾಯಿಟಿ, ಮುಂಬೈ.

---

# ಶಬ್ದಸೂಚಿ

( ಇಲ್ಲಿಯ ಅಂಕಿಗಳು ಪುಟಗಳನ್ನು ಸೂಚಿಸುತ್ತವೆ )

## ಗ-ಘ

## ಬ–ಭ

## ವ

## ಶ-ಷ-ಸ

### ಹ

## ಈ ಗ್ರಂಥವನ್ನು ಕುರಿತು

# ವಿದ್ವಾಂಸರ ಅಭಿಪ್ರಾಯಗಳು

೧

ಬಸವಣ್ಣನವರು ವಿಶ್ವವಿಭೂತಿಪುರುಷರಲ್ಲೊಬ್ಬರು. ಜನಜೀವನವನ್ನು ಹಸನಗೈದು, ಸಮಾಜವನ್ನು ಉದ್ಧರಿಸಿ, ನೂತನ ಧರ್ಮ-ಸಾಹಿತ್ಯಗಳನ್ನು ಪುರಸ್ಕರಿಸಿದ ಮಹಾನುಭಾವ ಬಸವಣ್ಣನವರನ್ನು ಕುರಿತು ಅನೇಕ ಶತಮಾನಗಳಿಂದ ವಿಪುಲವಾದ ಸಾಹಿತ್ಯ ವಿವಿಧ ಭಾಷೆಗಳಲ್ಲಿ ಮೈದೋರಿ ನಿಂತಿದೆ. ಪಾಲ್ಕುರಿಕೆ ಸೋಮನಾಥನಂತಹ ಪ್ರಾಚೀನ ಕವಿ ತೆಲುಗು, ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಸುಮಾರು ೩೬ ಗ್ರಂಥಗಳನ್ನು ಬಸವಣ್ಣನವರ ವಿಷಯವಾಗಿ ಬರೆದಿರುವನೆಂಬುದನ್ನು ಸ್ಮರಿಸಿದರೆ ಅವರ ಮಾಹಾತ್ಮ್ಯ ವಿದಿತವಾಗುವುದು. ಅಂದಿನಿಂದ ಇಂದಿನವರೆಗೆ ಬಸವಣ್ಣನವರನ್ನು ಕುರಿತು ಗ್ರಂಥರಚನೆಯಾಗುತ್ತಲೇ ಇದೆ. ಹೊಸ ಹೊಸ ಗ್ರಂಥಗಳು ಹುಟ್ಟುತ್ತ ನಡೆದಂತೆ ಹಳೆಯ ಗ್ರಂಥಗಳು ಕಣ್ಮರೆಯಾಗುವುದೂ ನಡೆದಿದೆ. ಈ ಎಲ್ಲ ಗ್ರಂಥಗಳ ಸೂಚಿ ಒಂದೆಡೆಗೆ ದೊರೆತರೆ ಅಭ್ಯಾಸಕ್ಕೂ ಸಂಶೋಧನೆಗೂ ಅಮಿತವಾದ ಸಹಾಯದೊರೆಯುತ್ತದೆ. ಮಹಾತ್ಮಾ ಬಸವಣ್ಣನವರ ವಿಷಯವನ್ನೊಳಗೊಂಡ ಅನೇಕ ಪ್ರಾಚೀನ ಗ್ರಂಥಗಳು ಇನ್ನೂ ತಾಳೆಯೋಲಿಗಳಲ್ಲಿಯೇ ಅಡಗಿವೆ. ಕಳೆದ ಅರ್ಧಶತಮಾನದ ಅವಧಿಯಲ್ಲಿ ಅಚ್ಚಾದ ಕೆಲವು ಗ್ರಂಥಗಳು ಇಂದು ಓದುಗರಿಗೆ ಉಪಲಬ್ಧವಾಗದಂತಾಗಿವೆ. ಈ ಪರಿಸ್ಥಿತಿಯಲ್ಲಿ ಇಂತಹ ಗ್ರಂಥಗಳ ಒಂದು ಕೈಪಿಡಿ ಅತ್ಯವಶ್ಯವಾಗಿ ಬೇಕಾಗಿತ್ತು. ಈ ಕೊರತೆಯನ್ನು ಶ್ರೀಮಾನ್ ಎಸ್. ಆರ್. ಗುಂಜಾಳ, ಎಂ. ಎ., ಎಂ. ಲಿಬ್. ಎಸ್‌ಸಿ. ಅವರ **'ಬಸವ ಸಾಹಿತ್ಯ ದರ್ಪಣ'** ಬಹುಮಟ್ಟಿಗೆ ಪೂರೈಸಿದೆಯೆಂದು ಹೇಳಲು ಸಂತೋಷವೆನಿಸುತ್ತದೆ.

'ಬಸವ ಸಾಹಿತ್ಯದರ್ಪಣ'ದಲ್ಲಿ ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಹಿಂದಿ, ಮರಾಠಿ, ಉರ್ದು, ಇಂಗ್ಲಿಷ್, ಫ್ರೆಂಚ್, ಭಾಷೆಗಳಲ್ಲಿ ರಚಿತವಾದ ಗ್ರಂಥಗಳ ಮಹತ್ವದ ವಿವರಗಳು ನಿರೂಪಿತವಾಗಿವೆ ಕನ್ನಡ ಭಾಷೆಯೊಳಗಿನ ೨೭೩ ಗ್ರಂಥಗಳ ವಿಷಯ ಇಲ್ಲಿ ಉಲ್ಲಿಖಿತವಾಗಿರುವುದನ್ನು ನೋಡಿದರೆ ಈ ಗ್ರಂಥದ ಮಹತ ಸ್ಪಷ್ಟವಾಗುತ್ತದೆ. ವಿಷಯನಿರೂಪಣೆಯಲ್ಲಿ ಶ್ರೀ ಗುಂಜಾಳ ಅವರು ಒಂದು ನೂತನ ಉಪಕ್ರಮವನ್ನು ಆರಂಭಿಸಿರುವರು. ಪ್ರತಿಯೊಂದು ಗ್ರಂಥದ ಶೀರ್ಷಿಕೆ, ಪ್ರಭೇದ, ಕರ್ತೃ, ಕಾಲ, ಪುಟ, ಸ್ಥಳ, ಸಾರ ಇವುಗಳನು ಅತ್ಯಂತ ಶಾಸ್ತ್ರೋಕ್ತವಾದ

ನಿರೂಪಣೆಯನ್ನು ಇಲ್ಲಿ ಕಾಣುತ್ತೇವೆ. ಮಹತ್ವದ ಗ್ರಂಥದ ಸಾರವನ್ನು ತಮ್ಮ ಸ್ವಾಧ್ಯಯನದಿಂದ ನಿರೂಪಿಸಿರುವ ಮೂಲಕ ಈ ಗ್ರಂಥದ ಉಪಯುಕ್ತತೆ ಅಧಿಕ ವಾಗಿದೆ. ಅಲ್ಲದೆ, ಒಂದೇ ವಿಷಯಕ್ಕೆ ಸಂಬಂಧಿಸಿದ ವಿವಿಧ ಆಕರಗಳ ಉಲ್ಲೇಖವನ್ನು ಅಲ್ಲಲ್ಲಿ ಮಾಡಿರುವುದರಿಂದ ಇದರ ಮಹತ್ವವು ಇನ್ನೂ ಹೆಚ್ಚಾಗಿದೆ.

ಶ್ರೀ ಗುಂಜಾಳವರು ಈ ಗ್ರಂಥರಚನೆಗಾಗಿ ಪರಿಶ್ರಮಪಟ್ಟುದನ್ನು ನಾನು ಪ್ರತ್ಯಕ್ಷ ಕಂಡಿದ್ದೇನೆ. ಅವರ ಆಸ್ಥೆ, ಅಧ್ಯಯನ, ಪರಿಶ್ರಮ ಇವು ಸ್ತೋತ್ರಾರ್ಹ-ವಾಗಿವೆ. ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ, ಸಂಶೋಧಕರಿಗೆ **'ಬಸವ ಸಾಹಿತ್ಯ ದರ್ಪಣ'** ಒಂದು ಕೈಗನ್ನಡಿಯಾಗಿದೆ. ಇಂತಹ ಮಹತ್ತರ ಗ್ರಂಥವನ್ನು ಸಿದ್ಧಪಡಿಸಿದ ಶ್ರೀ ಎಸ್. ಆರ್. ಗುಂಜಾಳ ಅವರಿಗೆ ನನ್ನ ಅನಂತ ಅಭಿವಂದನೆಗಳು. ಈ ಗ್ರಂಥವನ್ನು ಪ್ರಕಟಿಸಿದ 'ಬಸವಸಾಹಿತ್ಯಸಮಿತಿ' ಸಮಸ್ತ ಜನತೆಯ ಅಭಿನಂದನೆಗೆ ಪಾತ್ರವಾಗಿದೆ.

**ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್. ಡಿ.**
ಪ್ರಧಾನ ಪ್ರಾಧ್ಯಾಪಕರು, ಕನ್ನಡವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨

ಕಳೆದ ಎಂಟು ಶತಮಾನಗಳಲ್ಲಿ ಬಸವಣ್ಣನವರನ್ನು ಕುರಿತು ಹಲವು ಲೇಖಕರಿಂದ ಹಲವು ವಿಧದ ಸಾಹಿತ್ಯವು ನಾನಾ ಭಾಷೆಗಳಲ್ಲಿ ನಿರ್ಮಾಣವಾಗಿದೆ. ಇದು ಜನ ಮನದ ಮೇಲೆ ಅವರ ಉನ್ನತ ವ್ಯಕ್ತಿತ್ವವು ಬೀರಿದ, ಬೀರುತ್ತಿರುವ ಪ್ರಭಾವ ಮುದ್ರೆಗೆ ಒಂದು ನಿದರ್ಶನವಾಗಿದೆ. ಇಂಥ ಸಾಹಿತ್ಯ ಕೃತಿಗಳ ಇತಿಮಿತಿಗಳನ್ನು ಸಂಗ್ರಹಿಸಿ ಸಂಕಲನರೂಪವಾಗಿ ಪ್ರಕಟಿಸುವುದು ಅವರ ಕುರಿತು ಉತ್ತರೋತ್ತರ ಜಿಜ್ಞಾಸೆಯೂ ಅಭ್ಯಾಸಪ್ರವೃತ್ತಿಯೂ ಹೆಚ್ಚುತ್ತಿರುವ ಈ ಸಮಯದಲ್ಲಿ ಆವಶ್ಯಕವೂ ಔಚಿತ್ಯಪೂರ್ಣವೂ ಆಗಿದೆ. ಈ ಆಗತ್ಯವನ್ನು ಗ್ರಂಥಭಂಡಾರಿ ಶ್ರೀ ಗುಂಜಾಳ ಅವರು ಪರಿಶ್ರಮಪೂರ್ವಕ ರಚಿಸಿದ **'ಬಸವ ಸಾಹಿತ್ಯ ದರ್ಪಣ** (ಭಾಗ ೧)' ದಿಂದ ಕೆಲಮಟ್ಟಿಗೆ ಪೂರೈಸಿದಂತಾಗಿದೆ. ಇದಕ್ಕಾಗಿ ಲೇಖಕರಿಗೆ ಅಭಿನಂದನೆ. ಈ ಗ್ರಂಥ ರಚನೆಗೆ ಪ್ರೋತ್ಸಾಹವಿತ್ತು, ಪ್ರಕಾಶನದ ಹೊಣೆಯನ್ನು ಹೊತ್ತ 'ಬಸವ ಸಮಿತಿ'ಗೆ ಧನ್ಯವಾದಗಳು.

**ಡಾ. ಪಿ. ಬಿ. ದೇಸಾಯಿ, ಬಿ. ಎ. ಡಿ. ಲಿಟ್.**
ಡೈರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

ಕನ್ನಡ ನಾಡಿನ ವಿಭೂತಿ ಪುರುಷರಲ್ಲಿ ಅಗ್ರಗಣ್ಯರಾದ ಬಸವಣ್ಣನವರು ಸ್ವತಃ ವಚನಗಳನ್ನು ರಚಿಸಿ ಧರ್ಮಕ್ಷೇತ್ರದಂತೆ ಸಾಹಿತ್ಯ ಕ್ಷೇತ್ರದಲ್ಲಿಯೂ ಸೀಮಾಪುರುಷ ರೆನಿಸಿದ್ದಾರೆ. ಈ ಎಂಟು ಶತಮಾನಗಳ ಅವಧಿಯಲ್ಲಿ ಅವರ ಉದಾತ್ತ ಜೀವನ, ಆದರ್ಶ ಆಚಾರ, ಉನ್ನತ ವಿಚಾರಗಳನ್ನು ಕುರಿತು ಕನ್ನಡ ನುಡಿಯಲ್ಲಿ ಮೂಡಿರುವ ಕೃತಿಗಳೇ ಸಾವಿರಾರು. ಕತೆ, ಕವಿತೆ, ಪುರಾಣ, ಪ್ರವಚನ, ತತ್ತ್ವನಿರೂಪಣೆ, ಸ್ತೋತ್ರ, ಆಚಾರ ಪರಂಪರೆ, ಇತ್ಯಾದಿ ರೂಪಗಳಿಂದ ಧಾರ್ಮಿಕ ಜೀವನದ ವಿವಿಧ ಮುಖಗಳನ್ನೂ ಒಳಗೊಳ್ಳುವ ಈ ಪ್ರಾಚೀನ ಸಾಹಿತ್ಯ ಕನ್ನಡ ನುಡಿಯ ಮುಡಿಗೆ ಅಲಂಕಾರವಾಗಿದೆಯಷ್ಟೇ ಅಲ್ಲ, ನೆರೆಹೊರೆಯ ಭಾಷೆಗಳಾದ ಮರಾಠಿ, ತೆಲುಗು, ತಮಿಳು, ಉರ್ದು ಭಾಷೆಗಳಲ್ಲೂ ತನ್ನ ಕಾಂತಿಯನ್ನು ಬೆಳಗಿಸಿದೆ; ಈ ಶತಮಾನದಲ್ಲಿ ಆಧುನಿಕ ಸಂಶೋಧಕ ವಿದ್ವಾಂಸರ ಲಕ್ಷ್ಯವನ್ನು ಸೆಳೆದು ಹಿಂದಿ, ಇಂಗ್ಲಿಷ್, ಫ್ರೆಂಚ್ ಭಾಷೆಗಳಲ್ಲಿಯೂ ಪ್ರೌಢ ಲೇಖನಗಳನ್ನು ಪ್ರೇರಿಸಿದೆ.

ಹೀಗೆ ಅಕ್ಷಯ ವಟದಂತೆ ಶಾಖೋಪಶಾಖೆಯಾಗಿ ಹಬ್ಬಿ ಹರಡಿರುವ ಬಸವ ಸಾಹಿತ್ಯದ ಉಪಲಬ್ಧ ಗ್ರಂಥರಾಶಿಯನ್ನೆಲ್ಲ ಶಾಸ್ತ್ರೀಯವಾಗಿ ಸಂಗ್ರಹಿಸಿ, ಅನುಕ್ರಮ ವಾಗಿ ವಿಂಗಡಿಸಿ–ಮುದ್ರಿತಗ್ರಂಥವಿರಲಿ, ಓಲೆಗರಿಪ್ರತಿಯೇ ಇರಲಿ–ಒಂದೊಂದನ್ನು ಕುರಿತ ಗಾತ್ರ, ಪಾತ್ರ, ಕರ್ತೃ, ಕಾಲ, ಹಾಗೂ ವಿಶೇಷಾಂಶಗಳನ್ನು ಸಾಧಾರ-ವಾಗಿಯೂ ಸಾರವತ್ತಾಗಿಯೂ ದಿಕ್ಸೂಚನೆ ಮಾಡುವ ಈ '**ಬಸವ ಸಾಹಿತ್ಯ ದರ್ಪಣ**' ಕನ್ನಡದ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ, ಸಂಶೋಧಕರಿಗೂ ಒಂದು ಅಮೃತಾನ್ನ ಸಂತರ್ಪಣವೇ ಸರಿ. ಇಂಥ ಅಮೌಲ್ಯ ಹಾಗು ಶಾಸ್ತ್ರಶುದ್ಧ ಅಭ್ಯಾಸೋಪಕರಣವನ್ನು ಒದಗಿಸಬೇಕಾದರೆ ನಾಡಿನ ಮೂಲೆ ಮೂಲೆಗಳಲ್ಲೂ ಇರುವ ಗ್ರಂಥಾಲಯಗಳ ಹಾಗು ವಿದ್ವಾಂಸರ ನಿಕಟ ಸಂಪರ್ಕವಿದ್ದವರಿಗೂ ಕಷ್ಟ ಸಾಧ್ಯ. ಇಂತಹ ದುಷ್ಕರ ಉದ್ಯಮವನ್ನು ಕೈಕೊಂಡರೂ, ತಮ್ಮ ಅನನ್ಯ ಶ್ರಮ ದಿಂದಲೂ ಉತ್ಸಾಹದಿಂದಲೂ ಅತ್ಯಂತ ಯಶಸ್ವಿಯಾಗಿ ಅದನ್ನು ನಿರ್ವಹಿಸಿರುವ ನಮ್ಮ ಮಿತ್ರ ಶ್ರೀ ಎಸ್. ಆರ್. ಗುಂಜಾಳವರನ್ನು ನಾಡು ಚಿರಕಾಲ ನೆನಸೀತೆಂದು ನಂಬುತ್ತೇನೆ. ಇವರ ಮುಂದಿನ ಪ್ರಕಟನೆಗಳನ್ನೂ ಉತ್ಸಾಹದಿಂದ ಎದುರು ನೋಡುತ್ತಿದ್ದೇನೆ.

ಡಾ. ಕೆ. ಕೃಷ್ಣಮೂರ್ತಿ, ಎಂ. ಎ., ಪಿಎಚ್.ಡಿ.
ಪ್ರಧಾನ ಪ್ರಾಧ್ಯಾಪಕರು, ಸಂಸ್ಕೃತವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

೪

'ಬಸವ ಸಾಹಿತ್ಯ ದರ್ಪಣ' ಈ ಗ್ರಂಥ ಮಹಾನುಭಾವಿ ಬಸವಣ್ಣನವರ ಹಾಗೂ ಅವರ ಜೀವನ ಸಾಹಿತ್ಯಗಳ ಬಗೆಗೆ ೯ ಭಾಷೆಗಳಲ್ಲಿ ಇದುವರೆಗೆ ರಚಿತವಾದ ೪೧೫ ಕೃತಿಗಳ ಸೂಕ್ಷ್ಮ ಪರಿಚಯವನ್ನು ಒಳಗೊಂಡಿದೆ. ಬಸವಣ್ಣನವರ ಬಗೆಗೆ ಹಾಗೂ ವೀರಶೈವ ಧರ್ಮ, ತತ್ವಜ್ಞಾನ ಹಾಗೂ ಸಾಹಿತ್ಯಗಳ ಬಗೆಗೆ ಅಭ್ಯಾಸ ಅಥವಾ ಸಂಶೋಧನೆ ಮಾಡುವವರಿಗೆ ಈ ಗ್ರಂಥ ಅಮೂಲ್ಯವಾಗಿದೆ. ಈ ಗ್ರಂಥ-ವನ್ನು ಶ್ರೀ ಗುಂಜಾಳ ಅವರು ಅತ್ಯಂತ ಪರಿಶ್ರಮದಿಂದ ತಯಾರಿಸಿದ್ದಾರೆ. ಈ ಕಾರ್ಯದಲ್ಲಿ ಅವರು ತೋರಿದ ಶ್ರದ್ಧೆ ಅತ್ಯಂತ ಶ್ಲಾಘನೀಯವಾದದ್ದು. ಈ ಒಳ್ಳೆಯ ಕಾರ್ಯದಿಂದ ಅವರು ಇಂದಿನ ಹಾಗು ಮುಂಬರುವ ಜನಾಂಗದ ಸಾಹಿತ್ಯ ಜಿಜ್ಞಾಸುಗಳ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಸದಾಶಿವ ಒಡೆಯರ, ಎಂ. ಎ., ಎಲ್‌ಎಲ್. ಬಿ.
ರಜಿಸ್ಟ್ರಾರ್, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೫

ಇದು 'ಬಸವ ಸಾಹಿತ್ಯ ದರ್ಪಣ'ದ ಪ್ರಥಮಭಾಗ. ಈ ಕೃತಿಯಲ್ಲಿ ಬಸವಣ್ಣ-ನಿರ್ಮಿತ ಮತ್ತು ಬಸವಣ್ಣನವರನ್ನು ಕುರಿತ, ಒಂಭತ್ತು ವಿವಿಧ ಭಾಷೆಗಳಲ್ಲಿ ಪ್ರಕಟಿತ ಹಾಗು ಅಪ್ರಕಟಿತ ೪೧೫ ಗ್ರಂಥಗಳ ಪರಿಚಯವನ್ನು ಸಂಗ್ರಹಿಸಲಾಗಿದೆ. ವಿಶ್ವವಿದ್ಯಾಲಯಗಳು ಕೈಕೊಳ್ಳಬೇಕಾದ ಈ ಬೃಹತ್‌ಕಾರ್ಯವನ್ನು ಶ್ರೀ ಎಸ್. ಆರ್. ಗುಂಜಾಳ ಇವರು ಏಕಾಕಿಯಾಗಿ ಇಷ್ಟೊಂದು ಸಮರ್ಥರೀತಿಯಲ್ಲಿ ನಿರ್ವಹಿಸಿದುದು ಸ್ತುತ್ಯವಾದುದು. ಇಂತಹ ಕೃತಿಯು ನೆರೆಹೊರೆಯ ಹೆಚ್ಚು ಪ್ರಗತಿಪರ ಸಾಹಿತ್ಯಗಳಲ್ಲಿಯೂ ನಮಗೆ ತಿಳಿದಂತೆ ಇನ್ನೂ ನಿರ್ಮಾಣವಾದಂತಿಲ್ಲ. ಕನ್ನಡ ಸಾಹಿತ್ಯದಲ್ಲಿಯಂತೂ ಇದು ಮೊಟ್ಟಮೊದಲನೆಯದು. ಶ್ರೀ ಗುಂಜಾಳ ಇವರು ತಮ್ಮ ಈ ಕೃತಿಯಿಂದ ನಮ್ಮೆಲ್ಲರನ್ನು ಉಪಕೃತರನ್ನಾಗಿ ಮಾಡಿದ್ದಾರೆ.

ಸದ್ದಿಲ್ಲದೆ, ಶ್ರದ್ಧೆಯಿಂದ ಮತ್ತು ನಿಷ್ಠೆಯಿಂದ ದುಡಿಯುವ ಅವರ ಕ್ರಿಯಾಶೀಲ ಜೀವನಕ್ಕೆ ಈ ಕೃತಿಯು ಕನ್ನಡಿಯಂತಿದೆ. ಇಂತಹ ಇನ್ನೂ ಅನೇಕ ಕೃತಿಗಳು ಅವರ ಕೈಯಿಂದ ಮೂಡಿ ಬರಲೆಂದು ನಾವು ಹಾರೈಸುತ್ತೇವೆ. ಆ ಭರವಸೆಯನ್ನು ಅವರು ನಮಗೆ ಈಗಾಗಲೇ ಕೊಟ್ಟಿದ್ದಾರೆ.

೪

ಒಟ್ಟಿನಲ್ಲಿ, ಕನ್ನಡ ಸಾಹಿತ್ಯದಲ್ಲಿ ಆಸಕ್ತಿ ಮತ್ತು ಅಭಿರುಚಿ ಇರುವವರೆಲ್ಲರಿಗೂ ಶ್ರೀ ಗುಂಜಾಳ ಇವರ ಈ ಕಾರ್ಯ ಅನುಕರಣೀಯವಾಗಿದೆ, ಆದರ್ಶಮಯವಾಗಿದೆ.

ಸ್. ಬಿ. ಶಾಪೇಟ, ಎಂ. ಎ.
ಪರೀಕ್ಷಾ ವಿಭಾಗದ ನಿಯಂತ್ರಣಾಧಿಕಾರಿಗಳು,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೬

ತಾವು ಕಳುಹಿದ 'ಬಸವ ಸಾಹಿತ್ಯ ದರ್ಪಣ' ಎಂಬ ಹಿರಿಯ ಹೊತ್ತಗೆ ತಲುಪಿತು. ಶ್ರದ್ಧೆ, ಪರಿಶ್ರಮ, ಗ್ರಂಥಾಲಯ ಶಾಸ್ತ್ರದ ನವೀನ ಶಾಸ್ತ್ರೀಯ ದೃಷ್ಟಿಯ ಪರಿಪಾಕ, ಈ ಮೂರೂ ಸುಗುಣಗಳ ಫಲವೆ ಈ ಗ್ರಂಥ ಎಂದು ನನಗೆ ಕಂಡಿತು.

ಈ ಬಗೆಯ ಗ್ರಂಥಗಳ ಅಪೂರ್ವತೆ, ಮಹತ್ತ್ವ ಇದು ಸಾಮಾನ್ಯವಾಗಿ ಅನೇಕರಿಗೆ ತಿಳಿಯಲಾರದು. ಒಂದು ವಿಷಯವನ್ನು ಕುರಿತು ಆಮೂಲಾಗ್ರವಾಗಿ ವ್ಯಾಸಂಗ ಮಾಡಬೇಕೆಂದಾಗ ಅದಕ್ಕೆ ಬೇಕಾಗುವ ಗ್ರಂಥಗಳು ಎಷ್ಟಿವೆ? ಎಲ್ಲಿ ಸಿಕ್ಕಬಹುದು? ಇತ್ಯಾದಿ ಮಾತುಗಳೊಡನೆ ಗ್ರಂಥಸ್ಥ ವಿಷಯದ ಸ್ವಲ್ಪ ಪರಿಚಯ-ವನ್ನೂ ಒಳಗೊಳ್ಳುವ '**ಬಸವ ಸಾಹಿತ್ಯ ದರ್ಪಣ**'ದಂತಹ ಅಭ್ಯಾಸಮಾರ್ಗ-ದರ್ಶಿಕೆಗಳ ಹಿರಿಮೆಯನ್ನು ಎಷ್ಟೆಂದು ಹೇಳಬೇಕು?

ಕರ್ಣಾಟ ಸಂಸ್ಕೃತಿಯ ವ್ಯಾಸಂಗಿಗಳಿಗೂ, ವೀರಶೈವ ಧರ್ಮದ ಶ್ರದ್ಧಾ-ವಂತರು, ಅಭ್ಯಾಸಿಗಳು ಆದವರಿಗೂ, ತಮ್ಮ ಈ ಗ್ರಂಥವು ಒಂದು ಕೈಗನ್ನಡಿ ಯಾಗುವುದೆಂಬಲ್ಲಿ ಸಂದೇಹವಿಲ್ಲ.

ನಿಮ್ಮಿಂದ ಇಂತಹ ವ್ಯಾಸಂಗ-ಮಾರ್ಗದರ್ಶಿಕೆಗಳು. ಇನ್ನೂ ವಿವಿಧ ಪ್ರಕಾರದುವು ಪ್ರಕಟವಾಗಿ, ಸತ್ಯಾನ್ವೇಷಣೆಯ ದಾರಿಯ ಕೈದೀಪಗಳನ್ನು ಪೂರಯಿಸಿದ ಶ್ರೇಯಸ್ಸು ನಿಮ್ಮದಾಗಲಿ, ಎಂದು ಹಾರಯಿಸುವ ನಿಮ್ಮ ಹಿತೈಷಿ,

ಶಂ. ಬಾ. ಜೋಶಿ
ಸಾಧನಕೇರಿ, ಧಾರವಾಡ

೭

ಇಂದಿನ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ '**ಬಸವ ಸಾಹಿತ್ಯದರ್ಪಣ**' ಅತ್ಯಪೂರ್ವವಾದ ಸಾಹಸ, ನವೀನಸಿದ್ಧಿ. 'ಗ್ರಂಥಭಾಂಡಾರಿ' ಶ್ರೀ ಎಸ್. ಆರ್. ಗುಂಜಾಳ .ಅವರೇ ಇಂತಹ ಸಾಹಸಕ್ಕೆ ಕೈಹಾಕಬಹುದಲ್ಲದೆ, ಉಳಿದವರಿಗೆ ಇಂತಹ ಕಾರ್ಯ ಅಸಾಧ್ಯವಲ್ಲವಾದರೂ ಅತ್ಯಂತ ದುಷ್ಕರವೆಂದೇ ಹೇಳಬೇಕು. ಅವರಿಗೆ ನಾಡೆಲ್ಲ ಉಪಕೃತ.

ನಾಲ್ಕುನೂರು ಹತ್ತು ಪುಟಗಳ ಪರಿಮಿತಿಯುಳ್ಳ ಈ ಗ್ರಂಥದಲ್ಲಿ ಬಸವಣ್ಣನವರ ಮತ್ತು ಬಸವಣ್ಣನವರನ್ನು ಕುರಿತು ಇರುವ ನಾಲ್ಕುನೂರು ಹದಿನೈದು ಗ್ರಂಥಗಳ ಎಲ್ಲ ಬಗೆಯ ವಿಹಂಗಮ ಅವಲೋಕನವಿದೆ. ಗ್ರಂಥಕರ್ತ ಮೊದಲು-ಗೊಂಡು, ಗ್ರಂಥಗಳ ಸಾರಾಂಶವನ್ನು ಒಳಗೊಂಡಿರುವ ಇಂತಹ ಗ್ರಂಥಕ್ಕೆ ಅವಶ್ಯ-ವಾದ ವಸ್ತುಸಾಮಗ್ರಿಯನ್ನು ಒದಗಿಸಿಕೊಳ್ಳುವುದು ಸಾಮಾನ್ಯರ ಹವಣವಲ್ಲ. ಈ ಗ್ರಂಥಕ್ಕಾಗಿ ಸೇವೆ ಸಲ್ಲಿಸಿದ ಮೂರು ವರ್ಷಗಳ ಅವಧಿಯ ವಸ್ತುಸಂಗ್ರಹ ಪಂಡಿತರ ಪ್ರಪಂಚವನ್ನೂ ಬೆರಗುಗೊಳಿಸುವಂತಿದೆ. ಈ ಸಂಗ್ರಹ ಕಾರ್ಯದಲ್ಲಿ, ಗ್ರಂಥಕರ್ತ-ರಿಗುಂಟಾದ ಎಡೆ-ತಡೆಗಳು ಕಠಿಣ ಸಮಸ್ಯೆಗಳು ಅವರ ಅನುಭವಕ್ಕೇ ವೇದ್ಯ. 'ವಿದ್ವಜ್ಜನರ ಪರಿಶ್ರಮ ವಿದ್ವಾಂಸರಿಗೇ ಗೊತ್ತು' ಎಂಬ ಮಾತನ್ನು ನಾವಿಲ್ಲಿ ನೆನಿಸಿಕೊಳ್ಳಬಹುದು.

ಸುಮಾರು ಎಂಟು ಶತಮಾನಗಳ ಅವಧಿಯಲ್ಲಿ 'ದ್ವಿತೀಯ ಶಂಭು'ವೆನಿಸಿದ ಬಸವಣ್ಣನವರ ವಿಷಯಕವಾಗಿ ಇಷ್ಟೊಂದು ಗ್ರಂಥಗಳು ಇಷ್ಟೊಂದು ಭಾಷೆಯಲ್ಲಿ ಹುಟ್ಟಿರಬಹುದೆಂದು ಎಂಥವರ ಕನಸುಮನಸಿನಲ್ಲಿಯೂ ಬಂದಿರಲಿಕ್ಕಿಲ್ಲ. ಈ ಗ್ರಂಥಗಳ ಸೃಷ್ಟಿಗೆ ಕಾರಣಪುರುಷರಾದ ಬಸವಣ್ಣನವರ ದಿವ್ಯ–ಭವ್ಯ ಮೂರ್ತಿ ಸಹಜೋಜ್ಜ್ವಲವಾಗಿದ್ದರೂ 'ದರ್ಪಣ'ದಲ್ಲಿ ಹೊಳೆವ ಆ ತೇಜೋಮೂರ್ತಿ ಮತ್ತೊಂದು ನವ್ಯ ಕಳೆಯಿಂದ ಅಲಂಕಾರವಾಗಿ ಪ್ರತಿಬಿಂಬಿಸಿದ್ದಾನೆ. ಈ ವಿಷಯದಲ್ಲಿ ಬಸವ ಸಮಿತಿಯ ಅಧ್ಯಕ್ಷರಾದ **ಶ್ರೀ ಬಿ. ಡಿ. ಜತ್ತಿಯವರು** ಮುನ್ನುಡಿಯಲ್ಲಿ ಹೇಳುವ ಮಾತು ಅತ್ಯಂತ ಗಮನಾರ್ಹ. ಕನ್ನಡ ಸಾಹಿತ್ಯದಲ್ಲಿ ಬೇರೊಬ್ಬ ಮಹಾತ್ಮನನ್ನು ಕುರಿತು ಇಷ್ಟೊಂದು ವಿಪುಲವಾದ ಗ್ರಂಥರಾಶಿ ಹುಟ್ಟಿದೆಯೇ ಎಂಬ ಪ್ರಶ್ನೆಗೆ ಯಾರು ಏನು ಉತ್ತರ ಕೊಡಬಲ್ಲರು ? 'ಇಲ್ಲ'ವೆಂದೇ ಅಲ್ಲವೇ ?

ಗ್ರಂಥಕರ್ತರು ಸೂಚಿಸುವಂತೆ ಬಸವಣ್ಣನವರನ್ನುಕುರಿತು ಇನ್ನೂ ಹಲಕೆಲವು ಅಚ್ಚಾದ ಮತ್ತು ಅಚ್ಚಾಗದ ಗ್ರಂಥಗಳು ಇರಬಹುದು. ಇಂದಿನ ಪ್ರಯತ್ನಕ್ಕೆ ಮೀರಿದ ಮಾತು ನಾಳಿನ ಪ್ರಯತ್ನಕ್ಕೆ ನಿಲುಕಬಹುದು. ಇದಕ್ಕಾಗಿ ಈ 'ದರ್ಪಣ'

ಕಾರರು ಮನದಲ್ಲಿ ಸಂಕೋಚಪಟ್ಟುಕೊಳ್ಳಲು ಎಳ್ಳಷ್ಟು ಕಾರಣವೂ ಇಲ್ಲ. ಈ ಕೊರತೆಯನ್ನು ಶ್ರೀ ಗುಂಜಾಳರೇ ನೀಗಬಹುದು, ಅಥವಾ ಸಮಾನ ಸಾಹಸಿಗಳಾದ ಮತ್ತೊಬ್ಬರು ನೀಗಬಹುದು. ಸಾಹಿತ್ಯಕ್ಷೇತ್ರದಲ್ಲಿ ಯಾರು ಸೇವೆ ಮಾಡಿದರೇನು, ಅದು ಪುಣ್ಯಸೇವೆಯಲ್ಲವೇ ?

ಈ ಲೇಖಕರು ಇದೇ 'ಬಸವ ಸಾಹಿತ್ಯ ದರ್ಪಣ'ದ ದ್ವಿತೀಯ ಭಾಗವನ್ನು ಹೊರತರುವವರಿದ್ದಾರೆ. ಈ ಮುಂದಿನ ಕಾರ್ಯವನ್ನು, ಇನ್ನೂ ಮುಂದಿನ ಕಾರ್ಯಗಳನ್ನು 'ದ್ವಿಗುಣಿತವಲ್ಲ' ಶತಗುಣಿತಶಕ್ತಿಯಿಂದ ಅವರು ಮಾಡಲೆಂದು ದೇವರಲ್ಲಿ ಪ್ರಾರ್ಥನೆ.

ಇದೇ ಕಾಲಕ್ಕೆ, ಬಸವ ಸಮಿತಿ ಇಂತಹ ಉದಯೋನ್ಮುಖವಾದ ಮಹಾ-ಕಾರ್ಯಗಳನ್ನು ಕೈಕೊಂಡು, ಸಮರ್ಥವಾಗಿ ನಿರ್ವಹಿಸಿ, ಕನ್ನಡನಾಡಿಗೆ, ನುಡಿಗೆ, ಜನತೆಗೆ ನೂತನ ಚೈತನ್ಯವನ್ನು ನೀಡಿ ಕೃತಾರ್ಥವಾಗುತ್ತಿದೆಯಲ್ಲವೇ ? ನಾವೆಲ್ಲ ಈ ಮಹಾಕಾರ್ಯಕ್ಕೆ ಕೃತಜ್ಞರು.

ಪ್ರೊ. ಎಸ್. ಎಸ್. ಭೂಸನೂರಮಠ, ಎಂ. ಎ.
ವೀರಶೈವ ತತ್ತ್ವಜ್ಞಾನ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೮

ಬಸವಣ್ಣನವರನ್ನು ಕುರಿತು ಅವರ ಸಮಕಾಲೀನ ಶರಣರು ನಿರೂಪಿಸಿದ ವಚನಗಳನ್ನು ಮೊದಲುಗೊಂಡು, ಅನಂತರದ ಕವಿಗಳ ಕಾವ್ಯಗಳನ್ನೂ ಒಳಗೊಂಡು, ಇಂದಿನವರೆಗೂ ವಿವಿಧ ದೃಷ್ಟಿಕೋನಗಳಿಂದ ಅವರ ಬಗೆಗೆ ಗ್ರಂಥ ರಚನೆ ನಡೆಯುತ್ತಲೇ ಇದೆ. ಬೇರೆ ಹತ್ತಾರು ಭಾಷೆಗಳಲ್ಲಿಯೂ ಮೌಲಿಕವಾಗಿ ಹಾಗು ಅನುವಾದಿತ ಕೃತಿಗಳ ರೂಪದಲ್ಲಿ ಅವರ ವ್ಯಕ್ತಿತ್ವದ ಮಹತಿಯನ್ನರಿಯುವ ಕುತೂ-ಹಲ ಬೆಳೆಯುತ್ತ ಬಂದಿದೆ. ಆಧುನಿಕ ಯುಗದ ಕೆಲವೊಂದು ಸಮಸ್ಯೆಗಳಿಗೆ ಬಸವಣ್ಣನವರ ಜೀವನದೃಷ್ಟಿ-ಸಾಹಿತ್ಯಸೃಷ್ಟಿಗಳಲ್ಲಿ ತಕ್ಕ ಪರಿಹಾರ ದೊರೆಯುತ್ತಿರುವುದೇ ಈ ಜಿಜ್ಞಾಸೆಗೆ ಮುಖ್ಯ ಕಾರಣವಾಗಿದೆಯೆನ್ನಬಹುದು.

ಹೀಗೆ ಕನ್ನಡದಲ್ಲಿ ಹಾಗೂ ಉಳಿದ ಭಾಷೆಗಳಲ್ಲಿ ಬಸವಣ್ಣನವರನ್ನು ಕುರಿತು ಬರೆದ ಎಲ್ಲ ಪ್ರಕಾರದ ಗ್ರಂಥಗಳ ಪರಿಚಯಾತ್ಮಕ ಸೂಚಿಯನ್ನು ವ್ಯವಸ್ಥಿತವಾಗಿಯೂ

ವೈಜ್ಞಾನಿಕವಾಗಿಯೂ ಮೊಟ್ಟಮೊದಲಿಗೆ ಅಣಿಗೊಳಿಸಿಕೊಟ್ಟ ಶ್ರೇಯಸ್ಸು ಶ್ರೀ ಗುಂಜಾಳ ಅವರಿಗೆ ಸಲ್ಲುತ್ತಿದೆ ಅಪಾರವಾದ ಶ್ರದ್ಧೆಯಿಂದಲೂ ಅಪರಿಮಿತವಾದ ಪರಿಶ್ರಮದಿಂದಲೂ ಅತ್ಯಂತ ಯಶಸ್ವಿಯಾಗಿ ಅವರು ತಮ್ಮ ಈ ಕಾರ್ಯವನ್ನು ನಿರ್ವಹಿಸಿದ್ದಾರೆ.

ಈ 'ದರ್ಪಣದ' ಎರಡನೆಯ ಭಾಗದಲ್ಲಿ ಬಸವಣ್ಣನವರನ್ನು ಕುರಿತು ಬಂದಿರುವ ಸರ್ವಲೇಖನಗಳ ಪರಿಚಯವನ್ನು ಸಂಕಲಿಸಿಕೊಡುವ ಯೋಜನೆಯನ್ನೂ ಅವರು ಹಾಕಿಕೊಂಡಿದ್ದಾರೆ. ಆ ಕಾರ್ಯವೂ ಬೇಗ ಪೂರೈಸಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ಈ ಕಾರ್ಯಕ್ಕೆ ಅವರು ಅತ್ಯಂತ ಸಮರ್ಥರೆಂಬುದನ್ನು ಈ ಮೊದಲ ಹೊತ್ತಗೆಯೇ ಸಾರಿ ಹೇಳುತ್ತಿದೆ.

'**ಬಸವ ಸಾಹಿತ್ಯ ದರ್ಪಣ**'ವನ್ನು ಕನ್ನಡಿಗರ ಕೈಗಿತ್ತು ಶ್ರೀ ಗುಂಜಾಳ ಅವರು ಅಭ್ಯಾಸಿಗಳ, ಲೇಖಕರ ಹಾಗು ಸಂಶೋಧಕರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇಂಥ ಕೃತಿಗೆ ಪ್ರೇರಣೆಯನ್ನೊದಗಿಸಿದ 'ಬಸವ ಸಮಿತಿ'ಗೂ ನಮ್ಮ ಅಭಿನಂದನೆಗಳು.

ಚೆನ್ನವೀರ ಕಣವಿ, ಎಂ. ಎ.
ಡೈರೆಕ್ಟರ, ಪ್ರಕಟಣಾವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

